

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ

ಸಲ್ಲಿಸುತ್ತಿರುವ

ಪಿಎಚ್. ಡಿ ಅಧ್ಯಯನದ ಮಹಾಪ್ರಬಂಧ

# ಮೈಲಾರಲಿಂಗನ ಆಚರಣೆ – ಒಂದು ಸಾಂಸ್ಕೃತಿಕ ಅಧ್ಯಯನ

ಸಂಶೋಧಕರು

ನಾಗರಾಜ ಹೊಸೂರಕರ್

ಮಾರ್ಗದರ್ಶಕರು

ಪ್ರೊ. ಡಿ. ಲಿಂಗಯ್ಯ





ಎಂ. ವಿ. ಸೀ. ಸ್ನಾತಕೋತ್ತರ ಸಂಶೋಧನ ಸಂಸ್ಥೆ

ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ

ಬೆಂಗಳೂರು

೨೦೦೮



ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ

ಸಲ್ಲಿಸುತ್ತಿರುವ

ಪಿಎಚ್. ಡಿ ಅಧ್ಯಯನದ ಮಹಾಪ್ರಬಂಧ

# ಮೈಲಾರಲಿಂಗನ ಆಚರಣೆ – ಒಂದು ಸಾಂಸ್ಕೃತಿಕ ಅಧ್ಯಯನ

ಸಂಶೋಧಕರು

ನಾಗರಾಜ ಹೊಸೂರಕರ್

ಮಾರ್ಗದರ್ಶಕರು

ಪ್ರೊ. ಡಿ. ಲಿಂಗಯ್ಯ



ಎಂ. ವಿ. ಸೀ. ಸ್ನಾತಕೋತ್ತರ ಸಂಶೋಧನ ಸಂಸ್ಥೆ

ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ

ಬೆಂಗಳೂರು

೨೦೦೮

# ಘೋಷಣಾ ಪತ್ರ

ಪ್ರೊ. ಡಿ. ಲಿಂಗಯ್ಯ ಅವರ ಮಾರ್ಗದರ್ಶನದಲ್ಲಿ ಮೈಲಾರಲಿಂಗನ ಆಚರಣೆ – ಒಂದು ಸಾಂಸ್ಕೃತಿಕ ಅಧ್ಯಯನ ಎಂಬ ವಿಷಯವನ್ನು ಕುರಿತು ನಾನು ಸಂಶೋಧನಾ ಅಧ್ಯಯನ ನಡೆಸಿ ೨೦೦೮ನೇ ಸಾಲಿನ ಪಿಎಚ್. ಡಿ. ಪದವಿಗಾಗಿ ಮಹಾಪ್ರಬಂಧವನ್ನು ಸಿದ್ಧಪಡಿಸಿದ್ದು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನದ ಎಂ. ವಿ. ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಸಲ್ಲಿಸುತ್ತಿದ್ದೇನೆ.

ಈ ಮಹಾಪ್ರಬಂಧದ ವಿಷಯ ಅಥವಾ ಇದರ ಯಾವುದೇ ಭಾಗವು ಈ ಮೊದಲು ಬೇರಾವುದೇ ಪದವಿಗಾಗಲೀ ಅಥವಾ ಇತರೆ ಉದ್ದೇಶಗಳಿಗಾಗಲೀ, ಬಿಡಿಯಾಗಿ ಇಲ್ಲವೇ ಇಡಿಯಾಗಿ ಪ್ರಕಟವಾಗಿಲ್ಲವೆಂದು ನಾನು ಈ ಮೂಲಕ ಘೋಷಿಸುತ್ತೇನೆ.

ಸ್ಥಳ : ಬೆಂಗಳೂರು

ದಿನಾಂಕ : ೧೬-೧೦-೨೦೦೮

ಸಂಶೋಧನಾ ವಿದ್ಯಾರ್ಥಿ

(ನಾಗರಾಜ ಹೊಸೂರಕರ್)

# ದೃಢೀಕರಣ ಪತ್ರ

**ಶ್ರೀ ನಾಗರಾಜ ಹೊಸೂರಕರ್** ಅವರು ನನ್ನ ಮಾರ್ಗದರ್ಶನದಲ್ಲಿ **ಮೈಲಾರಲಿಂಗನ ಆಚರಣೆ – ಒಂದು ಸಾಂಸ್ಕೃತಿಕ ಅಧ್ಯಯನ** ಎಂಬ ವಿಷಯವನ್ನು ಕುರಿತು ಸಂಶೋಧನಾ ಅಧ್ಯಯನ ನಡೆಸಿ ೨೦೦೮ನೇ ಸಾಲಿನ ಪಿಎಚ್. ಡಿ. ಪದವಿಗಾಗಿ ಮಹಾಪ್ರಬಂಧವನ್ನು ಸಿದ್ಧಪಡಿಸಿದ್ದು **ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನದ ಎಂ. ವಿ. ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ** ಸಲ್ಲಿಸಿದ್ದಾರೆ.

ಪ್ರಸ್ತುತ ವಿಷಯವನ್ನು ಕುರಿತು ಇಡಿಯಾಗಿ ಅಥವಾ ಬಿಡಿಯಾಗಿ ಎಲ್ಲಿಯೂ ಪ್ರಕಟವಾಗಿಲ್ಲ. ಇಲ್ಲಿ ನಿರೂಪಿಸಿರುವ ಅಂಶಗಳು ಸಂಶೋಧನಾತ್ಮಕವಾಗಿದ್ದು, ಈ ಪ್ರಬಂಧವು ಪಿಎಚ್. ಡಿ. ಪದವಿಗೆ ಅರ್ಹವಾಗಿದೆ ಎಂದು ನಾನು ದೃಢೀಕರಿಸುತ್ತೇನೆ.

ಸ್ಥಳ : ಬೆಂಗಳೂರು
ದಿನಾಂಕ : ೧೬-೧೦-೨೦೦೮

ಮಾರ್ಗದರ್ಶಕರು

(ಪ್ರೊ. ಡಿ. ಲಿಂಗಯ್ಯ)

# ಕೃತಜ್ಞತೆಗಳು

ಮೊದಲಿನಿಂದಲೂ ಜಾನಪದವನ್ನು ಕುರಿತು ವಿಶೇಷ ಆಸಕ್ತಿಯನ್ನು ಹೊಂದಿದ್ದ ನನಗೆ ಹಂಪಿ ಕನ್ನಡ ವಿಶ್ವವಿದ್ಯಾನಿಲಯದಲ್ಲಿ ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನದ ಎಂ. ವಿ. ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಪ್ರಾಚೀನ ದೈವವಾದ ಮೈಲಾರಲಿಂಗನ ಆಚರಣೆಗಳನ್ನು ಕುರಿತು ಅಧ್ಯಯನ ಮಾಡುವ ಸದವಕಾಶ ದೊರೆತಿರುವುದು ನನ್ನ ಭಾಗ್ಯವೆನ್ನಬಹುದು.

ಭಾರತದ ಪ್ರಾಚೀನ ಸಂಸ್ಕೃತಿಯ ಭಾಗವಾಗಿರುವ ಮೈಲಾರಲಿಂಗ ಕೇವಲ ಯಾವುದೇ ಒಂದು ವರ್ಗದ ದೈವವಾಗಿ ಉಳಿದಿಲ್ಲ. ಈಗಿನ ಮಹಾರಾಷ್ಟ್ರ, ಕರ್ನಾಟಕ ಹಾಗೂ ಆಂಧ್ರಪ್ರದೇಶ ರಾಜ್ಯಗಳಲ್ಲಿ ವ್ಯಾಪಕವಾಗಿ ಹರಡಿರುವ ಈ ದೈವದ ಆಚರಣೆಗಳು ಅತ್ಯಂತ ಕುತೂಹಲಕರ ಹಾಗೂ ಅಷ್ಟೇ ನಿಗೂಢ. ಒಂದು ಸಂಪೂರ್ಣ ಭೂಪ್ರದೇಶವನ್ನು ಆವರಿಸಿರುವ ಮೈಲಾರಲಿಂಗನ ಸಂಪ್ರದಾಯದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಕುರುಬ, ಹರಿಜನ ಮೊದಲಾದ ಜನಾಂಗದವರು ಬರುತ್ತಾರೆ. ಕಾಲಕಾಲಕ್ಕೆ ರಾಜ ಮನ್ನಣೆಯನ್ನು ಪಡೆದು ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡು ಬೆಳೆದ ಈ ಸಂಪ್ರದಾಯ ಈಗ ಯಾವುದೋ ಒಂದು ಜನಾಂಗಕ್ಕೆ ಸೀಮಿತವಾಗಿ ಉಳಿದಿಲ್ಲ. ಹೀಗೆ ಸರ್ವವಿಧದಲ್ಲಿಯೂ ವ್ಯಾಪಿಸಲ್ಪಟ್ಟ ಈ ಸಂಪ್ರದಾಯವನ್ನು ಕುರಿತು ನಿರ್ದಿಷ್ಟ ಅವಧಿಯಲ್ಲಿ ಅಧ್ಯಯನ ಮಾಡುವುದು ಕಷ್ಟಸಾಧ್ಯ. ಹೀಗಾಗಿ ಮೈಲಾರದ ಪ್ರಮುಖ ಸ್ಥಾನವೆನಿಸಿಕೊಂಡಿರುವ ಶ್ರೀಕ್ಷೇತ್ರ ಮೈಲಾರದ ಆಚರಣೆಗಳಿಗೆ ಮಹತ್ವ ನೀಡಿ ಅದಕ್ಕೆ ಸಂಬಂಧಿಸಿದ ವಿವರಗಳನ್ನು ಸಂಶೋಧಿಸಿ ಅವುಗಳನ್ನು ಈ ಸಂಶೋಧನಾ ಮಹಾಪ್ರಬಂಧದಲ್ಲಿ ಉಲ್ಲೇಖಿಸಿದ್ದೇನೆ. ಜೊತೆಯಲ್ಲಿ ಪೂರಕವೆನಿಸಬಹುದಾದ ಇತರ ಕ್ಷೇತ್ರಗಳ ಮಾಹಿತಿಯನ್ನು ಸಂಗ್ರಹವಾಗಿ ನೀಡಲಾಗಿದೆ. ಸೀಮಿತ ಸಮಯಾವಕಾಶ ಹಾಗೂ ಪ್ರಬಂಧದ ಮಿತಿಯನ್ನು ಗಮನದಲ್ಲಿರಿಸಿಕೊಂಡು, ಮೈಲಾರ ಸಂಪ್ರದಾಯವನ್ನು ಕುರಿತ ಪ್ರಮುಖ ಅಂಶಗಳನ್ನು ಒಳಗೊಂಡಂತೆ ಸಾಧ್ಯವಿದ್ದಷ್ಟು ಮಾಹಿತಿಗಳನ್ನು ಈ ಮಹಾಪ್ರಬಂಧದಲ್ಲಿ ನೀಡುವ ಪ್ರಾಮಾಣಿಕ ಪ್ರಯತ್ನ ಮಾಡಿದ್ದೇನೆ ಎಂದು ಹೇಳಬಯಸುತ್ತೇನೆ.

ಶಾಲಾಶಿಕ್ಷಕರಾಗಿ ಹಳ್ಳಿಗಳಲ್ಲಿಯೇ ತಮ್ಮ ಸೇವಾವಧಿಯನ್ನು ಪೂರೈಸಿದರೂ, ಮಕ್ಕಳ ವಿದ್ಯಾಭ್ಯಾಸಕ್ಕೆ ಯಾವುದೇ ಕೊರತೆ ಬರದಂತೆ ನೋಡಿಕೊಂಡು ನನ್ನನ್ನು ಈ ಹಂತಕ್ಕೆ ತಂದ ತನ್ನ ಪೂಜ್ಯ ತಂದೆ ತಾಯಿಗಳಿಗೆ ನನ್ನ ಮನಃಪೂರ್ವಕ ನಮನಗಳು.

ನಾನು ಜಾನಪದ ವಿಷಯದಲ್ಲಿ ಅಧ್ಯಯನ ಮಾಡಬಯಸುತ್ತೇನೆ ಎಂದು ಹೇಳಿದಾಗ ಪ್ರೀತಿಯಿಂದ ನನ್ನನ್ನು ತಮ್ಮ ವಿದ್ಯಾರ್ಥಿಯನ್ನಾಗಿ ಸ್ವೀಕರಿಸಿ, ಯಾವುದೇ ಸಮಯದಲ್ಲಿ ಅವರನ್ನು ಸಂಪರ್ಕಿಸಿದರೂ ಆತ್ಮೀಯತೆಯಿಂದ ಬರಮಾಡಿಕೊಂದು, ನನ್ನನ್ನು ಮುನ್ನಡೆಸಿದ ಮಾರ್ಗದರ್ಶಕರಾದ ಹಿರಿಯ ಜಾನಪದ ವಿದ್ವಾಂಸರಾದ ಪ್ರೊ. ಡಿ. ಲಿಂಗಯ್ಯನವರಿಗೆ ನನ್ನ ಅನಂತಾನಂತ ವಂದನೆಗಳು.

ನಾನು ಮೈಲಾರಲಿಂಗನನ್ನು ಕುರಿತು ಅಧ್ಯಯನ ಮಾಡುತ್ತಿದ್ದೇನೆ ಎಂದು ಹೇಳಿದಾಗ ಆರಂಭದಿಂದಲೂ ಸಾಕಷ್ಟು ಮಾಹಿತಿಯನ್ನು ಒದಗಿಸಿ ನನ್ನ ಸಂಶೋಧನೆಗೆ ನೆರವನ್ನು ನೀಡಿ, ಕಾಲಕಾಲಕ್ಕೆ ನನ್ನ ಸಂಶೋಧನೆಯ ಪ್ರಗತಿಯ ಬಗ್ಗೆ ವಿಚಾರಿಸುತ್ತ ಪ್ರೋತ್ಸಾಹ ನೀಡಿದ ಕರ್ನಾಟಕ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗದ ಮುಖ್ಯಸ್ಥೆ ಡಾ. ಶಾಲಿನಿ ರಘುನಾಥರವರಿಗೆ ಹಾಗೂ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಪ್ರವಾಚಕ ಡಾ. ರಾಘವೇಂದ್ರ ಕುಲಕರ್ಣಿಯವರಿಗೆ ನನ್ನ ಕೃತಜ್ಞತೆಗಳು.

ಮಾಹಿತಿ ಸಂಗ್ರಹದ ದೃಷ್ಟಿಯಿಂದ ನಾನು ಮೈಲಾರಕ್ಷೇತ್ರ ಹಾಗೂ ದೇವರಗುಡ್ಡಕ್ಕೆ ಭೇಟಿ ನೀಡಿದಾಗಲೆಲ್ಲ ನನಗೆ ಸಾಕಷ್ಟು ಸಹಾಯ, ಸಹಕಾರ ನೀಡಿದ ಮೈಲಾರದ ಗುರುಗಳಾದ ಶ್ರೀ ಶ್ರೀ ವೆಂಕಪ್ಪಯ್ಯ ಒಡೆಯರ್‌ರವರಿಗೆ, ಅವರ ಸೋದರ ಸಂಬಂಧಿಗಳಾದ ಶ್ರೀ ಆನಂದಗಿರಿ ಒಡೆಯರ್‌ರವರಿಗೆ, ಶ್ರೀ ತಮ್ಮಣ್ಣ ಒಡೆಯರ್ ಅವರಿಗೆ, ದೇವರಗುಡ್ಡದ ಮುಖ್ಯ ಅರ್ಚಕರಾದ ಶ್ರೀ ಪ್ರಕಾಶರವರಿಗೆ, ಚೌಡದಾನಪುರದ ವಿರಕ್ತ ಮಠದ ಸ್ವಾಮೀಜಿಗಳಿಗೆ, ಮೈಲಾರ, ದೇವರಗುಡ್ಡ ಹಾಗೂ ಮೊರಗೆರೆ ಗ್ರಾಮದ ಗ್ರಾಮಸ್ಥರಿಗೆ, ನನ್ನ ಹೃತ್ಪೂರ್ವಕ ನಮನಗಳು.

ನನ್ನ ಸಂಶೋಧನೆ ಆರಂಭವಾದಾಗ ಆತ್ಮೀಯತೆಯಿಂದ ತಮ್ಮಲ್ಲಿಗೆ ಬರಮಾಡಿಕೊಂಡು, ಸೋದರನಂತೆ ಉಪಚರಿಸಿ ಮೈಲಾರ ಸಂಪ್ರದಾಯವನ್ನು ಕುರಿತು ವಿವರಗಳನ್ನು ನೀಡಿ ತಮ್ಮ ಮೈಲಾರದ ಜಾತ್ರೆಗಳು ಮಹಾಪ್ರಬಂಧದ ಪ್ರತಿಯೊಂದನ್ನು ನೀಡಿ ಉಪಕರಿಸಿದ ಡಾ. ಎಂ. ಎನ್. ವೆಂಕಟೇಶ ಅವರಿಗೆ, ಕಾರಣಿಕದ ಸಂದರ್ಭದಲ್ಲಿ

ಪರಿಚಿತರಾಗಿ ಆತ್ಮೀಯರಾದ ನನ್ನ ಅಧ್ಯಯನಕ್ಕೆ ಬೇಕಾಗಿದ್ದ ಸುಮಾರು ೩೦೦ಕ್ಕೂ ಹೆಚ್ಚು ಛಾಯಾಚಿತ್ರಗಳನ್ನು ತಮ್ಮ ಕ್ಯಾಮರಾದಲ್ಲಿ ಸೆರೆಹಿಡಿದುಕೊಟ್ಟು ನನ್ನ ಸಂಶೋಧನೆಗೆ ಹೊಸರೂಪಕೊಟ್ಟ ಸನ್ಮಿತ್ರ ಶ್ರೀ ಮಂಜುನಾಥರವರಿಗೆ, ದೂರವಾಣಿಯ ಮೂಲಕ ಪರಿಚಿತರಾಗಿ, ಭೇಟಿಯಾದಾಗ ಆತ್ಮೀಯರಾಗಿ, ಹಿತೈಷಿಗಳಾಗಿ ಮಾರ್ಗದರ್ಶನ ನೀಡಿದ ಡಾ. ರಾಜಗೋಪಾಲರವರಿಗೆ, ಪೂರಕ ಮಾಹಿತಿ ನೀಡಿದ "ಶ್ರೀಮೈಲಾರಲಿಂಗೇಶ್ವರ ದಿವ್ಯಚರಿತಾಮೃತ" ಗ್ರಂಥಕರ್ತೃ ಶ್ರೀ ಕೃಷ್ಣಪ್ಪನವರಿಗೆ ನಾನು ಕೃತಜ್ಞ.

ನನಗೆ ಅವಶ್ಯವಿದ್ದ ಛಾಯಾಚಿತ್ರಗಳನ್ನು ಕಂಪ್ಯೂಟರ್‌ನಲ್ಲಿ ಅಳವಡಿಸಿ ತಾಂತ್ರಿಕ ನೆರವು ನೀಡಿದ ಚಿ. ಅಜಯ್‌ನಿಗೆ, ಗ್ರಂಥಾಲಯದಿಂದ ತಮ್ಮ ಹೆಸರಿನಲ್ಲಿ ಪುಸ್ತಕಗಳನ್ನು ಒದಗಿಸಿಕೊಟ್ಟ ಆತ್ಮೀಯ ಸಹೋದ್ಯೋಗಿ ಶ್ರೀ ಪಿ. ಶ್ಯಾಮಪ್ರಸಾದ್‌ರವರಿಗೆ, ಸದಾಕಾಲ ನನ್ನೊಂದಿಗೆ ಸಂಪರ್ಕದಲ್ಲಿದ್ದು "ಎಲ್ಲಿಗೆ ಬಂತೋ ನಿನ್ನ ಪಿಎಚ್. ಡಿ" ಎಂದು ಆತ್ಮೀಯವಾಗಿ ವಿಚಾರಿಸುತ್ತ ತಮಗೆ ಗೊತ್ತಿದ್ದ ಮಾಹಿತಿಯ ಜೊತೆಗೆ ತಮ್ಮ ಬಂಧುಗಳಿಂದಲೂ ಮಾಹಿತಿಯನ್ನು ಒದಗಿಸಿಕೊಟ್ಟ ಮಿತ್ರ ಶ್ರೀ ಡಿ. ಎನ್. ಗುತ್ತಲ್ ಅವರಿಗೆ, ತಮ್ಮಲ್ಲಿಗೆ ಬರಮಾಡಿಕೊಂಡು ಊರವರಿಂದ ಮಾಹಿತಿ ಒದಗಿಸಿಕೊಟ್ಟ ಮೊರಗೆರೆಯ ಆತ್ಮೀಯ ಮಿತ್ರ ಶ್ರೀ ಕೆ. ಎಸ್. ಮಲ್ಲಿಕಾರ್ಜುನರವರಿಗೆ, ತಮ್ಮ ಕಾರ್ಯಕ್ಕೆ ತೊಂದರೆಯಾದರೂ "ನಿಧಾನವಾದರೂ ಪರವಾಯಿಲ್ಲ" ಎಂದು ಹೇಳುತ್ತ ಪ್ರೋತ್ಸಾಹಿಸಿದ ಜನಪದ ಪ್ರಕಾಶನದ ಶ್ರೀ ಮಹಿಪಾಲ ಅವರಿಗೆ, ಪತ್ರಿಕೆಗಳಲ್ಲಿ, ರೇಡಿಯೋದಲ್ಲಿ, ದೂರದರ್ಶನದಲ್ಲಿ ಬರುತ್ತಿದ್ದ ಮೈಲಾರವನ್ನು ಕುರಿತ ವರದಿಗಳನ್ನು ಹಾಗೂ ಕಾರ್ಯಕ್ರಮಗಳನ್ನು ಕುರಿತು ಮಾಹಿತಿ ಒದಗಿಸಿ ನೆರವನ್ನಿತ್ತಮಿತ್ರರಾದ ಶ್ರೀ ರವೀಶ ಹಾಗೂ ಫಣಿಯವರಿಗೆ ನನ್ನ ಕೃತಜ್ಞತೆಗಳು.

ನನ್ನ ಸಂಶೋಧನೆಯ ಜೊತೆಗೇ ತನ್ನ ಸಂಶೋಧನೆಯನ್ನು ಪ್ರಾರಂಭಿಸಿದ್ದ ನನ್ನ ಪತ್ನಿಯ ಪ್ರಬಂಧ ಮಂಡನೆಗೂ ಇದೇ ಸಮಯದಲ್ಲಿ ಸೂಚನೆ ಬಂದಿತ್ತು. ನನಗೋಸ್ಕರ ತನ್ನ ಪ್ರಬಂಧ ಮಂಡನೆಯನ್ನು ಆರು ತಿಂಗಳು ಮುಂದೂಡಿ, ನನ್ನ ಕಾರ್ಯದಲ್ಲಿ ಸಕಲ ರೀತಿಯಿಂದಲೂ ಸಹಕರಿಸಿದ ನನ್ನ ಬಾಳಸಂಗಾತಿ ಜ್ಯೋತಿಗೆ, ನನ್ನ ಸಂಶೋಧನಾ ಪ್ರಬಂಧದ ಪ್ರಗತಿಯ ಬಗ್ಗೆ ವಿಚಾರಿಸುತ್ತ ಪ್ರೋತ್ಸಾಹಿಸುತ್ತಿದ್ದ ಸಹೋದರರಾದ ಶ್ರೀ ಗುರುರಾಜ ಹಾಗೂ ಪ್ರಸನ್ನರಿಗೆ, ಅತ್ತೆಯವರಾದ ಶ್ರೀಮತಿ ರಾಧಾಬಾಯಿಯವರಿಗೆ, ಬಂಧುಗಳಾದ ಶ್ರೀ ಗುರುರಾಜ, ಮಾಯಾ, ಚಿರಂಜೀವಿಗಳಾದ ಸ್ಮಿತಾ ಹಾಗೂ

ಸ್ವಾತಿಯವರಿಗೆ, ನಾನು ಪ್ರಬಂಧ ಬರೆಯುವಾಗ ಮತ್ತು ಬರೆದ ವಿಷಯವನ್ನು ಕಂಪ್ಯೂಟರ್‌ಗೆ ಅಳವಡಿಸುವಾಗ "ಅಪ್ಪಾ, ಪಿಎಚ್. ಡಿ ಬರೀತಿಯಲ್ಲಪ್ಪಾ, ನಾನು ನಿನಗೆ ತ್ರಾಸ್ ಕೊಡಂಗಿಲ್ಲ" ಎಂದು ಮುದ್ದುಮುದ್ದಾಗಿ ಹೇಳುತ್ತ ತೊಡೆಯ ಮೇಲೆ ಸುಮ್ಮನೆ ಕುಳಿತು ನಾನು ಮಾಡುವ ಕೆಲಸವನ್ನು ನೋಡುತ್ತ, ನನಗೆ ಸ್ಫೂರ್ತಿಯನ್ನು, ಸಹಕಾರವನ್ನು ನೀಡಿದ ಮಮತೆಯ ಮಗಳು ಸೃಜನಾರಿಗೆ ನಾನು ಆಭಾರಿ.

ಈ ಮಹಾಪ್ರಬಂಧವನ್ನು ಸಿದ್ಧಪಡಿಸುವಾಗ ಅನೇಕ ಆಕರಗ್ರಂಥಗಳ ನೆರವನ್ನು ಪಡೆಯಲಾಗಿದೆ. ಆ ಎಲ್ಲ ಗ್ರಂಥಗಳ ಕರ್ತೃಗಳಿಗೆ ನನ್ನ ತುಂಬು ಹೃದಯದ ಕೃತಜ್ಞತೆಗಳು.

ಮೈಲಾರಲಿಂಗನನ್ನು ಕುರಿತು ಅಧ್ಯಯನ ಮಾಡಿ, ಒಂದು ಪ್ರಾಚೀನ ಸಂಸ್ಕೃತಿಯ ಒಳಹೊರಗುಗಳನ್ನು ಅಭ್ಯಸಿಸಿ ಈ ಮಹಾಪ್ರಬಂಧ ರಚಿಸಲು ನನಗೊಂದು ಅವಕಾಶ ಮಾಡಿಕೊಟ್ಟ ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಕುಲಪತಿಗಳು ಹಾಗೂ ಇತರ ಅಧಿಕಾರಿ ವರ್ಗದವರಿಗೆ ನಾನು ಋಣಿ.

ಸದಾ ಕನ್ನಡಪರ ಒಲವನ್ನು ಹೊಂದಿ ಕನ್ನಡವನ್ನು ಕುರಿತ ಕಾರ್ಯಕ್ರಮಗಳಿಗೆ, ಸಂಶೋಧನೆಗಳಿಗೆ ತಮ್ಮನ್ನು ತಾವು ಸಮರ್ಪಿಸಿಕೊಳ್ಳುತ್ತಿರುವ ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾದ ಸನ್ಮಾನ್ಯ ಡಾ. ಪಿ. ವಿ.ನಾರಾಯಣರವರಿಗೆ, ಕಾರ್ಯದರ್ಶಿಗಳಾದ ಪ್ರೊ. ನಾ. ಗೀತಾಚಾರ್ಯ ಅವರಿಗೆ ಹಾಗೂ ಕಾರ್ಯಾಲಯದ ಸಿಬ್ಬಂದಿಯಾದ ಶ್ರೀಮತಿ ರಾಜಲಕ್ಷ್ಮೀಯವರಿಗೆ ನಾನು ಆಭಾರಿಯಾಗಿದ್ದೇನೆ.

ಎಷ್ಟು ಆಳಕ್ಕಿಳಿದರೂ ಇನ್ನೂ ತನ್ನ ಗುಟ್ಟನ್ನು ಬಿಟ್ಟು ಕೊಡದ ಜಾನಪದ ಸಂಸ್ಕೃತಿಯೊಂದರ ರೂಪವಾಗಿರುವ "ಮೈಲಾರ - ಮಲ್ಲಯ್ಯ - ಮಾರ್ತಾಂಡ ಭೈರವನನ್ನು" ಕುರಿತಾದ ಈ ಅಧ್ಯಯನ ನನ್ನ ಹಿತೈಷಿಗಳೆಲ್ಲರ ಸಹಾಯ, ಸಹಕಾರ ಹಾಗೂ ಹಾರೈಕೆಗಳಿಂದ ಈಗ ಪೂರೈಸುವ ಹಂತಕ್ಕೆ ಬಂದಿದೆ. ಈ ಕಾರ್ಯದಲ್ಲಿ ನನ್ನೊಂದಿಗೆ ಕೈಜೋಡಿಸಿದ ಎಲ್ಲ ಆತ್ಮೀಯರಿಗೂ ಮತ್ತೊಮ್ಮೆ ನನ್ನ ಕೃತಜ್ಞತೆಗಳು.

ತಮ್ಮವ

**ನಾಗರಾಜ ಹೊಸೂರಕರ್**

*(ಸಂಶೋಧನಾ ವಿದ್ಯಾರ್ಥಿ)*

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ

ಪಿಎಚ್. ಡಿ ಅಧ್ಯಯನದ ಮಹಾಪ್ರಬಂಧ

# ಮೈಲಾರಲಿಂಗನ ಆಚರಣೆ – ಒಂದು ಸಾಂಸ್ಕೃತಿಕ ಅಧ್ಯಯನ

## ವಿಷಯ ಸೂಚಿ

* * *

# ಅಧ್ಯಾಯ ೧ : ಅಧ್ಯಯನದ ಉದ್ದೇಶ ಹಾಗೂ ವ್ಯಾಪ್ತಿ

೧. ಪ್ರವೇಶ
೨. ಭೌಗೋಳಿಕ ಪರಿಸರ
೩. ಹಿನ್ನೆಲೆ
೪. ವೈಶಿಷ್ಟ್ಯ
೫. ಇತಿಹಾಸದಲ್ಲಿ ಉಲ್ಲೇಖ
೬. ನಂಬಿಕೆ ಮತ್ತು ಆಚರಣೆಗಳು
೭. ಕಥಾನಕ

# ಅಧ್ಯಾಯ – ೧

# ಅಧ್ಯಯನದ ಉದ್ದೇಶ ಹಾಗೂ ವ್ಯಾಪ್ತಿ

## ೧.೧ ಪ್ರವೇಶ

ಒಂದು ಪ್ರದೇಶದ ಸಂಸ್ಕೃತಿಯನ್ನು ಅರಿಯಬೇಕಾದರೆ ಅಲ್ಲಿನ ಜನರ ಜೀವನಕ್ರಮ, ಆಚರಣೆ, ನಂಬಿಕೆ, ಹಾಡು, ಕಥೆ, ಶಿಷ್ಟ ಹಾಗೂ ಮೌಖಿಕ ಮಾಹಿತಿ ಮೊದಲಾದ ಹಲವಾರು ಅಂಶಗಳು ಪ್ರಧಾನವಾಗುತ್ತವೆ. ಇವುಗಳ ಮೂಲಕ ಅಲ್ಲಿನ ಮೂಲ ಸಂಸ್ಕೃತಿಯ ಪರಿಚಯ ನಮಗಾಗುತ್ತದೆ. ಅದಕ್ಕಾಗಿ ಮೊದಲು ಅಲ್ಲಿನ ಜನಜೀವನದ ವ್ಯವಸ್ಥೆಯ ಅಧ್ಯಯನವನ್ನು ಮಾಡಬೇಕಾಗುತ್ತದೆ. ಪ್ರಾಚೀನ ಕಾಲದಿಂದಲೂ ಉಳಿದುಕೊಂಡು ಬೆಳೆದುಕೊಂಡು ಬಂದಿರುವ ನಮ್ಮ ಜನಪದ ಜೀವನ ವಿಧಾನ, ಆಚರಣೆಗಳು ನಮ್ಮ ಜೊತೆಗಿರುವ ಜೀವಂತ ಸಂಪತ್ತಾಗಿವೆ. ಆಧುನಿಕ ಗಾಳಿಯೊಡನೆ ಬೆರೆತು ಜಾನಪದೀಯ ಕಲ್ಪನೆಗಳು ಕರಗತೊಡಗಿವೆ. ಅವುಗಳನ್ನು ಉಳಿಸಿ ಬೆಳೆಸಿ ಅವುಗಳ ಪ್ರಸ್ತುತತೆಯನ್ನು ಗುರುತಿಸಿ ಆಧುನಿಕತೆಗೆ ಬಳಸಿಕೊಳ್ಳಬೇಕು, ಅವುಗಳ ಹಿಂದಿರುವ ವೈಜ್ಞಾನಿಕ ಅಂಶಗಳನ್ನು ತಿಳಿದುಕೊಳ್ಳುವ ಪ್ರಯತ್ನಗಳಾಗಬೇಕು. ಈ ನಿಟ್ಟಿನಲ್ಲಿ ಜನಪದ ಸಂಸ್ಕೃತಿಯ ಅಧ್ಯಯನ ಬಹುಮುಖ್ಯ.

**ಜಾನಪದ :** ಇಂಗ್ಲಿಷ್ ಭಾಷೆಯ Folk ಶಬ್ದಕ್ಕೆ ಸಮಾನಾರ್ಥಕವಾಗಿ ಜನಪದವನ್ನು, Folkloreಗೆ ಸಮಾನಾರ್ಥಕವಾಗಿ ಜಾನಪದ ಶಬ್ದವನ್ನು ಕನ್ನಡ ಭಾಷೆಯಲ್ಲಿ ಬಳಸಲಾಗುತ್ತಿದೆ. ಸಮಸ್ತ ಮನುಕುಲದ ಮೌಖಿಕ ಜೀವನ ವಿಧಾನವನ್ನು ಜಾನಪದ (Folklore) ಎನ್ನುತ್ತೇವೆ[1].

ಸುಮಾರು ನೂರೈವತ್ತು ವರ್ಷಗಳಿಂದ ಜಾನಪದವು ವೈಜ್ಞಾನಿಕವಾದ ಅಧ್ಯಯನಕ್ಕೆ ಒಳಪಟ್ಟಿದೆ. ಈಗ ಇದು ವಿಶ್ವಾದ್ಯಂತ ಅಭ್ಯಸಿಸಲ್ಪಡುವ ವಿಷಯವಾಗಿದೆ. ಮೊದಮೊದಲಿಗೆ ವಾಮನಾವತಾರದಲ್ಲಿದ್ದ ಜಾನಪದವು ಈಗ ತ್ರಿವಿಕ್ರಮಾವತಾರ ತಾಳಿ ನಿಂತಿದೆ.

ಸರ್ ವಿಲಿಯಂ ಥಾಂಸನ್ ಅವರಿಂದ ಸೃಷ್ಟಿಗೊಂಡ FOLKLORE ಪದಕ್ಕೆ ಡಾ॥ ಹಾ. ಮಾ. ನಾಯಕರು ಜಾನಪದ ಎಂಬ ಪದವನ್ನು ಬಳಸಿದರು.

ಜಾನಪದದ ಅರ್ಥವನ್ನು ಕುರಿತು ವಿಶ್ವದ ಅನೇಕ ವಿದ್ವಾಂಸರು ವಿಭಿನ್ನ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ.

ಸಿ. ಎಫ್. ಪಾಟರ್ ಎಂಬ ವಿದ್ವಾಂಸರು – "ಜಾನಪದ ಸಾಯಲು ಇಷ್ಟಪಡದ ಜೀವಂತ ಪಳೆಯುಳಿಕೆ" ಎಂದಿದ್ದಾರೆ. ಇದು ಜಾನಪದವನ್ನು ಕುರಿತು ಪ್ರಸಿದ್ಧವಾದ ಹಾಗೂ ಅರ್ಥಪೂರ್ಣವಾದ ವ್ಯಾಖ್ಯೆಯಾಗಿದೆ.

ಮಾನವ ಶಾಸ್ತ್ರಜ್ಞ ವಿಲಿಯಂ ಆರ್. ಬಾಸ್ಕಂ ರವರ ಪ್ರಕಾರ ಜಾನಪದವು ಶಾಬ್ದಿಕ ಕಲೆಯಾಗಿದೆ. ಅವರ ದೃಷ್ಟಿಯಲ್ಲಿ ಮಾತಿನ ಮಾಧ್ಯಮದಲ್ಲಿ ಪ್ರಕಟಗೊಳ್ಳುವ ಪುರಾಣ, ಐತಿಹ್ಯ, ಜನಪದ ಕಥೆ, ಗಾದೆ, ಒಗಟು, ಗೀತೆ ಹಾಗೂ ಇನ್ನಿತರ ಕಲಾತ್ಮಕ ರೂಪಗಳು ಜಾನಪದ ಎನಿಸಿಕೊಳ್ಳುತ್ತವೆ.

ಈ. ಡಬ್ಲ್ಯೂ. ವೋಯ್ಗ್ಲಿನ್ ಅವರು – ಮೌಖಿಕವಾಗಿ ಅಥವಾ ಜನಪ್ರಿಯ ಮೂಲಗಳಿಂದ ಸಾಂಪ್ರದಾಯಿಕವಾದ ಗದ್ಯ, ಪದ್ಯ ಸಾಮಗ್ರಿಗಳ ರೂಪದಲ್ಲಿ ವರ್ಗಾಯಿಸಲ್ಪಡುವುದೇ ಜಾನಪದ. ಹೀಗಾಗಿ ಪುರಾಣಗಳು, ಕಥೆಗಳು, ಹಾಸ್ಯ, ನಾಟಕ, ಪ್ರಾರ್ಥನೆ, ಗಾದೆ, ಒಗಟು ಮೊದಲಾದವು ಜಾನಪದವಾಗುತ್ತವೆ.

ಜಾರ್ಜ್ ಪೋಸ್ಟರ್ ಅವರು – ಜಾನಪದವು ಅನಕ್ಷರಸ್ಥ ಅಥವ ಅಕ್ಷರಸ್ಥ ಜನರ ಸಾಹಿತ್ಯದ ಅಲಿಖಿತ ದಾಖಲೆ. ಅಲ್ಲದೇ ಆಟ, ಆಚರಣೆ, ಮಾಟ ಮೊದಲಾದವು ಸಹ ಜಾನಪದದ ವ್ಯಾಪ್ತಿಯಲ್ಲಿಯೇ ಬರುತ್ತವೆ.

ಬೌರಿಲಿಯೋ ಎಸ್ಪಿನೋಸಾ ಅವರು ಪ್ರಾಚೀನ ಹಾಗೂ ಅನಕ್ಷರಸ್ಥ ಜನತೆ ಹಾಗೂ ನಾಗರಿಕ ಸಮಾಜದಲ್ಲಿರುವ ಸಾಮಾನ್ಯ ಜನತೆ – ಇವರಲ್ಲಿರುವ ನಂಬಿಕೆಗಳು, ರೂಢಿಗಳು, ಮೂಢ ನಂಬಿಕೆಗಳು, ಗಾದೆಗಳು, ಒಗಟುಗಳು, ಮಾಟ–ಮಂತ್ರ ಹಾಗೂ ಎಲ್ಲ ರೀತಿಯ ಪ್ರದರ್ಶನಗಳು ಹಾಗೂ ಆಚರಣೆಗಳು ಜಾನಪದವೆನಿಸಿಕೊಳ್ಳುತ್ತವೆ.

ಜಾನ್ ಎಲ್ ಮಿಶ್ ಅವರು ಪ್ರಾಚೀನ ಜನಪ್ರಿಯ ನಂಬಿಕೆಗಳು, ಪದ್ಧತಿಗಳು ಹಾಗೂ ಸಂಪ್ರದಾಯಗಳ ಸಮಗ್ರ ಶರೀರವೇ ಜಾನಪದ ಎಂದಿದ್ದಾರೆ. ಜೊತೆಗೆ ಕಿನ್ನರ ಕಥೆಗಳು, ಪುರಾಣ ಕಥೆಗಳು, ಐತಿಹ್ಯಗಳು, ಮೂಢ ನಂಬಿಕೆಗಳು, ಹಬ್ಬಗಳು,

ಆಚರಣೆಗಳು, ಸಾಂಪ್ರದಾಯಿಕವಾದ ಆಟಗಳು, ಜನಪದ ಗೀತೆಗಳು, ಜನಪ್ರಿಯ ಹೇಳಿಕೆಗಳು, ಜನಪದ ಕಲೆ, ಕುಶಲ ಕಲೆ, ಜನಪದ ನೃತ್ಯಗಳು ಮೊದಲಾದವುಗಳೆಲ್ಲಾ ಜಾನಪದವೇ ಎಂದು ಮಿಶ್ ಅವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಮೆಕ್ ಎಡ್ವರ್ಡ್ ರೀಚ್ ಅವರು ಜಾನಪದರ ಹೆಚ್ಚಿನ ಅಂಶವು ವ್ಯಷ್ಟಿಯಲ್ಲಿ ರೂಪಗೊಂಡು ಸಮಷ್ಟಿಯಲ್ಲಿ ಬಳಸಲ್ಪಟ್ಟು ಸಾಮಾಜಿಕ ಸೃಷ್ಟಿಯೆನಿಸಿಕೊಳ್ಳುತ್ತದೆ ಎಂದಿದ್ದಾರೆ.

ಸ್ಮಿತ್ ಥಾಂಸನ್ ಅರವ ಪ್ರಕಾರ ಜಾನಪದವೆಂದರೆ ಒಬ್ಬರಿಂದ ಇನ್ನೊಬ್ಬರಿಗೆ ಜನರ ನೆನಪಿನ ಶಕ್ತಿ ಅಥವಾ ಆಚರಣೆಯಿಂದ ಹರಿದು ಬಂದ ಸಂಪ್ರದಾಯವಾಗಿದೆ.

ಜೀ. ಶಂ. ಪರಮಶಿವಯ್ಯನವರು ಸಾಂಪ್ರದಾಯಿಕವಾದ ಎಲ್ಲ ರೀತಿಯ ಜನಜೀವನದ ಸ್ಥರಗಳಿಗೂ ಜಾನಪದ ವ್ಯಾಪಿಸಿದೆ, ಅದರ ಪ್ರಕಾರಗಳು ವಾಙ್ಮಯ ಪ್ರಪಂಚದಿಂದ ಭೌತಿಕ ವಸ್ತುವಿಶೇಷಗಳಿಗೂ ವ್ಯಾಪಿಸಿದೆ ಎಂದು ಹೇಳಿದ್ದಾರೆ.

ಹೀಗೆ ಸಾಂಪ್ರದಾಯಿಕ ಭೌತಿಕ ಹಾಗೂ ಅಭೌತಿಕ ವಿಷಯಗಳನ್ನೆಲ್ಲ ಜಾನಪದವು ಒಳಗೊಳ್ಳುತ್ತದೆಂಬುದು ಈ ಎಲ್ಲ ಮಹನೀಯರ ಅಭಿಪ್ರಾಯವಾಗಿದೆ.

**ಸಂಸ್ಕೃತಿ :** ಸಾಮಾನ್ಯವಾಗಿ ಸಂಸ್ಕೃತಿ ಎಂಬ ಪದವನ್ನು ಇಂಗ್ಲಿಷಿನ Culturue ಎಂಬ ಪದಕ್ಕೆ ಸಂವಾದಿಯಾಗಿ ಬಳಸಲಾಗುತ್ತಿದೆ. ಇಲ್ಲಿ ಕ್ರಮೇಣ ಎರಡು ಅರ್ಥಗಳು ಉತ್ಪನ್ನವಾದವು.

೧. ದೈವ ಭಕ್ತಿ, ವ್ರತ ದೀಕ್ಷೆ, ಮತಸಿದ್ಧಾಂತ

೨. ಭೂದೇವಿಯ ಆರಾಧನೆ, ಭೂಮ್ಯಾಸಕ್ತಿ, ಕೃಷಿ, ಉಳುಮೆ, ಪೈರು ಬೆಳೆಸುವುದು ಮೊದಲಾದವು.

ಇವುಗಳಲ್ಲಿ ಎರಡನೆಯ ಅರ್ಥದಿಂದಲೇ ವ್ಯವಸಾಯ (Agriculture) ಎಂಬ ಅಭಿಪ್ರಾಯ ಬಂದಿತು ಎನ್ನಬಹುದು. ಬಳಿಕ ತೋಟಗಾರಿಕೆ (Horticulture), ಮರ ಪೊದೆಗಳನ್ನು ಬೆಳೆಸುವುದು (Artoryculturue), ರೇಶ್ಮೆ ಹುಳು ಸಾಕಾಣಿಕೆ (Sericul-ture), ಮೀನು ಸಾಕಾಣಿಕೆ ( Fish culture) ಮೊದಲಾದ ಮಾತುಗಳು ಬಂದವು. ಹೀಗೆ

ಈ ಸಂಸ್ಕೃತಿ ಪದದ ಅರ್ಥವು ಬಹು ವ್ಯಾಪಕವಾಗಿ ಬೆಳೆಯುತ್ತಾ ಹೋಯಿತು. ಅದರರೊಂದಿಗೆ ಹೊಸ ಹೊಸ ಅರ್ಥಗಳನ್ನೂ ಹುಟ್ಟುಹಾಕಿತು. ಸಮಷ್ಟಿ ಜೀವನದ ಅಂತರಂಗದ ಸಾಧನೆಗೆ ಸಹಕಾರಿಯಾದ ಸಾಮಗ್ರಿಗಳು ಎಂಬ ಅರ್ಥದಿಂದ ಹಿಡಿದು ವ್ಯಷ್ಟಿ ಜೀವನದ ವಿಕಾಸಕ್ಕೆ ಕಾರಣವಾದ ಸಾಮರಸ್ಯದ ಸಂಸ್ಕಾರ ಎಂಬುವವರೆಗೆ Culture ಪದದ ಅರ್ಥ ಬೆಳೆದಿದೆ. ಕೆಲವು ವೇಳೆ ಸಂಸ್ಕೃತಿಯ ಅರ್ಥವನ್ನು ದೇಶವಾಚಕವಾಗಿಯೂ ಬಳಸುತ್ತೇವೆ. ಉದಾರಹಣೆಗೆ ಕರ್ನಾಟಕ ಸಂಸ್ಕೃತಿ, ಭಾರತೀಯ ಸಂಸ್ಕೃತಿ ಮೊದಲಾದವು. ಇಲ್ಲಿ ಇವುಗಳನ್ನು ಆಯಾ ಪ್ರದೇಶದ ಸಂಸ್ಕೃತಿ ಎಂಬರ್ಥದಲ್ಲಿಯೇ ಬಳಸಲಾಗುತ್ತದೆ. ಈ ಎಲ್ಲವುಗಳ ಹಿನ್ನೆಲೆಯಲ್ಲಿ ಕೆಲ ವಿದ್ವಾಂಸರ ಹೇಳಿಕೆಗಳನ್ನು ನೋಡಬಹುದು.

ಸಂಸ್ಕೃತಿಯ ಅಧ್ಯಯನಕ್ಕೆ ಭದ್ರವಾದ ತಳಹದಿಯನ್ನು ಹಾಕಿದ E. B. Tailar ನು ತನ್ನ Primitive culture ನಲ್ಲಿ – "ಸಮಾಜದ ಒಬ್ಬ ಸದಸ್ಯನಾಗಿ ಮಾನವನು ತಾನು ಗಳಿಸಿಕೊಂಡ ಪರಂಪರೆಯ ಜ್ಞಾನ, ನಂಬಿಕೆ, ಕಲೆ, ನೀತಿ, ನಿಯಮ, ಆಚರಣೆ, ಸ್ವಭಾವ, ನಡೆ ನುಡಿಗಳು, ಆಚಾರ ವಿಚಾರಗಳನ್ನು ಒಳಗೊಳ್ಳುವ ಒಂದು ಸಂಕೀರ್ಣ ಮೊತ್ತವೇ ಸಂಸ್ಕೃತಿ"[2] ಎಂದು ಅಭಿಪ್ರಾಯಪಡುತ್ತಾನೆ.

ಮಾನವ ಶಾಸ್ತ್ರಜ್ಞ ಲಿಂಟನ್‌ನ ಅಭಿಪ್ರಾಯದಲ್ಲಿ – "ಒಂದು ನಿರ್ದಿಷ್ಟ ಸಮಾಜದ ಸದಸ್ಯರು ಹಂಚಿಕೊಳ್ಳುವ, ಪ್ರಸಾರ ಮಾಡುವ ಜ್ಞಾನ, ದೃಷ್ಟಿಕೋನ ಮತ್ತು ಸ್ವಾಭಾವಿಕ ನಡವಳಿಕೆಯ ನಮೂನೆಗಳ ಒಟ್ಟು ಮೊತ್ತವೇ ಸಂಸ್ಕೃತಿಯಾಗಿದೆ". ಅಂದರೆ ಒಂದು ಸಮಾಜದ ಸಂಸ್ಕೃತಿಯ ಪ್ರಕ್ರಿಯೆ ವ್ಯಕ್ತಿಯಿಂದ ಸಮೂಹದ ಕಲ್ಪನೆಯ ಕಡೆಗೆ ತನ್ನ ದೃಷ್ಟಿಯನ್ನು ತಿರುಗಿಸಿದೆ ಎಂದು ಲಿಂಟನ್ ನ ಮಾತಿನ ಅರ್ಥ.

ಮ್ಯಾಥ್ಯೂ ಅರ್ನಾಲ್ಡ್ ರ ದೃಷ್ಟಿಯಲ್ಲಿ ಮಾನವನು ಜೀವನದಲ್ಲಿ ಪೂರ್ಣತೆಯನ್ನು ಸಾಧಿಸಲು ಮಾಡುವ ಪ್ರಯತ್ನದ ಫಲವೇ ಸಂಸ್ಕೃತಿಯಾಗಿದೆ.

ಹರ್ ಸ್ಕೋವಿಟ್ಸ್ ನು – ಮನುಷ್ಯ ಪ್ರಯತ್ನವಿಲ್ಲದೆ ರೂಪುಗೊಂಡ ಅನೇಕ ಅಂಶಗಳು ನಮ್ಮ ಪ್ರಕೃತಿಯಲ್ಲಿವೆ. ಆದರೆ ಅದಷ್ಟೇ ಪೂರ್ಣ ಪರಿಸರವಲ್ಲ. ಪೂರ್ಣ ಪರಸರದಲ್ಲಿ ಮನುಷ್ಯ ನಿರ್ಮಿತ ಭಾಗವೇ ಸಂಸ್ಕೃತಿ ಎಂದಿದ್ದಾನೆ[3].

ಯಾವುದೇ ಸಮಾಜದ ಸಂಸ್ಕೃತಿ ತನ್ನಷ್ಟಕ್ಕೆ ತಾನೇ ಸರಳವಾಗಿರುವುದಿಲ್ಲ. ಏಕ ಮುಖವೂ ಆಗಿರುವುದಿಲ್ಲ. ಅದು ಸ್ಥಿರವಾದರೂ ಚಲನಶೀಲ ಗುಣವನ್ನು ಹೊಂದಿರುತ್ತದೆ. ಸಂಸ್ಕೃತಿಯು ಮನುಷ್ಯನ ಅನುಭವದಲ್ಲಿ ಅಥವಾ ಬದುಕಿನಲ್ಲಿ ಸಾರ್ವತ್ರಿಕವಾಗಿಯೂ ಅದು ಸ್ಥಳೀಯ ಅಥವಾ ಪ್ರಾದೇಶಿಕ ಮುದ್ರೆಯನ್ನು ಅಲ್ಲದೆ ಏಕಕಾಲದಲ್ಲಿ ಸ್ಥಿರವೂ ನಿರಂತರ ಚಲನಶೀಲತೆಯನ್ನೂ ಉತ್ತೇಜಕ ಕಾರ್ಯವನ್ನು ಹಾಗೂ ನಿಯಂತ್ರಕ ಕಾರ್ಯವನ್ನು ಮಾಡುತ್ತದೆ.

ದೇವುಡು ಅವರು "ಜೀವನವನ್ನು ನಯವಾಗಿ ಸಾಗಿಸಿಕೊಂಡು ಹೋಗುವುದನ್ನೇ ಸಂಸ್ಕೃತಿ" ಎಂದಿದ್ದಾರೆ. ಡಿವಿಜಿಯವರು "ನಮ್ಮ ಜೀವನವನ್ನು ಸಾಧುವನ್ನಾಗಿ ಮಾಡಿಕೊಳ್ಳುವ ವಿಧಾನವೇ ಸಂಸ್ಕೃತಿ" ಎಂದಿದ್ದಾರೆ.

ಹುಟ್ಟಿನಿಂದ ಹಿಡಿದು ಸಾಯುವವರೆಗೂ ನಡೆಯುವ ಎಲ್ಲ ಬಗೆಯ ಜೀವನಾನುಭವೇ ಸಂಸ್ಕೃತಿಯೆನಿಸಿಕೊಳ್ಳುತ್ತದೆ. ಅದು ಧರ್ಮದ ಆಚರಣೆ, ಆಚರಣೆಯ ನೆಪದಲ್ಲಿ ಹುಟ್ಟಿಕೊಂಡ ಕಲೆ, ಸಾಹಿತ್ಯ, ಸಂಗೀತ, ವಿಧಿ, ನಿಷೇಧ, ಐತಿಹ್ಯ, ದೈವ ಹೀಗೆ ಏನು ಬೇಕಾದರೂ ಆಗಿರಬಹುದು. ಒಟ್ಟಾರೆ ಸಂಸ್ಕೃತಿ ಎಂಬುದು ಸೂತ್ರ ರೂಪದಲ್ಲಿ ಹಿಡಿದಿಡಲಾಗದ ವಿರಾಟ್ ಶಕ್ತಿ ಎಂಬುದನ್ನು ನಾವು ಈ ಎಲ್ಲ ಹೇಳಿಕೆಗಳಿಂದ ಕಂಡುಕೊಳ್ಳಬಹುದು.

ಸಂಸ್ಕೃತಿಯು ಹಂತಹಂತವಾಗಿ ವಿಕಾಸಗೊಳ್ಳುತ್ತದೆ. ಪದರ ಪದರವಾಗಿ ಜೀವನವನ್ನು ವ್ಯಾಪಿಸುತ್ತದೆ. ಸಂಸ್ಕೃತಿಯೆಂಬುದು ಅಂತರಂಗದ ವಿಕಾಸವೆಂಬುದು ಸತ್ಯ. ಆ ವಿಕಾಸಕ್ಕೆ ಕಾರಣವಾದ ಸಾಮಾಜಿಕ ಪರಿಕರಗಳು ಅನೇಕ. ನುಡಿದಂತೆ ನಡೆವುದು, ಸಮಾಜದೊಡನೆ ಸಹಬಾಳ್ವೆಯ ಸೌಜನ್ಯದ ಮಾರ್ಗದಲ್ಲಿ ನಡೆವುದು, ಶೀಲ, ಆತ್ಮ ಶಿಕ್ಷಣ, ಸಾಹಿತ್ಯಾದಿ ಕಲೆಗಳು ಹೀಗೆ ಅನೇಕಾನೇಕ ರೂಪಗಳನ್ನು ಸಂಸ್ಕೃತಿ ಒಳಗೊಂಡಿದೆ. ನಮ್ಮ ಜೀವನದ ಎಲ್ಲ ಆಯಾಮಗಳಲ್ಲಿ ಸಂಸ್ಕೃತಿಯ ಪ್ರಭಾವವನ್ನು ನಾವು ನೋಡಬಹುದು.

ಹೀಗೆ ಜನಪದ ಹಾಗೂ ಸಂಸ್ಕೃತಿಯ ಅರ್ಥವನ್ನು ಅರಿತ ಮೇಲೆ ಜನಪದ ಸಂಸ್ಕೃತಿಯ ಅರ್ಥ ಸ್ಪಷ್ಟವಾಗುತ್ತದೆ. ಮಾನವ ಶಾಸ್ತ್ರಜ್ಞರ ಪ್ರಕಾರ ಗ್ರಾಮೀಣ ಸಮಾಜದಲ್ಲಿದ್ದು ಭೂಮಿಯೊಂದಿಗೆ ಭಾವನಾತ್ಮಕ ಬಾಂಧವ್ಯವನ್ನು ಬೆಸೆದುಕೊಂಡು

ಬೇಸಾಯದಿಂದ ಬದುಕುವ ರೈತಾಪಿ ಜನ ಹಾಗೂ ಜನಸಾಮಾನ್ಯರು ಜಾನಪದರು. ಅಂತಹ ಜಾನಪದರ ಸಮಗ್ರ ಜೀವನ ಕ್ರಮವೇ ಜನಪದ ಸಂಸ್ಕೃತಿ ಎನ್ನಬಹುದು.

ಈ ನಿಟ್ಟಿನಲ್ಲಿ ಶಂ. ಬಾ. ಜೋಷಿಯವರ ಮಾತು ಗಮನಾರ್ಹ – ಒಂದು ಸಂಸ್ಕೃತಿ ಮೂಲತಃ ಸ್ಥಳೀಯ ಅಥವಾ ಆದಿವಾಸಿ ಸಂಸ್ಕೃತಿಯಿದ್ದು, ಕಾಲಾನುಕ್ರಮದಲ್ಲಿ ಹೊರಗಿನ ಇತರೇ ಸಂಸ್ಕೃತಿಗಳೊಂದಿಗೆ ಸಂಬಂಧಪಡೆದು ವಿಶಾಲ ಸಂಸ್ಕೃತಿ (ಶಿಷ್ಟ ಸಂಸ್ಕೃತಿ)ಗಳಾದವು. ಜನಪದ ಸಂಸ್ಕೃತಿಯ ಮೇಲೆ ಅವರವರ ಶ್ರೇಣಿಗೆ ತಕ್ಕಂತೆ ಶಿಷ್ಟ ಸಂಸ್ಕೃತಿಯ ಪ್ರಭಾವಗಳಾಗುತ್ತವೆ.

ಜನಪದ ಸಂಸ್ಕೃತಿಯ ನಾನಾ ಅರ್ಥಗಳು ಜನಪದರ ಜೀವನಕ್ರಮದಲ್ಲಿ ಅಂದರೆ ಆಹಾರ, ವಿಹಾರ, ಜೀವನ ಪದ್ಧತಿ, ಆಚರಣೆ ಮೊದಲಾದವುಗಳಲ್ಲಿ ದಟ್ಟವಾಗಿ ಬೇರೂರಿರುವುದು ಕಂಡುಬರುತ್ತದೆ. ನಿಜವಾದ ಅರ್ಥದಲ್ಲಿ ಜನಪದರ ಸಂಸ್ಕೃತಿಯ ಪ್ರತಿಬಿಂಬವನ್ನು ಜನಪದರ ಆಚರಣೆಗಳಲ್ಲಿ ನಾವು ಕಾಣಬಹುದು. ತಲೆ ತಲಾಂತರದಿಂದ ಬಂದ ನಂಬಿಕೆಗಳು, ಆಚರಣೆಗಳ ಮೂಲ ಅಂಶಗಳು ಒಂದು ಪ್ರದೇಶದ ಭವ್ಯ ಪರಂಪರೆಯ ಅಮೂಲ್ಯ ಸಂಪತ್ತೆಂದು ಹೇಳಬಹುದು. ನಾಡಿನ ಭವ್ಯ ಸಾಂಸ್ಕೃತಿಕ ಪರಂಪರೆಯ ದೃಷ್ಟಿಯಲ್ಲಿ ಜನಪದ ಆಚರಣೆಗಳು ಮಹತ್ವಪೂರ್ಣ ಸ್ಥಾನ ಹೊಂದಿವೆ. ಹೀಗಾಗಿ ಮಾನವನ ವಿಕಾಸದ ಚರಿತ್ರೆಯನ್ನು ಅರಿಯುವಲ್ಲಿ ಈ ರೀತಿಯ ಆಚರಣೆಗಳು ಸಹಕಾರಿಯಾಗಿವೆ. ಇವು ಯಾವುದೋ ಒಬ್ಬ ವ್ಯಕ್ತಿಯಿಂದ ಸೃಷ್ಟಿಯಾದುವಲ್ಲ. ಇವನ್ನು ಸಾಮೂಹಿಕ ಸೃಷ್ಟಿ ಎನ್ನಬಹುದು. ಸಮೂಹದ ಮೂಲಕ, ಸಮೂಹದ ಎದುರಿನಲ್ಲಿ ಪ್ರದರ್ಶಿತಗೊಳ್ಳುವ ಆಚರಣಾ ವಿಧಿ ವಿಧಾನಗಳು ಜನಪದರ ಜೀವನದ ಸಾಂಸ್ಕೃತಿಕ ಲಕ್ಷಣವೆಂದು ಅಭಿಪ್ರಾಯ ಪಡಬಹುದು. ಮಾನವನ ಬದುಕಿನೊಂದಿಗೆ ನೇರ ಸಂಪರ್ಕ ಇಟ್ಟುಕೊಂಡು, ಅವನ ಬದುಕಿನ ಜೊತೆಗೇ ರೂಪುಗೊಳ್ಳುತ್ತ ಬಂದ ಈ ಆಚರಣೆಗಳು ಮಾನವನ ಜೀವನದ ಅತ್ಯಮೂಲ್ಯ ಸಾಂಸ್ಕೃತಿಕ ಕೊಡುಗೆಯೆಂದು ಹೇಳಿದರೆ ತಪ್ಪಾಗಲಾರದು.

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕರ್ನಾಟಕ, ಮಹಾರಾಷ್ಟ್ರ, ಆಂಧ್ರಪ್ರದೇಶಗಳ ದಕ್ಷಿಣ ಪ್ರಸ್ಥಭೂಮಿಯ ಬಯಲು ಹಾಗೂ ಕುರುಚಲು ಕಾಡುಪ್ರದೇಶಗಳಲ್ಲಿ ಮೈಲಾರಲಿಂಗ ಅಥವಾ ಮೈಲಾರ ದೈವವು ಜನಪದ ದೈವವಾಗಿ ತುಂಬ ವ್ಯಾಪಕವಾಗಿ ಪ್ರಸರಣಗೊಂಡಿದೆ. ಕುರುಬರ ಸಂಸ್ಕೃತಿಗೆ ಸಂಬಂಧಿಸಿದ ಈ ದೈವ ಇಷ್ಟು ವಿಶಾಲ ಭೂಪ್ರದೇಶದಲ್ಲಿ ಹರಡಲು ಹಲವು ಶತಮಾನಗಳಾದರೂ ಬೇಕು. ಪಶುಪಾಲನೆಯೇ (ಮುಖ್ಯವಾಗಿ ಕುರಿಸಾಕಣೆ) ಪ್ರಧಾನ ವೃತ್ತಿಯಾಗಿದ್ದ ಹಿಂದಿನ ಕಾಲದ ಕುರುಬರು ದೊಡ್ಡ ಸಂಖ್ಯೆಯಲ್ಲಿದ್ದ ಕುರಿಗಳನ್ನು ಸಾಕಲು ತುಂಬ ಪ್ರಶಸ್ತವಾದ ಈ ಭೂಪ್ರದೇಶದಲ್ಲಿ ಸಂಚರಿಸಿದರು. ಕಾಲಾಂತರದಲ್ಲಿ ಕೃಷಿಕರಾಗಿ ನೆಲೆಗೊಂಡಿರಬಹುದಾದ ಈ ಜನಾಂಗದವರು ತಾವು ನೆಲೆಗೊಂಡ ಸ್ಥಾನದಲ್ಲಿಯೇ ತಮ್ಮ ಆರಾಧ್ಯ ದೈವ ಮೈಲಾರಲಿಂಗನ ದೇವಸ್ಥಾನಗಳನ್ನು ನಿರ್ಮಿಸಿಕೊಂಡಿರಬೇಕು. ಕಾಲಾಂತರದಲ್ಲಿ ಈ ಸ್ಥಾನಗಳು ಮೈಲಾರಲಿಂಗನ ಪವಿತ್ರ ಕ್ಷೇತ್ರಗಳಾಗಿ ಪ್ರಸಿದ್ಧಿಗೆ ಬಂದಿರಬಹುದು.

ಈ ಸಂಪ್ರದಾಯವು ಈಗ ವಿಶೇಷವಾಗಿ ಉತ್ತರಕರ್ನಾಟಕದಲ್ಲಿ, ಮಹಾರಾಷ್ಟ್ರದಲ್ಲಿ ಹಾಗೂ ಆಂಧ್ರಪ್ರದೇಶದ ಕೆಲಭಾಗಗಳಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಒಂದು ನಿರ್ದಿಷ್ಟ ಭೂಪ್ರದೇಶಕ್ಕೆ ಸೀಮಿತವಾಗಿರದಿದ್ದರೂ ಅಧ್ಯಯನದ ಅನುಕೂಲದ ದೃಷ್ಟಿಯಲ್ಲಿ ಒಂದು ನಿರ್ದಿಷ್ಟತೆಯ ಕಾರಣದಿಂದ ಈಗ ವಿದ್ವಾಂಸರು ಮೂಲಸ್ಥಾನವೆಂದು ಗುರುತಿಸಿರುವ ಹಾಗೂ ಪ್ರಸಿದ್ಧ ಕ್ಷೇತ್ರವೆಂದು ಪರಿಗಣಿಸಲ್ಪಟ್ಟಿರುವ ಓರೇ ಮೈಲಾರ ಅಥವಾ ಮಣ್ಣು ಮೈಲಾರವೆಂದು ಹೆಸರು ಪಡೆದಿರುವ ಶ್ರೀಕ್ಷೇತ್ರ ಮೈಲಾರದ ಆಚರಣೆಗಳು ಹಾಗೂ ಇತರ ಅಂಶಗಳಿಗೆ ನನ್ನ ಅಧ್ಯಯನದ ವ್ಯಾಪ್ತಿಯನ್ನು ಸೀಮಿತಗೊಳಿಸಿಕೊಂಡಿದ್ದೇನೆ. ನನ್ನ ಅಧ್ಯಯನದ ಪ್ರಮುಖ ಉದ್ದೇಶ ಮೈಲಾರಲಿಂಗನಿಗೆ ಸಂಬಂಧಿಸಿದ ಆಚರಣೆಗಳನ್ನು ಕುರಿತಾಗಿ ಅಭ್ಯಸಿಸಿ, ಅದರಲ್ಲಿನ ಸಾಂಸ್ಕೃತಿಕ ಅಂಶಗಳನ್ನು ಅರಿಯುವುದು; ತನ್ಮೂಲಕ ಆ ದೈವದ ವೈಶಿಷ್ಟ್ಯವನ್ನು ತಿಳಿಯುವುದಾಗಿದೆ. ಹೀಗಾಗಿ ಮೈಲಾರ ಕ್ಷೇತ್ರಕ್ಕೆ ಸಂಬಂಧಿಸಿದ ಆಚರಣೆಗಳು ಹಾಗೂ ಇತರ ವಿಧಿವಿಧಾನಗಳು ನನ್ನ ಅಧ್ಯಯನದ ವ್ಯಾಪ್ತಿಯಲ್ಲಿ ಬರುತ್ತವೆ. ಕರ್ನಾಟಕ, ಆಂಧ್ರಪ್ರದೇಶ ಹಾಗೂ ಮಹಾರಾಷ್ಟ್ರರಾಜ್ಯಗಳ ಇತರ ಮೈಲಾರ ಕ್ಷೇತ್ರಗಳಲ್ಲಿಯೂ ಇಲ್ಲಿನ ಆಚರಣೆಗಳೇ ರೂಢಿಯಲ್ಲಿದ್ದರೂ, ಮೈಲಾರದಷ್ಟು

ವ್ಯವಸ್ಥಿತವಾಗಿ ಕಂಡುಬರುವುದಿಲ್ಲ.[5] ಹೀಗಾಗಿ ಈ ಸಂಪ್ರದಾಯದ ಮೂಲಕೇಂದ್ರವೆಂದು ವಿದ್ವಾಂಸರಿಂದ ಗುರುತಿಸಲ್ಪಟ್ಟ, ಮೈಲಾರವನ್ನು ಪ್ರಮುಖವಾಗಿಟ್ಟುಕೊಂಡು ಇಲ್ಲಿನ ಭಕ್ತರ, ಧರ್ಮದರ್ಶಿಗಳ (ಒಡೆಯರ) ಪೂಜಾರಿಗಳ, ಗೊರವರ ವಿವಿಧ ಆಚರಣಾ ಕ್ರಮಗಳು, ಪೂಜಾ ವಿಧಾನಗಳು, ನಂಬಿಕೆಗಳು ಹಾಗೂ ಇನ್ನಿತರ ಅಂಶಗಳನ್ನು ಕನ್ನ ಈ ಪ್ರಬಂಧದಲ್ಲಿ ಚರ್ಚಿಸಿದ್ದೇನೆ.

## ೧.೨ ಭೌಗೋಳಿಕ ಪರಿಸರ

ಮಾನವನ ಸಾಮಾಜಿಕ ಸಾಂಸ್ಕೃತಿಕ ಜೀವನದ ಮೇಲೆ ವಾಯುಗುಣ ಹಾಗೂ ಭೌಗೋಳಿಕ ಪರಿಸರಗಳು ಬಹಳಷ್ಟು ಪ್ರಭಾವವನ್ನು ಉಂಟುಮಾಡುತ್ತವೆ. ಭೌತ ಲಕ್ಷಣ ಗಳಲ್ಲಿನ ಈ ವ್ಯತ್ಯಾಸಗಳು ನೈಸರ್ಗಿಕ ಸನ್ನಿವೇಶದಿಂದ ಸಾಮೂಹಿಕ ಜೀವನದ ಮೇಲೆ ಅಥವಾ ಆ ಸನ್ನಿವೇಶದ ಅಭಾವಕ್ಕೆ ಈಡಾದ ಜನರ ಸಂಸ್ಕೃತಿಯ ಮೇಲೆ ಪರಿಣಾಮ ವನ್ನುಂಟು ಮಾಡುತ್ತವೆ. ಸಾಮಾಜಿಕ ನಡುವಳಿಕೆಗಳು, ಆಚಾರ ವಿಚಾರಗಳು ಸಹ ಪ್ರಕೃತಿಯನ್ನು ಬಿಟ್ಟು ಭಿನ್ನವಾಗಿರಲು ಸಾಧ್ಯವಿಲ್ಲ. ಒಂದು ನಾಡಿನ ಜನತೆಯ ಸಂಸ್ಕೃತಿಗೂ ಅಲ್ಲಿನ ಭೌಗೋಳಿಕ ಪರಿಸರಕ್ಕೂ ಒಂದು ನಿಕಟ ಸಂಬಂಧವಿರುತ್ತದೆ. ಪ್ರೊ. ಮೈಲ್ಡ್‌ರಪ್ ಹ್ಯಾಪರ್‌ರವರ ಅಭಿಪ್ರಾಯದಂತೆ – ಬೆಟ್ಟಗಳು, ನದಿಗಳು, ಮುಖಜ ಪ್ರದೇಶಗಳು, ಫಲವತ್ತಾದ ಮಣ್ಣು, ಜಲ ಸಂಪನ್ಮೂಲ, ವಾತಾವರಣದ ಸ್ಥಿತಿಗತಿಗಳು ಮಾನವ ಸಮುದಾಯ ಜೀವಿಸಲು ಬೇಕಾದ ಮೂಲ ಅವಶ್ಯಕತೆಗಳಾಗಿವೆ. ಭೂಗೋಳವು ಮನುಷ್ಯ ಬದುಕಲು ಅನುಕೂಲತೆಯನ್ನು ಒದಗಿಸಿಕೊಟ್ಟಿದೆ. ಅದೇ ರೀತಿ ಅದು ಜಾನಪದದ ಸಾಂಸ್ಕೃತಿಕ ಸ್ಥಿತಿಗತಿಗಳನ್ನು ಪ್ರತಿಬಿಂಬಿಸುತ್ತದೆ ಹಾಗೂ ಸಂಪೂರ್ಣ ನಿಯಂತ್ರಣ ಮಾಡುತ್ತದೆ. ಈ ದೃಷ್ಟಿಯಿಂದ ಜಾನಪದೀಯರಲ್ಲಿ ಇತ್ತೀಚೆಗೆ ಭೌಗೋಳಿಕ ಪರಿಸರವನ್ನು ಬಹು ಮುಖ್ಯವಾಗಿ ಪರಿಗಣಿಸಲಾಗುತ್ತಿದೆ. ಜಾನಪದ ವಿದ್ವಾಂಸರು ಭೌಗೋಳಿಕ ಪ್ರದೇಶ ಹಾಗೂ ಜನಪದ ಸಂಸ್ಕೃತಿಯ ಬಗೆಗೆ ಸ್ಪಷ್ಟ ನಿಲುವು ತಾಳಿದ್ದಾರೆ. ಅವು ಹೀಗಿವೆ.

೧. ನಿರ್ದಿಷ್ಟವಾದ ಭೌಗೋಳಿಕ ಪ್ರದೇಶವೊಂದನ್ನು ಆಯ್ದುಕೊಂಡು ಆ ಪ್ರದೇಶವು ಇತರ ಭೌಗೋಳಿಕ ಪ್ರದೇಶಗಳಿಂದ ಹೇಗೆ ಭಿನ್ನವಾಗಿದೆ ಮತ್ತು ಈ ಭಿನ್ನತೆಯನ್ನು ಹೇಗೆ ಗುರುತಿಸಬಹುದು? ಎಂದು ಖಚಿತಪಡಿಸಿಕೊಳ್ಳುವುದು.

೨. ಆ ನಿರ್ದಿಷ್ಟ ಪ್ರದೇಶಕ್ಕೆ ಬದ್ಧವಾದ ಸಂವಹನ ಕ್ರಮಗಳಿದ್ದರೆ ಅವು ಯಾವುವು? ಮತ್ತು ಅವು ಇತರೆಡೆಯ ಸಂವಹನದ ಮಾದರಿಗಳಿಗಿಂತ ಹೇಗೆ ಭಿನ್ನವಾಗಿವೆ? ಎಂಬುದನ್ನು ಸ್ಪಷ್ಟಪಡಿಸಿಕೊಳ್ಳುವುದು.

೩. ಆ ಪ್ರದೇಶಕ್ಕೆ ಸೀಮಿತವಾದ ಅಂಶವೊಂದನ್ನು ಗುರುತಿಸಲು ಸಾಧ್ಯವೇ? ಈ ವಿಶಿಷ್ಟ ಅಂಶವು ನಿರ್ದಿಷ್ಟ ಪ್ರದೇಶದಿಂದ ದೂರಕ್ಕೆ ಸರಿದಂತೆ ಕಣ್ಮರೆಯಾಗುತ್ತ ಹೋಗುವುದೇ? ಎಂಬುದನ್ನು ಸೋದಾಹರಣವಾಗಿ ವಿವರಿಸಿಕೊಳ್ಳುವುದು.

೪. ಆ ಪ್ರದೇಶದ ಭಿನ್ನತೆಯನ್ನು ಪ್ರಕಟಪಡಿಸುವ ಭೌಗೋಳಿಕ ಗಡಿಗಳಿವೆಯೇ? ಈ ಗಡಿಯ ಹೊರವಲಯದ ವಿವರಗಳು ಒಳವಲಯದ ವಿವರಗಳಿಗಿಂತ ಬೇರೆ ಆಗಿವೆಯೋ ಎಂಬುದಕ್ಕೆ ಸೂಕ್ತವಾದ ಪುರಾವೆಗಳನ್ನು ಒದಗಿಸಿಕೊಳ್ಳುವುದು.[6]

ಪ್ರಸ್ತುತ ನನ್ನ ಅಧ್ಯಯನದ ವ್ಯಾಪ್ತಿಯಲ್ಲಿ ಬರುವ ಮೈಲಾರ ಕ್ಷೇತ್ರವು ನಮ್ಮ ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲ್ಲೂಕಿನಲ್ಲಿರುವ ಒಂದು ಚಿಕ್ಕ ಗ್ರಾಮವಾಗಿದೆ. ಜಿಲ್ಲಾ ಕೇಂದ್ರ ಬಳ್ಳಾರಿಯಿಂದ ಸುಮಾರು ೧೨೦ ಕಿ. ಮೀ ದೂರದಲ್ಲಿರುವ ಈ ಗ್ರಾಮವು ಒಂದು ರೀತಿಯಲ್ಲಿ ಬಳ್ಳಾರಿ ಜಿಲ್ಲೆಯ ಗಡಿ ಪ್ರದೇಶವಾಗಿದೆ. ಪಕ್ಕದ ಜಿಲ್ಲೆಯ ಜಿಲ್ಲಾ ಕೇಂದ್ರ ಹಾವೇರಿಯಿಂದ ಸುಮಾರು ೪೦ ಕಿ. ಮೀ. ದೂರದಲ್ಲಿರುವ ಈ ಗ್ರಾಮವು ಹೂವಿನ ಹಡಗಲಿ, ಹಾವೇರಿ ಹಾಗೂ ರಾಣೆಬೆನ್ನೂರು ನಗರಗಳಿಂದ ವಾಹನ ಸೌಲಭ್ಯವನ್ನು ಹೊಂದಿದೆ.

ಈ ಊರಿನಿಂದ ಸುಮಾರು ಐದು ಕಿಲೋ ಮೀಟರ್‌ಗಳ ಅಂತರದಲ್ಲಿ ಕಪ್ಪತಗುಡ್ಡದ ಶ್ರೇಣಿಗಳಿದ್ದು ಅವು ಪೂರ್ವ ಹಾಗೂ ಆಗ್ನೇಯ ದಿಕ್ಕುಗಳಲ್ಲಿ ಹರಡಿಕೊಂಡಿವೆ. ಈ ಗುಡ್ಡಗಳ ಕಾರಣದಿಂದ ತುಂಗಭದ್ರಾ ನದಿ ಪಶ್ಚಿಮವಾಹಿನಿಯಾಗಿ ಹರಿದಿದೆ. ಗುಡ್ಡದ ಸಮೀಪದ ಕುರವತ್ತಿಯಿಂದ ಮುಂದುವರಿದ ತುಂಗಭದ್ರಾ ನದಿ ಮೈಲಾರವನ್ನು ಸುತ್ತುವರಿದಿದೆ. ಅಂದರೆ ಪಶ್ಚಿಮಕ್ಕೆ ತಿರುಗಿದ ತುಂಗಭದ್ರೆ ಕ್ರಮೇಣ ಉತ್ತರಕ್ಕೆ ಹೊರಳಿ, ಚೌಡದಾನಪುರದಿಂದ ಮುಂದೆ ಸಾಗಿ ಮತ್ತೆ ಉತ್ತರಕ್ಕೆ ಸಾಗುತ್ತಾಳೆ. ಅಲ್ಲಿಂದ ಮುಂದೆ ಮತ್ತೆ ಪೂರ್ವ ದಿಕ್ಕಿನೆಡೆ ಹರಿಯತೊಡಗುತ್ತಾಳೆ. ಹೀಗೆ ಮೈಲಾರದ ಮೂರುದಿಕ್ಕುಗಳಲ್ಲಿ

ತುಂಗಭದ್ರೆ ಹರಿದಿದ್ದು ಮತ್ತೊಂದು ಬದಿ ಗುಡ್ಡದ ಸಾಲುಗಳಿವೆ. ಹೀಗೆ ಉಂಗುರಾಕಾರದಲ್ಲಿ ನದಿ ಹರಿದಿರುವುದರಿಂದ ಈ ಕ್ಷೇತ್ರಕ್ಕೆ ಉಂಗುಲಾರ (ಉಂಗ್ಲಾರ)ಕ್ಷೇತ್ರ ಎಂಬ ಹೆಸರು ಬಂದಿದೆ. ಈ ನದಿಯ ಇನ್ನೊಂದು ದಡದಲ್ಲಿ ಪ್ರಸಿದ್ಧ ಸ್ಥಾನಗಳಾದ ಕುರುವತ್ತಿ, ಐರಣಿ, ಚೌಡದಾನಪುರ, ಹೊಳಲು, ಹೊನ್ನತ್ತಿ, ಗುತ್ತಲ, ಹಾವನೂರು ಮೊದಲಾದ ಊರುಗಳಿವೆ.

ಮೈಲಾರವು ಸಮತಟ್ಟಾದ ಮೈದಾನ ಪ್ರದೇಶದಲ್ಲಿದೆ. ಅಲ್ಲಿಲ್ಲಿ ಚಿಕ್ಕ ಪುಟ್ಟ ಗುಡ್ಡಗಳಿವೆ. ಮೈಲಾರದ ಸುತ್ತ ಹರಿಯುವ ತುಂಗಭದ್ರಾ ನದಿಯಿಂದಾಗಿ ಮೊದಲು ಈ ಊರಿಗೆ ಬರುವುದು ಕಷ್ಟಕರವಾಗಿತ್ತು. ಆದರೆ ಈಗ ಸರಕಾರದವರು ಸೇತುವೆ ಕಟ್ಟಿಸಿರುವುದರಿಂದ ಗುತ್ತಲ ಮಾರ್ಗವಾಗಿ ಇಲ್ಲಿಗೆ ಬರುವುದು ಸರಳವಾಗಿದೆ. ಬಯಲು ಸೀಮೆಯ ಪ್ರದೇಶವಾದರೂ ತುಂಗಭದ್ರಾ ನದಿಯಿರುವುದರಿಂದ ಬರಗಾಲದ ಛಾಯೆ ಈ ಗ್ರಾಮಕ್ಕೆ ಬಿದ್ದಿಲ್ಲ. ಊರಿನ ಬಹುಪಾಲು ಜನ ಕೃಷಿಯನ್ನು ಅವಲಂಬಿಸಿದ್ದಾರೆ. ಅನೇಕ ಜನ ಕೃಷಿ ಸಂಬಂಧಿ ವಿವಿಧ ಕಾರ್ಯಗಳಲ್ಲಿ ತೊಡಗಿಸಿಕೊಂಡಿದ್ದಾರೆ. ವಿದ್ಯಾವಂತರ ಸಂಖ್ಯೆ ಸಾಕಷ್ಟಿದ್ದು ಅನೇಕ ಜನ ಉನ್ನತ ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ನದೀ ತೀರದಲ್ಲಿರುವುದರಿಂದ ಕಟ್ಟಡಗಳ ನಿರ್ಮಾಣಕ್ಕೆ ಮರಳನ್ನು ಸಾಗಾಟ ಮಾಡುವವರೂ ಇದ್ದಾರೆ. ಎಲ್ಲ ಜನಾಂಗಗಳ ಜನರೂ ಇಲ್ಲಿದ್ದಾರೆ. ಆದರೆ ಕುರುಬ ಜನಾಂಗದ ಸಂಖ್ಯೆ ಹೆಚ್ಚಾಗಿದೆ. ವ್ಯವಸಾಯದೊಂದಿಗೆ ಕುರಿಸಾಕಣೆ, ಹೈನುಗಾರಿಕೆ, ಕಂಬಳಿ ನೆಯ್ಗೆ ಮೊದಲಾದವನ್ನು ಇಲ್ಲಿನ ಜನ ರೂಢಿಸಿಕೊಂಡಿದ್ದಾರೆ. ಸಾರಿಗೆ ವ್ಯವಸ್ಥೆ ಸಾಕಷ್ಟಿರುವುದರಿಂದ ಗ್ರಾಮದ ಅನೇಕ ವಿದ್ಯಾರ್ಥಿ ವಿದ್ಯಾರ್ಥಿನಿಯರು ಹತ್ತಿರದ ಹಾವೇರಿ, ರಾಣೆಬೆನ್ನೂರು ನಗರಗಳ ಕಾಲೇಜಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾರೆ.

ಈ ಕ್ಷೇತ್ರವನ್ನು ಶಾಸನಗಳಲ್ಲಿ ಉಂಗುಲಾರ ಕ್ಷೇತ್ರ[7]ವೆಂದು ಕರೆದಿದ್ದಾರೆ. ರೂಢಿಯಲ್ಲಿ ಹಿರೇ ಮೈಲಾರ, ಆದಿ ಮೈಲಾರ, ಮಣ್ಣು ಮೈಲಾರ ಎಂದು ಕರೆಯುತ್ತಾರೆ. ಉತ್ತರ ಕರ್ನಾಟಕದಲ್ಲೆಲ್ಲ ವ್ಯಾಪಿಸಿರುವ ಈ ದೇವರ ಕ್ಷೇತ್ರಗಳಲ್ಲಿ ಇದೇ ಅತ್ಯಂತ ಪ್ರಾಚೀನವಾದದ್ದು ಎಂಬ ನಂಬಿಕೆಯಿದೆ. ಇಲ್ಲಿನ ದೇವಾಲಯದ ಆಡಳಿತ ವ್ಯವಸ್ಥೆಯು ಕರ್ನಾಟಕ ಸರ್ಕಾರದ ಮುಜರಾಯಿ ಇಲಾಖೆಯ ಅಧೀನದಲ್ಲಿದೆ. ಆದರೂ ಒಡೆಯರು[8] ಇಲ್ಲಿನ ಧರ್ಮದರ್ಶಿಗಳಾಗಿದ್ದು ಎಲ್ಲ ರೀತಿಯ ಕಾರ್ಯಕಲಾಪಗಳಿಗೂ

ಮುಖ್ಯಸ್ಥರಾಗಿದ್ದಾರೆ. ಇವರ ಜೊತೆ ಬ್ರಾಹ್ಮಣ ಪೂಜಾರಿಗಳು, ಗೊರವ, ಗೊರವಿಯರು, ಕಂಚಾವೀರರು ಮೊದಲಾದವರು ಸಹಕರಿಸುತ್ತಾರೆ. ಈ ದೇವಸ್ಥಾನಕ್ಕೆ ಎಲ್ಲ ಜನಾಂಗಗಳ ಭಕ್ತರೂ ಬರುತ್ತಾರೆ.

## ೧.೩ ಹಿನ್ನೆಲೆ

ಮೈಲಾರ ಕ್ಷೇತ್ರಕ್ಕೆ ಸಂಬಂಧಿಸಿದ ಉಲ್ಲೇಖವನ್ನು ಹಾಗೂ ಹಿನ್ನೆಲೆಗಳನ್ನು ಕುರಿತು ಚರ್ಚಿಸುವಾಗ ಪುರಾಣಗಳು ಹಾಗೂ ಐತಿಹ್ಯಗಳನ್ನು ವಿಶೇಷವಾಗಿ ಗಮನದಲ್ಲಿಟ್ಟುಕೊಳ್ಳಲಾಗಿದೆ. ಶಿವ ಪುರಾಣ, ಸ್ಕಾಂದ ಪುರಾಣ, ಬ್ರಹ್ಮಾಂಡ ಪುರಾಣಗಳನ್ನು ಆಧರಿಸಿರುವ ಕಥೆಯಂತೆ ಮಣಿಕ ಮಲ್ಲರ ಮರ್ದನಕ್ಕಾಗಿ ಬಂದ ಶಿವನೇ ಭಕ್ತರ ಅಪೇಕ್ಷೆಯಂತೆ ಮೈಲಾರಲಿಂಗನಾಗಿ ಅವತರಿಸಿದ ಎಂಬ ಸಾಂಪ್ರದಾಯಿಕ ನಂಬಿಕೆ ಈ ಕ್ಷೇತ್ರದೊಡನೆ ಬೆಸೆದುಕೊಂಡಿದೆ. ಆದರೆ ಕೆಲ ಉಲ್ಲೇಖಗಳನ್ನು ಗಮನಿಸಿದಾಗ ಪ್ರಾಚೀನ ಕರ್ನಾಟಕದಲ್ಲಿ ಪ್ರಬಲವಾಗಿದ್ದ ಲಾಕುಲೀಶ ಪಾಶುಪತ ಅಥವಾ ಕಾಳಾಮುಖ ಮತ ಸಂಬಂಧಿಯಾದ ಹಲವಾರು ಅಂಶಗಳು ಇಲ್ಲಿ ಕಂಡುಬರುತ್ತವೆ. ಕಾಳಾಮುಖರ ಪ್ರಾಯಶ್ಚಿತ್ತದ ಕ್ರಮಗಳು ಹಾಗೂ ಗೊರವರ ಸಂಪ್ರದಾಯಗಳನ್ನು ಗಮನಿಸುವುದಾದರೆ ಕೆಲವು ಸಾಮ್ಯಗಳು ಕಂಡುಬರುತ್ತವೆ. ಉದಾಹರಣೆಗೆ –

೧. ಕಾಳಾಮುಖರಲ್ಲಿ ಬ್ರಹ್ಮಹತ್ಯಾದೋಷಕ್ಕೆ ಒಳಗಾದವರನ್ನು ಕಾಡಿನಲ್ಲಿ ಎಲೆಗಳಿಂದ ಮಾಡಿದ ಗುಡಿಸಲಿನಲ್ಲಿಡಬೇಕು[9].

* ಮೈಲಾರನ ಕಾರಣಿಕದ ಗೊರವ ಕಾರಣಿಕದ ಸಂದರ್ಭದಲ್ಲಿ ಹನ್ನೊಂದು ದಿನ ಡೆಂಕನ ಮರಡಿಯಲ್ಲಿಯೇ ಇರುತ್ತಾನೆ. ಇದು ಮೈಲಾರನ ಆವಿರ್ಭಾವದ ಸಂದರ್ಭದಲ್ಲಿ ಕಾಡಾಗಿತ್ತು ಹಾಗೂ ಕಾರಣಿಕದ ಗೊರವನೇ ಮೈಲಾರನ ಅಂಶ ಹೊಂದಿರುತ್ತಾನೆ ಎಂದು ಜನ ಇಂದಿಗೂ ನಂಬುತ್ತಾರೆ.

೨. ಬ್ರಹ್ಮಹತ್ಯಾದೋಷಕ್ಕೆ ಒಳಗಾದವನು ಮೂರು ಸಲ ಸ್ನಾನ ಮಾಡಬೇಕು[10].

* ದೀಕ್ಷೆ ಪಡೆದ ಗೊರವರು ಸಹ ಸಾಮಾನ್ಯವಾಗಿ ಮೂರು ಹೊತ್ತು ಸ್ನಾನ ಮಾಡಬೇಕೆಂಬ ನಿಯಮವಿದೆ.

೩. ಅವನು ತಾನು ಮಾಡಿದ ಕೃತ್ಯವನ್ನು ಕುರಿತು ಊರಿಂದೂರಿಗೆ ಸಾರುತ್ತ ಹೋಗಿ ದಾನ ಧರ್ಮಗಳನ್ನು ಕಲೆಹಾಕಬೇಕು[11].

* ಮೈಲಾರನ ಗೊರವರೂ ಸಹ ಊರಿಂದೂರಿಗೆ ಹೋಗಿ ಏಳು ಕೋಟಿ ಏಳುಕೋಟಿಗೋ ಎಂದು ಸಾರುತ್ತ ಭಿಕ್ಷೆ ಬೇಡುವರು.

೪. ಈ ಪ್ರಾಯಶ್ಚಿತ್ತಗಳನ್ನು ಆಚರಿಸುವವನು ತನ್ನೊಂದಿಗೆ ತಾನು ಕೊಂದವನ ತಲೆ ಬುರುಡೆಯನ್ನು ತೆಗೆದುಕೊಂಡು ಹೋಗಬೇಕು[12].

* ಗೊರವರು ಬಳಸುವ ದೋಣಿ ಮಲ್ಲಾಸುರನ ಶಿರ ಎಂಬ ನಂಬಿಕೆ ಗೊರವರಲ್ಲಿದೆ.

೫. ಕಾಳಾಮುಖರು ತಮ್ಮ ಆಹಾರದ ಪಾತ್ರೆಯನ್ನಾಗಿ ಕಪಾಲವನ್ನೇ ಬಳಸುವರು[13].

* ಗೊರವರೂ ಸಹ ದೋಣಿಯಲ್ಲಿಯೇ ಊಟ ಮಾಡುವರು.

(ಹೊರನಾಡಿನ[14] ಅನ್ನಪೂರ್ಣೆಯು ಕುರಿತಾಗಿ ಇರುವ ಐತಿಹ್ಯದಂತೆ ಬ್ರಹ್ಮನ ಐದನೆಯ ತಲೆಯನ್ನು ಕತ್ತರಿಸಿದ ಶಿವನು ಆ ದೋಷವನ್ನು ಹೋಗಲಾಡಿಸಿಕೊಳ್ಳಲು, ಅದೇ ಕಪಾಲದಲ್ಲಿಯೇ ಭಿಕ್ಷೆ ಬೇಡಿದನಂತೆ.)

ಈ ಅಂಶಗಳನ್ನು ಗಮನಿಸಿದರೆ ಕಾಳಾಮುಖ ಸಂಪ್ರದಾಯದ ಪ್ರಭಾವ ಇಲ್ಲಿ ಸಾಕಷ್ಟಿತ್ತು ಎಂದು ಹೇಳಬಹುದು.

ಈ ಸಂಪ್ರದಾಯವು ಶಿವನ ಪರವಾಗಿದ್ದು ವೇದಾಗಮಗಳಿಗೆ ಗೌರವ ಸಲ್ಲಿಸುವ ಮತವಾಗಿತ್ತು. ಷಡ್‌ದರ್ಶನಗಳಲ್ಲಿ ನ್ಯಾಯ ವೈಶೇಷಿಕವನ್ನು ಇವರು ಹೆಚ್ಚು ಅವಲಂಬಿಸಿದ್ದರು. ಸ್ಥಾವರಲಿಂಗ ಪೂಜೆ ಇವರಲ್ಲಿ ಸರ್ವೇಸಾಮಾನ್ಯವಾಗಿತ್ತು. ದೇವಿ, ಭೈರವ ಮೊದಲಾದ ಶೈವಪರ ಮೂರ್ತಿಗಳ ಪೂಜೆ ಈ ಮತಕ್ಕೆ ಬಹುಶಃ ಮಾನ್ಯವಾಗಿತ್ತು. ವೇದಾಧ್ಯಯನಕ್ಕೆ ಇವರಲ್ಲಿ ಅವಕಾಶ ಕಲ್ಪಿಸಲಾಗಿತ್ತು. ಹೀಗೆ ವೇದಗಳಿಗೆ ಗೌರವ ಸಲ್ಲಿಸಿ ಅವುಗಳ ಅಧ್ಯಯನ – ಅಧ್ಯಾಪನಗಳನ್ನು ಒಪ್ಪಿದ್ದರೂ ಇವರು ಬ್ರಾಹ್ಮಣರಾಗಿರಲಿಲ್ಲ ಎಂಬುದು ಮಹತ್ವಪೂರ್ಣವಾದ ಅಂಶ.

ಶಾಸನಗಳಲ್ಲಿ ಏಕ್ಕೋಟಿ ಮುನೀಂದ್ರರೆಂದು[15] ಇವರನ್ನು ಕರೆಯಲಾಗಿದೆ. ಸಪ್ತಾಹತ್ತರಿ ಸ್ಥಾನಾಚಾರ್ಯರು ಎಂದೂ ಹೇಳಲಾಗಿದೆ. ಈ ಯತಿಗಳ ಕೊನೆಯಲ್ಲಿ ವ್ರತಿ, ಮಹಾವ್ರತಿ, ಒಡೆಯ, ಮುನಿಗಳು, ಗೊರವ, ಪಂಡಿತ ಎಂದು ಮೊದಲಾದ ಉಪಾದಿಸೂಚಕಗಳು ಕಂಡುಬರುತ್ತವೆ. ಇವರಿಗೆ ಶಕ್ತಿ, ಜೀಯ, ರಾಶಿ ಮೊದಲಾದ ಉಪನಾಮಗಳೂ ಕಂಡು ಬರುತ್ತವೆ.

ಕಾಳಾಮುಖರು ಶರೀರಕ್ಕೆ ಭಸ್ಮವನ್ನು ಬಳಿದುಕೊಳ್ಳುತ್ತಾರೆ. ಆದರೆ ಮೈಲಾರನ ಭಕ್ತರು ಭಂಡಾರವನ್ನು ಬಳಿದುಕೊಳ್ಳುತ್ತಾರೆ. ಮೈಲಾರನ ಭಕ್ತರು ವಿಶೇಷವಾಗಿ ಕೋರಿಯ ಅಂಗಿಯನ್ನು ಧರಿಸುತ್ತಾರೆ. ಆದರೆ ಕಾಪಾಲಿಕರಲ್ಲಿ ಈ ಕ್ರಮವಿಲ್ಲ. ಕಾಪಾಲಿಕರು ವೇದ ಹಾಗೂ ವೇದಾಂಗಗಳ ಅಧ್ಯಯನ, ಷಡ್‌ದರ್ಶನಗಳ ಅಧ್ಯಯನ ಮಾಡಿದರೆ, ಗೊರವರು ಅದಾವುದನ್ನೂ ಅರಿಯರು. ಹೀಗಾಗಿ ಕಾಪಾಲಿಕರನ್ನು ಗೊರವರನ್ನು ಪರಸ್ಪರ ಹೋಲಿಸುವುದು ಕಷ್ಟಕರ. ಹನ್ನೆರಡು ಹಾಗೂ ಹದಿಮೂರನೆಯ ಶತಮಾನದಲ್ಲಿ ಲಾಕುಲೀಶಪಥ ಪ್ರಬಲವಾಗಿದ್ದಂತೆ ಮೈಲಾರಲಿಂಗನ ಸಂಪ್ರದಾಯವೂ ಪ್ರಬಲವಾಗಿತ್ತು ಎಂಬುದಕ್ಕೆ "ನಾಯಾಗಿ ಬೊಗಳುವುದು, ಕುದುರೆಯಾಗಿ ಕುಣಿಯುವುದು, ವೀಳೆಯ ಅರ್ಪಿಸುವುದು, ಕೊಡೆ ಒಡಿಯುವುದು, ಅಲಗಿಕ್ಕುವುದು" ಮೊದಲಾದ ಆಚರಣೆಗಳನ್ನು ಕುರಿತು ಪ್ರಾಚೀನ ಕವಿಗಳಾದ ಬ್ರಹ್ಮಶಿವ, ಬಸವಣ್ಣ, ಹರಿಹರ, ನಯಸೇನರ ಮಾತುಗಳು ಸ್ಪಷ್ಟ ಸಾಕ್ಷಿಗಳಾಗಿವೆ. ಒಂದು ವೇಳೆ ಮೈಲಾರ ಸಂಪ್ರದಾಯದವರು ಲಾಕುಲೀಶ ಪಂಥಕ್ಕೆ ಸೇರಿದ್ದರೆ ಶೈವ ವಚನಕಾರರು ಅವರನ್ನು ಟೀಕಿಸುವ ಪ್ರಯತ್ನ ಮಾಡುತ್ತಿರಲಿಲ್ಲ.

ಇನ್ನು ಏಳ್ಕೋಟಿ ಮಂತ್ರಗಳು ಮತ್ತು ಸಪ್ತಾಕ್ಷರಿ ಶಬ್ದವನ್ನು ಕುರಿತು ಡಾ॥ ಎಂ. ಬಿ. ನೇಗಿನಹಾಳರು ಅಭಿಪ್ರಾಯಪಡುವುದು ಹೀಗೆ[16] – ಏಳ್ಕೋಟಿ ಅಥವಾ ಏಕ್ಕೋಟಿ ಮಂತ್ರಗಳು, ಮಂತ್ರಾಭಿಮಾನಿ ದೇವತೆಗಳು ವಾಸ್ತವವಾಗಿ ಇದ್ದರೆಂದು ಕಲ್ಪಿಸುವುದು ತರ್ಕಕ್ಕೆ ನಿಲುಕದ ಮಾತು. ಅದೇ ರೀತಿ ಸಪ್ತಾಹತ್ತರಿ ಅಂದರೆ ಎಪ್ಪತ್ತೇಳು ಎಂಬ ಶಬ್ದ ಪ್ರಯೋಗ ಕೂಡ ಗೌರವ ಸೂಚಕ ಬಿರುದಿನಂತೆಯೇ ಬಂದಿದೆ ಎಂದು ಹೇಳಬಹುದು. ಏಕವಿಂಶತಿ, ಪಂಚದಶ ಮೊದಲಾದವು ಶುಭಸಂಖ್ಯೆಗಳಾಗಿದ್ದಂತೆ ಸಪ್ತಾಹತ್ತರಿ ಕೂಡ ಒಂದು ಶುಭಸಂಖ್ಯೆ ಎಂಬ ಭಾವನೆ ಆ ಸಮಯದಲ್ಲಿ ಇದ್ದಿರಬಹುದು. ಆದ್ದರಿಂದಲೇ ಕಾಳಾಮುಖ ಗೊರವರು ತಮ್ಮ ಹೆಸರಿನ ಹಿಂದೆ ಈ ವಿಶೇಷಣವನ್ನು ಇಟ್ಟುಕೊಂಡಿದ್ದಾರೆ.

ಏಳುಕೋಟಿ ಅಥವಾ ಎಕ್ಕೋಟಿ ಎಂಬುದು ಯಾವುದೋ ಒಂದು ದೊಡ್ಡ ದೇವತಾ ಕ್ಷೇತ್ರವಾಗಿದ್ದು ಕಾಲಾಂತರದಲ್ಲಿ ಅದು ಗುರುತು ಸಿಗದಂತೆ ಮರೆಯಾಗಿದೆ ಅಥವಾ ನಷ್ಟವಾಗಿ ಹೋಗಿದೆ. ಅಂದು ಈ ಪ್ರದೇಶದಲ್ಲಿ ಅದು ಬಹು ಪವಿತ್ರವಾದ ಕ್ಷೇತ್ರ ಎಂಬ ಪ್ರತೀತಿ ಇದ್ದುದರಿಂದ ಅಲ್ಲಲ್ಲಿ ಅದರ ಬಳಕೆಯಾಗುತ್ತ ಬಂದು ಲಾಕುಲೀಶ ಪಾಶುಪತರಲ್ಲಿಯೂ ಅದೊಂದು ಪವಿತ್ರ ಶಬ್ದ ಅಥವಾ ಮಂತ್ರವಾಗಿ ಉಳಿದುಕೊಂಡಂತೆ ಕಾಣುತ್ತದೆ. ಬೌದ್ಧರ ಶೂನ್ಯ ಮತ್ತು ಕದರಿಗಳು ವೀರಶೈವರಲ್ಲಿ ಉಳಿದು ಬಂದಿರುವುದನ್ನು ಇಲ್ಲಿ ಗಮನಿಸಬಹುದು. ಮೈಳಾಲ ಶಕ್ತಿ ಎಂಬಂತಹ ಗೊರವರ ಹೆಸರುಗಳು ಶಾಸನಗಳಲ್ಲಿ ಕಂಡುಬರುತ್ತವಾದರೂ ಅಂಥವುಗಳಿಗೆ ಬಹಳ ಮಹತ್ವ ಕೊಡಲು ಬರುವುದಿಲ್ಲ.

## ೧.೪ ವೈಶಿಷ್ಟ್ಯ

ಮೈಲಾರ ದೇವಾಲಯಗಳಲ್ಲಿ ಅಪಾರ ಕುರುಬ ಭಕ್ತರಿರುವಂತೆಯೇ ಇತರ ಜನಾಂಗಗಳ ಭಕ್ತರೂ ಇರುವುದು ಈ ಸಂಪ್ರದಾಯದ ವೈಶಿಷ್ಟ್ಯ. ವೀರಶೈವರಲ್ಲಿ ಜಂಗಮರನ್ನು ಹೊರತುಪಡಿಸಿದರೆ ಇತರ ಎಲ್ಲ ವರ್ಗಗಳ ಜನರೂ ಇಲ್ಲಿನ ಭಕ್ತರಾಗಿದ್ದಾರೆ. ಬ್ರಾಹ್ಮಣರಲ್ಲಿ ಮುಖ್ಯವಾಗಿ ಮಾಧ್ವ ಹಾಗೂ ಶೈವಬ್ರಾಹ್ಮಣರು ತಮ್ಮ ಪರಂಪರೆಗೆ ವಿರುದ್ಧವಾಗಿ ಮೈಲಾರದೇವರನ್ನು ಕುಲದೇವರನ್ನಾಗಿ ಸ್ವೀಕರಿಸಿದ್ದನ್ನು ನಾವು ಕಾಣಬಹುದು. ಸಂಸ್ಕೃತದಲ್ಲಿ ಕಂಡುಬರುವ ಸ್ತೋತ್ರಗಳು, ಸಹಸ್ರನಾಮಾವಳಿ, ಮಹಾತ್ಮೆಗಳು ಬ್ರಾಹ್ಮಣ್ಯದ ಕುರುಹಾಗಿವೆ. ಆತ್ಮೀಯರಾದ ಭುಜಂಗ ಜೋಷಿಯವರು ಹೇಳುವಂತೆ – ಶಿಷ್ಟ ಪರಂಪರೆಯವರು 'ಮಲ್ಹಾರಿ ಹೋಮ' ಎಂಬ ಯಾಗವನ್ನು ಸಹ ಮಾಡಿಸುತ್ತಾರಂತೆ. ಮೂಲತಃ ಈ ಹೋಮ ಹವನಾದಿಗಳು ಆರ್ಯ ಮೂಲದ ಆಚರಣೆಗಳು. ಆದರೆ ಅವು ಇಲ್ಲಿಯೂ ಮಿಳಿತಗೊಂಡಿರುವುದನ್ನು ನಾವು ಗಮನಿಸಬಹುದಾಗಿದೆ.

ಈ ಸಂಪ್ರದಾಯದಲ್ಲಿ ಮತೀಯತೆ ಹಾಗೂ ಅದರಿಂದ ಬರುವ ವಿರಸಗಳಿಗೆ ಅವಕಾಶವಿಲ್ಲ. ಗೊರವ ಅಥವಾ ಗೊರವಿ ಯಾವುದೇ ಜಾತಿಗೆ ಸೇರಿದ್ದರೂ ಅವರಲ್ಲಿ ದೋಣಿ ಮೊದಲಾದ ಸಂಕೇತಗಳಿದ್ದರೆ ಅವರನ್ನು ಮನೆಗೆ ಕರೆದೊಯ್ದು ದೋಣಿ ತುಂಬಿಸುವ ಪರಂಪರೆಯನ್ನು ಇಲ್ಲಿ ಕಾಣಬಹುದು. ವಾಸ್ತವವಾಗಿ ಕೆಲ ಪಂಗಡಗಳ

ಬ್ರಾಹ್ಮಣರಿಗೆ ಈರುಳ್ಳಿ, ಬೆಳ್ಳುಳ್ಳಿಗಳು ನಿಷಿದ್ಧ, ಆದರೆ ಅವನ್ನು ಮೈಲಾರನಿಗೆ ಅರ್ಪಿಸಿ ತಿಂದರೆ ದೋಷವಿಲ್ಲ ಎಂಬ ಭಾವನೆಯಿದೆ.

ಮಲ್ಲಾರಿ ಮಹಾತ್ಮೆಯಲ್ಲಿ – ಯಾರು ನನ್ನನ್ನು ಭಕ್ತಿಯಿಂದ ಪೂಜಿಸುವನೋ ಅವನು ನೀಚ ಜಾತಿಗೆ ಸೇರಿದವನಾದರೂ ನನ್ನ ಪ್ರೀತಿಗೆ ಪಾತ್ರನಾದವನು. ಅಂತಹ ನನ್ನ ಭಕ್ತನಿಗೇ ದಾನ ಮಾಡಬೇಕು; ಅವನಿಂದಲೇ ದಾನ ತೆಗೆದುಕೊಳ್ಳಬೇಕು[17] ಎಂಬ ಮಾತನ್ನು ಗಮನಿಸಿದಲ್ಲಿ ಮೈಲಾರದ ವೈಶಿಷ್ಟ್ಯದ ಪರಿಚಯವಾಗುತ್ತದೆ. ಈ ರೀತಿಯ ಎಲ್ಲ ಪ್ರಮುಖ ಅಂಶಗಳನ್ನು ಕುರಿತು ವಿಶೇಷ ಅಧ್ಯಯನ ಮಾಡುವುದು ನನ್ನ ಸಂಶೋಧನೆಯ ಮುಖ್ಯ ಉದ್ದೇಶ.

## ೧.೫ ಇತಿಹಾಸ

ಯಾವುದೇ ಒಂದು ಪರಂಪರೆಯನ್ನು ಅಧ್ಯಯನ ಮಾಡಬೇಕಾದರೆ ಅದಕ್ಕೆ ಪೂರಕ ಅಂಶಗಳ ಅಧ್ಯಯನ ಪ್ರಧಾನವಾಗಿರುತ್ತದೆ. ಶಾಸನಗಳು, ಪುರಾಣಗಳು, ಐತಿಹ್ಯಗಳು, ನಾಣ್ಯಗಳು, ಪಳೆಯುಳಿಕೆಗಳು, ಕಾವ್ಯಗಳು ಮೊದಲಾದ ಅಂಶಗಳು ನಮಗೆ ಒಂದು ಜನಾಂಗದ ಬಗ್ಗೆ ಸ್ಪಷ್ಟ ಮಾಹಿತಿಯನ್ನು ಒದಗಿಸುತ್ತವೆ.

ಇತಿಹಾಸವು ಮೇಲಿನ ಎಲ್ಲ ಅಂಶಗಳನ್ನೊಳಗೊಂಡು ಸಂಸ್ಕೃತಿಯ ಅಧ್ಯಯನಕ್ಕೆ ಅವಕಾಶ ಮಾಡಿಕೊಡುತ್ತದೆ. ಸಂಸ್ಕೃತದಲ್ಲಿ 'ಇತಿ ಆಸೀತ್' ಎಂದು ಹೇಳುವುದರ ರೂಪ 'ಇತಿಹಾಸ'. ಹೀಗೆಯೇ ಇತ್ತು ಎಂದು ಎಂಬ ಸ್ಪಷ್ಟ ಕಲ್ಪನೆಯನ್ನು ನಮಗೆ ಇತಿಹಾಸ ನೀಡುತ್ತದೆ. ಇದಕ್ಕೆ ಸಂಬಂಧಿಸಿದ ಶಾಸನಗಳು ಹಾಗೂ ರಾಜಕೀಯ ಪರಿಸ್ಥಿತಿಗಳು ಒಂದು ಸಂಪ್ರದಾಯದ ಚಿತ್ರಣವನ್ನು ನೀಡುವಲ್ಲಿ ಸಹಾಯ ಮಾಡುತ್ತವೆ.

ಮೈಲಾರ ಸಂಪ್ರದಾಯವು ಅನಾದಿ ಕಾಲದಿಂದಲೂ ಪ್ರಸಿದ್ಧವಾಗಿತ್ತು ಎಂಬುದಕ್ಕೆ ಅನೇಕ ಪುರಾಣೋಕ್ತ ಉಲ್ಲೇಖಗಳಿವೆ. ಅವುಗಳಲ್ಲಿ ಬ್ರಹ್ಮಾಂಡಪುರಾಣದ ಉಲ್ಲೇಖ ಅತ್ಯಂತ ಪ್ರಸಿದ್ಧವಾದುದು. ಅದೇ ರೀತಿ ಇತಿಹಾಸದಲ್ಲಿಯೂ ಸಹ ಮೈಲಾರನನ್ನು ಕುರಿತ ಅನೇಕ ವಿವರಗಳು ಶಾಸನಗಳ ಹಾಗೂ ದಾನಪತ್ರಗಳ ಮೂಲಕ ಉಲ್ಲಿಖಿತವಾಗಿವೆ. ಅನೇಕ ರಾಜ ಮಹಾರಾಜರು ಮೈಲಾರನ ದೇವಸ್ಥಾನಗಳಿಗೆ ದಾನ

ದತ್ತಿ ನೀಡಿದ ವಿವರಗಳನ್ನು ಗಮನಿಸಿದಾಗ ಈ ದೈವದ ಪ್ರಾಚೀನತೆಯು ಅರಿವು ನಮಗಾಗುತ್ತದೆ. ಕರ್ನಾಟಕದಲ್ಲಿ ಹುಟ್ಟಿ ಬೆಳೆದ ಈ ಸಂಪ್ರದಾಯ ತನ್ನ ಕವಲುಗಳನ್ನು ದಕ್ಷಿಣ ಭಾರತದಾದ್ಯಂತ ವಿಸ್ತರಿಸಿಕೊಂಡಿರುವ ಅಂಶ ಈ ಮೇಲಿನ ಉಲ್ಲೇಖಗಳಿಂದ ಸ್ಪಷ್ಟವಾಗುತ್ತ ಹೋಗುತ್ತದೆ. ಈ ರೀತಿಯ ಉಲ್ಲೇಖಗಳ ಮೂಲಕ ಮೈಲಾರನ ಪ್ರಾಚೀನತೆ ಹಾಗೂ ವಿಸ್ತೃತತೆಯನ್ನು ಅರಿಯುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

## ೧.೬ ನಂಬಿಕೆಗಳು ಮತ್ತು ಆಚರಣೆಗಳು

ವ್ಯಕ್ತಿಯು ಸಾಮಾಜಿಕ, ಧಾರ್ಮಿಕ ಜೀವನದಲ್ಲಿ ಅನುಸರಿಸಬೇಕಾದ ನಿಯಮ, ಕಟ್ಟುಪಾಡು, ಸಂಪ್ರದಾಯಗಳನ್ನು ಆಚಾರ ಎನ್ನುತ್ತಾರೆ. ಒಂದು ಜನಾಂಗ ಅಥವಾ ಪಂಗಡದಲ್ಲಿ ಸಾಂಪ್ರದಾಯಿಕವಾಗಿ ಬೆಳೆದುಬಂದಿರುವ ಆಚಾರ ವಿಚಾರಗಳನ್ನು ವೈಯಕ್ತಿಕ ಎನ್ನುವುದಕ್ಕಿಂತ ಸಾಮಾಜಿಕ ಅನುಷ್ಠಾನಗಳು ಎನ್ನಬಹುದು. ನಂಬಿಕೆಗಳು ಆಚರಣೆಗಳು ಧರ್ಮದ ಪ್ರಧಾನ ಅಂಶಗಳು. ಪ್ರತಿಯೊಂದು ಧರ್ಮವೂ ಅಮಾನುಷ ಶಕ್ತಿಯನ್ನು ಕುರಿತು ತಾಳಿದ ಮಾನಸಿಕ ಧೋರಣೆಗಳು ಆವಿರ್ಭಾವವಾಗುವುದು ನಂಬಿಕೆಗಳು ಹಾಗೂ ಆಚರಣೆಗಳ ಮೇಲೆಯೇ ಎಂದು ಹೇಳಬಹುದು. ನಂಬಿಕೆಗಳು ಭಾವನೆ ಹಾಗೂ ಆಲೋಚನೆಗಳ ರೂಪದಲ್ಲಿರುತ್ತವೆ. ಸಾಮಾನ್ಯವಾಗಿ ಆಚರಣೆಗಳು ಕ್ರಿಯಾ ರೂಪದಲ್ಲಿರುತ್ತವೆ. ನಂಬಿಕೆಗಳು ಆಚರಣೆಗಳಿಗೆ ಶಾಸನಗಳಂತಿದ್ದು ನಿರಂತರತೆಯನ್ನು ಕಾಪಾಡಿಕೊಂಡು ಹೋಗಲು ಸಹಕಾರ ನೀಡುತ್ತವೆ. ಒಟ್ಟಿನಲ್ಲಿ ನಂಬಿಕೆಗಳು ಹಾಗೂ ಆಚರಣೆಗಳು ಒಂದೇ ನಾಣ್ಯದ ಎರಡು ಮುಖಗಳೆಂದು ಹೇಳಬಹುದು.

ಮೈಲಾರನನ್ನು ಕುರಿತಾಗಿ ಇರುವ ನಂಬಿಕೆಗಳು ಹಾಗೂ ಆಚರಣೆಗಳು ವೈವಿಧ್ಯಪೂರ್ಣವಾದವುಗಳಾಗಿವೆ. ಇಲ್ಲಿ ಜಾನಪದ ಹಾಗೂ ಶಿಷ್ಟ ಅಂಶಗಳು ಮಿಳಿತವಾಗಿರುವುದು ಸ್ಪಷ್ಟವಾಗಿ ಕಂಡುಬರುತ್ತವೆ. ಕುರುಬ ಜನಾಂಗ ಮೂಲತಃ ಅಲೆಮಾರಿ ಜನಾಂಗಕ್ಕೆ ಸೇರಿದ್ದಾಗಿದ್ದು ಪಶುಪಾಲನ ವೃತ್ತಿಗೆ ಸೇರಿದ ಸಂಸ್ಕೃತಿಯ ಸ್ಪಷ್ಟ ಚಿತ್ರಣ ನಮಗೆ ಈ ನಂಬಿಕೆ ಹಾಗೂ ಆಚರಣೆಗಳಲ್ಲಿ ಕಂಡುಬರುತ್ತದೆ. ವೀರತ್ವ, ಬೇಟೆ,

ಭಂಡಾರ, ಮೊದಲಾದವು ಬೇಟೆಗಾರಿಕೆಯ ಪ್ರಧಾನ ಅಂಶಗಳು. ಅದೇ ರೀತಿ ತುಪ್ಪ, ಕಂಬಳಿ (ಕೋರಿ) ಮೊದಲಾದವು ಪಶುಪಾಲನೆಯ ಸಂಕೇತಗಳು. ಮೈಲಾರನ ಆಚರಣೆಗಳಲ್ಲಿ ಮೊದಲಸ್ಥಾನ ಈ ಅಂಶಗಳಿಗೆ ದೊರೆಯುತ್ತದೆ. ಇದನ್ನು ನೋಡಿದಾಗ ಕಾಡಿನ ಸಂಸ್ಕೃತಿ ಕ್ರಮೇಣ ನಾಡಿನ ಸಂಸ್ಕೃತಿಯಾಗಿ ಬದಲಾವಣೆಯಾಗಿದೆ ಎಂದು ಹೇಳಬಹುದು. ಈ ರೀತಿ ಸಂಸ್ಕೃತಿಯಲ್ಲಿನ ಪರಿವರ್ತನೆಯ ಅಂಶಗಳನ್ನು ಮೈಲಾರನನ್ನು ಕುರಿತ ನಂಬಿಕೆಗಳು ಹಾಗೂ ಆಚರಣೆಗಳ ಮೂಲಕ ಅರಿಯುವುದು ಈ ಅಧ್ಯಯನದ ಪ್ರಧಾನ ಉದ್ದೇಶವಾಗಿದೆ.

## ೧.೭ ಕಥಾನಕಗಳು

ಒಂದು ವಿಷಯವನ್ನು ಸ್ಪಷ್ಟಪಡಿಸಲು ಅನೇಕ ಐತಿಹ್ಯಗಳನ್ನೊಳಗೊಂಡ ಕಥಾನಕಗಳು ಸಹಕಾರಿಯಾಗಿರುತ್ತವೆ. ಪ್ರಾಚೀನ ಕಾಲದ ಯಾವುದೋ ಸಣ್ಣ ಘಟನೆಯನ್ನು ಆಧಾರವಾಗಿಟ್ಟುಕೊಂಡು ಅದ್ಭುತ ಸನ್ನಿವೇಶಗಳಾಗಿ ತಲೆಮಾರುಗಳ ಮೂಲಕ ಹರಿದು ಬರುವ ಕಥಾನಕಗಳು ನಿರಂತರವಾಗಿ ಬೆಳೆದು ಬರುತ್ತಿರುತ್ತವೆ. ಇವು ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ಬೆಳೆದು ಬರುತ್ತಿರುವಾಗ ಹಿಂದೆ ಇದ್ದ ಸಿದ್ಧ ವಸ್ತುವನ್ನು ಯಥಾವತ್ತಾಗಿ ಪುನರಾವರ್ತನೆ ಮಾಡದೇ ಈ ಕಥಾನಕಗಳಲ್ಲಿ ನಾವೀನ್ಯತೆಯನ್ನು ಬೆಳೆಸಿಕೊಂಡು ಬಂದಿರುವುದನ್ನು ನಾವು ಕಾಣಬಹುದು.

ಮೈಲಾರಲಿಂಗನ ಪರಂಪರೆಗೆ ಸಂಬಂಧಿಸಿದಂತೆ ಪುರಾಣಗಳು ಹಾಗೂ ಐತಿಹ್ಯಗಳನ್ನೊಳಗೊಂಡ ಅನೇಕ ಕಥಾನಕಗಳಿವೆ. ಅವುಗಳಲ್ಲಿ ಮೈಲಾರನ ಪವಾಡಗಳು, ಶೌರ್ಯದ ವರ್ಣನೆಗಳ ಜೊತೆಗೆ ಈ ಸಂಪ್ರದಾಯ ಬೆಳೆದು ಬಂದ ಬಗ್ಗೆ ವಿವರಗಳಿವೆ. ಮೈಲಾರನ ಆಚರಣೆಗಳು ಹಾಗೂ ಅವುಗಳ ಹಿಂದಿನ ನಂಬಿಕೆಗಳನ್ನು ಈ ಕಥಾನಕಗಳು ತಿಳಿಸುತ್ತವೆ. ಇವುಗಳ ಮೂಲಕ ಮೈಲಾರ ಸಂಪ್ರದಾಯವನ್ನು ಅಧ್ಯಯನ ಮಾಡುವುದು ನನ್ನ ಸಂಶೋಧನೆಯ ಭಾಗವಾಗಿದೆ.

ಹೀಗೆ ಹಲವಾರು ವಿಭಿನ್ನ ನೆಲೆಗಳಲ್ಲಿ ಮೈಲಾರನನ್ನು ಕುರಿತಾದ ಆಚರಣೆಗಳನ್ನು ಕುರಿತು ಅಧ್ಯಯನ ಮಾಡುವುದು ನನ್ನ ಈ ಸಂಶೋಧನೆಯ ಉದ್ದೇಶವಾಗಿದೆ.

**ಅಡಿಟಿಪ್ಪಣಿಗಳು :**

1. ಪ್ರೊ. ಡಿ. ಲಿಂಗಯ್ಯ – ೨೦೦೮
2. *Culture or civilisation taken in its wide ethnographic sense is that complex whole which includes knowledge, belief, art, morals, law, customs, and any other capabilities and habits acquired by man as a member of society.*
3. *The man made part of the environment [Cultural Anthropology]*
4. ಬಳ್ಳಾರಿ ಜಿಲ್ಲೆ, ಹೂವಿನ ಹಡಗಲಿ ತಾಲ್ಲೂಕು.
5. ಹಾವೇರಿ ಜಿಲ್ಲೆಯ ರಾಣೇಬೆನ್ನೂರು ತಾಲ್ಲೂಕಿನ ದೇವರ ಗುಡ್ಡ ಇದಕ್ಕೊಂದು ಅಪವಾದ.
6. ಜಾನಪದ ಕೈಪಿಡಿ, ಎಚ್. ಜೆ. ಲಕ್ಕಪ್ಪಗೌಡ. ಪು. ೩೩೦.
7. ಉಂಗುಲಾಲದ ಶ್ರೀಮನ್ಮಹಾ ಮಯಿಲಾರ ದೇವರ..............; ಮೈಲಾರ ದೇವಾಲಯದ ರಂಗಮಂಟಪದ ಶಾಸನ; ಕ್ರಿ. ಶ. ೧೪೩೬, .
8. ಪ್ರಸ್ತುತ ಶ್ರೀ ಶ್ರೀ ವೆಂಕಪ್ಪಯ್ಯ ಒಡೆಯರು
9. ಕಾಪಾಲಿಕರು ಮತ್ತು ಕಾಳಾಮುಖರು; ಡೆವಿಡ್ ಎನ್. ಲಾರೆಂಜೆನ್; ಪುಟ ೧೦೧.
10. ಅದೇ
11. ಅದೇ
12. ಅದೇ
13. ಅದೇ
14. ಚಿಕ್ಕ ಮಗಳೂರು ಜಿಲ್ಲೆ, ಕಳಸ ತಾಲ್ಲೂಕು.
15. ಕೋಟಿ ಪಯಂ ಕವಿಲೆಯ್ನನೆ

    ಕೊಟಿ ತಪೋಧನರ ಮೊದಪಿದರು । – ಗುಡ್ಡದಾನವೇರಿ ಶಾಸನ.

    *SII - XVIII, No - 349, 1183 A. D.,*
16. ಮೈಲಾರಲಿಂಗ ಖಂಡೋಬಾ, ಎಂ. ಬಿ. ನೇಗಿನಹಾಳ. – ಪುಟ ೨೮೮.
17. ಮಲ್ಲಾರಿ ಮಹಾತ್ಮೆ (ಕನ್ನಡ ಗದ್ಯ ರೂಪ); ವೈ. ಜಿ. ಕುಲಕರ್ಣಿ – ಪುಟ ೮೩–೮೪

* * *

# ಅಧ್ಯಾಯ – ೨

# ಮೈಲಾರಲಿಂಗನ ಪರಿಕಲ್ಪನೆ

## ೨.೧ ಪೀಠಿಕೆ

ಭಾರತೀಯ ಸಂಸ್ಕೃತಿ, ಪರಂಪರೆ, ಇತಿಹಾಸ ಜಗತ್ತಿನಲ್ಲಿಯೇ ಮೇಲ್ಮಟ್ಟದ್ದಾಗಿದೆ. ಅಪೌರುಷೇಯವೆಂದೇ ಕರೆಯಲ್ಪಡುವ ವೇದಗಳು ಭಾರತದ ಮೂಲಭೂತ ಸಂಸ್ಕೃತಿಯ ಪ್ರತೀಕಗಳಾಗಿವೆ. ಬಳಿಕ ಬಂದ ಉಪನಿಷತ್ತುಗಳು, ಪುರಾಣಗಳು, ರಾಮಾಯಣ, ಮಹಾಭಾರತಗಳು ಭಾರತದ ಭವ್ಯ ಸಂಸ್ಕೃತಿಯನ್ನು ಸಾರುವ ಮಹಾನ್ ಸಾಹಿತ್ಯಗಳಾಗಿವೆ. ದಿವ್ಯ ಜನಾಂಗದ ಪ್ರಚಂಡ ಅಂತಶ್ಶಕ್ತಿಯ ಸಾಧನೆಗಳ ಭವ್ಯದರ್ಶನಗಳನ್ನೊಳಗೊಂಡ ನಮ್ಮ ನಾಡು ಧರ್ಮ–ಸಂಸ್ಕೃತಿಗಳ ಬೀಡಾಗಿದೆ. ದೇವತೆಗಳೂ ಸಹ ಈ ನಾಡಿನ ಕೀರ್ತಿಯನ್ನು ಹೀಗೆ ಹೇಳಿದ್ದಾರೆ.

**ಗಾಯಂತಿ ದೇವಾಃ ಕಿಲ ಗೀತಕಾನಿ ಧನ್ಯಾಸ್ತು ಯೇ ಭಾರತ ಭೂಮಿಭಾಗೇ ।**
**ಸ್ವರ್ಗಾಪವರ್ಗಾಸ್ಪದ ಹೇತು ಭೂತೇ ಭವಂತಿ ಭೂಯಃ ಪುರುಷಾಃ ಸುರತ್ವಾತ್ ॥**

(ಸ್ವರ್ಗಕ್ಕೆ ಮುಕ್ತಿಗೆ ದ್ವಾರವಾದ ಭಾರತದಲ್ಲಿ ಹುಟ್ಟಿದವರು ದೇವತೆಗಳಿಗಿಂತ ಧನ್ಯರು)

ಭಾರತ ಭೂಮಿ ದೇವತೆಗಳ ಅವತಾರ ಭೂಮಿ. ಕಾಲಕಾಲಕ್ಕೆ ದುಷ್ಟ ಶಿಕ್ಷಣ; ಶಿಷ್ಟ ರಕ್ಷಣೆಗೋಸ್ಕರ ಭಗವಂತನು ಈ ಭೂಭಾಗದಲ್ಲಿ ಅವತಾರವೆತ್ತಿ ಧರ್ಮೋದ್ಧಾರ ಮಾಡಿದ್ದಾನೆಂದು ಪುರಾಣಗಳಲ್ಲಿ ವರ್ಣಿಸಲಾಗಿದೆ. ಜಗತ್ತಿನ ಉದ್ಧಾರಕ್ಕಾಗಿ ತನ್ನನ್ನು ನಂಬಿದವರ ರಕ್ಷಣೆಗಾಗಿ ಭಗವಂತ ಬಂದೇ ಬರುತ್ತಾನೆಂಬ ನಂಬಿಕೆಯ ಪ್ರತೀಕಗಳನ್ನು ಇಲ್ಲಿ ಕಾಣಬಹುದು[1].

ವೇದಕಾಲದಿಂದಲೂ ಅತ್ಯಂತ ಪ್ರಸಿದ್ಧವಾದ ಈ ಭೂಭಾಗವು ಪುರಾಣಗಳಲ್ಲಿ ಭರತವರ್ಷ, ಭರತಖಂಡ ಎಂದು ಕರೆಯಲ್ಪಟ್ಟಿದೆ. ಅಂದರೆ ಇದೊಂದು ಖಂಡಾಂತರ ಪ್ರದೇಶವಾಗಿದ್ದು, ಈಗಿನ ಅಫಘಾನಿಸ್ಥಾನ, ಪಾಕಿಸ್ಥಾನ, ಬಾಂಗ್ಲಾ, ನೇಪಾಲ, ಟಿಬೆಟ್,

ಬರ್ಮಾ, ಜಪಾನ್, ಇಂಡೋನೇಷ್ಯಾ, ಶ್ರೀಲಂಕಾ ಮೊದಲಾದ ಪ್ರಾಂತ್ಯಗಳು ಭಾರತದ ಭಾಗಗಳೇ ಆಗಿದ್ದವು ಎಂಬುದು ಇತಿಹಾಸ ಪ್ರಸಿದ್ಧ ವಿಷಯ. ಈಗ ಕಾರಣಾಂತರಗಳಿಂದ ಈ ಭೂಪ್ರದೇಶಗಳು ಭಾರತದಿಂದ ಪ್ರತ್ಯೇಕಗೊಂಡಿದ್ದರೂ ಭಾರತೀಯ ಸಂಸ್ಕೃತಿ ಹಾಗೂ ಪರಂಪರೆಗಳು ಈ ದೇಶಗಳಲ್ಲಿ ಈಗಲೂ ಕಂಡುಬರುತ್ತವೆ.

ವಿವಿಧತೆಯಲ್ಲಿ ಏಕತೆಯಿರುವುದು ಈ ದೇಶದ ಮತ್ತೊಂದು ವೈಶಿಷ್ಟ್ಯ. ಇಲ್ಲಿ ಎಲ್ಲ ಜಾತಿ ಮತಕ್ಕೆ ಸೇರಿದ ಜನರಿದ್ದರೂ ನಾವೆಲ್ಲ ಒಂದು ಎಂಬ ಭಾವನೆಯನ್ನು ಬೆಳೆಸಿಕೊಂಡು ಬಂದಿದ್ದಾರೆ. ಇದಕ್ಕೆ ಮುಖ್ಯಕಾರಣ ಅವರೆಲ್ಲ ಒಂದೇ ಸಂಸ್ಕೃತಿಯ ಭಾಗವಾಗಿರುವುದು.

ಇಷ್ಟೊಂದು ಶ್ರೀಮಂತ ಸಂಸ್ಕೃತಿಯನ್ನು ಹೊಂದಿರುವ ಭಾರತದೇಶದಲ್ಲಿ ಅವತಾರ ಎತ್ತಿದ ದೇವತೆಗಳು ಅಸಂಖ್ಯ. ಅವರು ಅವತರಿಸಿದ ಸ್ಥಾನಗಳು ಇಂದಿಗೂ ತೀರ್ಥಸ್ಥಾನಗಳಾಗಿ, ಪುಣ್ಯ ಕ್ಷೇತ್ರಗಳಾಗಿ ಪ್ರಸಿದ್ಧಿಯನ್ನು ಹೊಂದಿವೆ.

ಭಾರತೀಯರ ಭಕ್ತಿ ನಿಷ್ಠೆಗಳು ಯಾವುದೋ ಒಂದು ಪ್ರದೇಶಕ್ಕೆ ಸೀಮಿತವಾಗಿಲ್ಲ. ಹಿಮಾಲಯದಿಂದ ಹಿಂದೂ ಮಹಾಸಾಗರದವರೆಗೆ, ಅಸ್ಸಾಂನಿಂದ ಗುಜರಾತ್‌ವರೆಗೆ ಹಬ್ಬಿರುವ ಎಲ್ಲ ತೀರ್ಥಕ್ಷೇತ್ರಗಳೂ ನಮಗೆ ಪವಿತ್ರವೇ ಆಗಿವೆ. ತೀರ್ಥಯಾತ್ರೆ ಎಂಬುದು ಭಾರತೀಯರ ಜೀವನದಲ್ಲಿ ವೈಯಕ್ತಿಕ, ಕೌಟುಂಬಿಕ ಹಾಗೂ ಸಾಮಾಜಿಕ ಜೀವನದ ಮಹತ್ವಪೂರ್ಣ ಪ್ರೇರಕಶಕ್ತಿಯಾಗಿದೆ.

ಇಂತಹ ನಾಡಿನ ಸಂಸ್ಕೃತಿಯನ್ನು ಹಿಡಿದಿಟ್ಟಿರುವ ಪುರಾಣಗಳು ಈ ನಾಡಿನ ಹೆಮ್ಮೆಯ ಪ್ರತೀಕಗಳು. ಇವು ಕೇವಲ ಕಥೆಗಳಲ್ಲ. ಯಾವುದೊ ಒಂದು ಕಾಲಕ್ಕೆ ನಡೆದು ಹೋದ ಘಟನೆಯ ವಿಸ್ತೃತರೂಪಗಳು. ಹೀಗಾಗಿ ಪುರಾಣಗಳು ಒಂದು ಕಾಲದ ಸಂಸ್ಕೃತಿಯ ಸಾಕ್ಷ್ಯರೂಪಗಳೆಂದು ಹೇಳಬಹುದು. ಈ ರೀತಿ ಪುರಾಣಗಳಲ್ಲಿ ವರ್ಣಿತವಾದ ಕ್ಷೇತ್ರಗಳು ಇಂದಿಗೂ ಪವಿತ್ರ ಕ್ಷೇತ್ರಗಳಾಗಿ ಆಸ್ತಿಕರ ಭಾವನೆಗಳಿಗೆ ಸ್ಪಂದಿಸುತ್ತಿವೆ.

ಈ ರೀತಿಯ ಪುರಾಣಗಳು ಮತ್ತು ಕಾವ್ಯಗಳು ಪ್ರತಿಯೊಂದು ದೇಶ ಹಾಗೂ ಸಂಸ್ಕೃತಿಗಳಲ್ಲಿ ಕಂಡುಬರುತ್ತವೆ. ಇವುಗಳನ್ನು ಶಿಷ್ಟ ಹಾಗೂ ಜಾನಪದ ಎಂದು

ವಿಂಗಡಿಸಬಹುದಾದರೂ ಜನಪದ ಪುರಾಣಗಳು ಐತಿಹ್ಯಗಳಾಗಿಯೇ ಪ್ರಸಿದ್ಧವಾಗಿವೆ. ಸಾಮಾನ್ಯವಾದ ಕಥೆಯೊಂದಕ್ಕೆ ಪಾವಿತ್ರ್ಯ ಮಹತ್ವ ಹಾಗೂ ಪ್ರಮುಖತೆಯನ್ನು ತಂದು ಕೊಡುವುದು ಪುರಾಣೀಕರಣದ ಉದ್ದೇಶ. ಭಾರತೀಯ ಸಂದರ್ಭದಲ್ಲಿ ವ್ಯಕ್ತಿ ಹಾಗೂ ಕಾಲದ ಉಗಮವನ್ನು ದೈವಿಕ ನೆಲೆಗೆ ಆರೋಪಿಸಿ ಹೇಳುವುದು ಪುರಾಣಗಳ ಉದ್ದೇಶ.

ಇಂತಹ ಪುರಾಣಗಳ ಅಧ್ಯಯನವು ಅನೇಕ ಭೌಗೋಳಿಕ, ಪ್ರಾಕೃತಿಕ ವಿದ್ಯಮಾನಗಳು ಹಾಗು ಮಾನವನ ಸಂಸ್ಕೃತಿಯ ವಿಕಾಸವನ್ನು ಕುರಿತ ಅನೇಕ ಅಪೂರ್ವವಾದ ಮಾಹಿತಿಗಳನ್ನು ಒದಗಿಸುತ್ತವೆ. ಐತಿಹ್ಯಗಳಂತೆಯೇ ಇವೂ ಸಹ ನಡೆದ ಸಂಗತಿಗಳಿಗೆ ಪವಾಡ, ಅದ್ಭುತಗಳ ಅನುಲೇಪನಮಾಡಿ, ಆ ಘಟನೆಗಳು ಜನರ ನೆನಪಿನಲ್ಲಿ ಉಳಿಯುವಂತೆ ಮಾಡುತ್ತವೆ. ಮನುಷ್ಯನಿಗೆ ಪ್ರಕೃತಿಯೊಂದಿಗೆ ಇದ್ದ ಒಡನಾಟ ಹಾಗೂ ಅದನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿದ್ದ ಬಗೆಗಳನ್ನು ಪುರಾಣಗಳ ಮೂಲಕ ಸ್ಪಷ್ಟವಾಗಿ ಅರಿಯಬಹುದು.

ಕರ್ನಾಟಕದ ಮೈಲಾರಲಿಂಗೇಶ್ವರನ ದಿವ್ಯಕ್ಷೇತ್ರಗಳು ಅಂತಹ ಪವಿತ್ರ ಕ್ಷೇತ್ರಗಳಲ್ಲಿ ಕೆಲವು. ಬ್ರಹ್ಮಾಂಡಪುರಾಣದಲ್ಲಿನ ಕ್ಷೇತ್ರಖಂಡದಲ್ಲಿ ಉಲ್ಲಿಖಿತವಾಗಿರುವ ಈ ದಿವ್ಯಚರಿತ್ರೆ ದಕ್ಷಿಣ ಭಾರತದ ಸಂಸ್ಕೃತಿಯ ಪ್ರತಿಬಿಂಬವಾಗಿದೆ. ಒಂದು ಜನಾಂಗದ ಸಾಂಸ್ಕೃತಿಕ ಹಿನ್ನೆಲೆಯನ್ನು ಹೊಂದಿರುವ ಮೈಲಾರಲಿಂಗನನ್ನು ಕುರಿತ ಅಧ್ಯಯನಕ್ಕೆ ಅಪೂರ್ವವಾದ ವಿಷಯವಸ್ತುವಾಗಿದೆ. ಧರ್ಮವು ನಾಶವಾಗುವ ಸಂದರ್ಭದಲ್ಲಿ ಅವತಾರವನ್ನೆತ್ತಿ ಬಂದು ಅದನ್ನು ಕಾಪಾಡುತ್ತೇನೆ ಎಂದು ಭಗವದ್ಗೀತೆಯಲ್ಲಿ ಶ್ರೀಕೃಷ್ಣನೇ ಹೇಳಿದಂತೆ[2], ಶಿವನು ದುಷ್ಟರಾದ ಮಣಿಕ ಮಲ್ಲರನ್ನು ಸಂಹರಿಸಿ ತನ್ನನ್ನು ನಂಬಿದ ಭಕ್ತರಿಗೆ ಅಭಯವಿತ್ತನೆಂಬ ವರ್ಣನೆ ಈ ಪುರಾಣದಲ್ಲಿದೆ.

ಪರಶಿವನು ಮಾರ್ತಾಂಡ ಭೈರವನಾಗಿ ಅವತರಿಸಿ ಲೋಕೋದ್ಧಾರಕ್ಕಾಗಿ ಅಸುರ ಮರ್ಧನಗೈದು ಶ್ರೀಕ್ಷೇತ್ರ ಮೈಲಾರದಲ್ಲಿ ಸ್ವಯಂಭೂ ಲಿಂಗವಾಗಿ ನೆಲೆಸಿದ ಕಥೆ ಬ್ರಹ್ಮಾಂಡ ಪುರಾಣದಲ್ಲಿದೆ. ಈ ಪುರಾಣದ ಕ್ಷೇತ್ರಖಂಡದ ಮೊದಲ ಹದಿನೆಂಟು ಅಧ್ಯಾಯಗಳು ಹಾಗೂ ನಂತರದ ನಾಲ್ಕು ಅಧ್ಯಾಯಗಳು ಹೀಗೆ ಒಟ್ಟು ಇಪ್ಪತ್ತೆರಡು ಅಧ್ಯಾಯಗಳಲ್ಲಿ ಮೈಲಾರಲಿಂಗನ ಅವತಾರದ ಕಥೆಯನ್ನು ವರ್ಣಿಸಲಾಗಿದೆ.

ಮನುಸ್ಮೃತಿಯ ಆಧಾರದಲ್ಲಿ ಪರಶಿವನು ಮಾರ್ತಾಂಡ ಭೈರವನಾಗಿ ಅವತರಿಸಿದ್ದು ಹಾಗೂ ರಾಕ್ಷಸ ಸಂಹಾರಮಾಡಿದ್ದು ಕೃತಯುಗದಲ್ಲಿ. ಈ ಲೆಕ್ಕಾಚಾರದ ಪ್ರಕಾರ ಮೈಲಾರಲಿಂಗನು ಅವತರಿಸಿ ಸುಮಾರು ನಲವತ್ತು ಲಕ್ಷ ವರ್ಷಗಳಾಗಿವೆ ಎಂದು ಅಂದಾಜು ಮಾಡಬಹುದು.

## ೨.೨ ಅವತಾರದ ಹಿನ್ನೆಲೆ

ಬಲಿ ಚಕ್ರವರ್ತಿಗೆ ಮಕ್ಕಳಿಲ್ಲದ ಕಾರಣ ಅವನು ಶಿವನನ್ನು ಕುರಿತು ತಪಸ್ಸು ಮಾಡಿದನು. ಅವನ ತಪಸ್ಸಿನಿಂದ ಸಂತೃಪ್ತನಾದ ಶಿವನು ಪಾರ್ವತಿಯೊಡನೆ ಪ್ರತ್ಯಕ್ಷನಾಗಿ ಏನು ವರಬೇಕು ಕೇಳು ಎಂದಾಗ, ಬಲಿ ಚಕ್ರವರ್ತಿಯು "ನನಗೆ ಅಪರೂಪದ ಸಂತಾನವನ್ನು ಕರುಣಿಸು. ಅವರು ಕೈಲಾಸವನ್ನೇ ಧರೆಗಿಳಿಸುವ ಸಾಮರ್ಥ್ಯವನ್ನು ಹೊಂದಿದವರಾಗಿರಬೇಕು" ಎಂದು ಪ್ರಾರ್ಥಿಸಿದನು. ಶಿವನು ತಥಾಸ್ತು ಎಂದು ಹೇಳಿ ಬಲಿ ಚಕ್ರವರ್ತಿಯ ಆಸೆಯನ್ನು ಪೂರೈಸಿದನು.

ಕಾಲಾಂತರದಲ್ಲಿ ಬಲಿಯ ಇಬ್ಬರು ರಾಣಿಯರು ಗರ್ಭವತಿಯರಾಗಿ ಪುತ್ರರತ್ನರಿಗೆ ಜನ್ಮ ನೀಡಿದರು (ಮುಂದೆ ಕಾಲ ಕ್ರಮದಲ್ಲಿ ಬಲಿಯ ಇನ್ನಿತರ ಪತ್ನಿಯರಲ್ಲಿ ಬಾಣಾಸುರ ಮೊದಲಾದ ನೂರು ಮಕ್ಕಳು ಜನಿಸಿದರೆಂದು ಕೂರ್ಮಪುರಾಣದಲ್ಲಿ ಹೇಳಲಾಗಿದೆ.)

ಆಮೇಲೆ ಬಲಿಯು ತನ್ನ ಕುಲಗುರು ಶುಕ್ರಾಚಾರ್ಯರ ಆದೇಶದಂತೆ ಹಿರಿಯ ಮಗನಿಗೆ ಮಲ್ಲಾಸುರನೆಂದು, ಕಿರಿಯುವನಿಗೆ ಮಣಿಕಾಸುರನೆಂದು ನಾಮಕರಣ ಮಾಡಿದನು. ಅನಂತರ ಶುಕ್ರಾಚಾರ್ಯರೇ ಮುಂದೆ ನಿಂತು ಈ ಬಾಲಕರಿಗೆ ವಿದ್ಯಾಭ್ಯಾಸ ಮಾಡಿಸಿದರು.

ಬಲಿಚಕ್ರವರ್ತಿಯು ಮಹತ್ವಾಕಾಂಕ್ಷಿಯಾಗಿದ್ದನು. ನೂರು ಯಾಗಗಳನ್ನು ಮಾಡಿದರೆ ಇಂದ್ರಪದವಿ ದೊರಕುವುದೆಂಬ ಪ್ರತೀತಿಯಿದೆ. ಅದರಂತೆ ತೊಂಬತ್ತೊಂಬತ್ತು ಯಾಗಗಳನ್ನು ಪೂರೈಸಿದ್ದ ಬಲಿಯು ನೂರನೆಯ ಯಾಗಕ್ಕೆ ಸಿದ್ಧತೆ ಮಾಡಿಕೊಂಡನು. ಈ ಸಂದರ್ಭದಲ್ಲಿ ರಾಜ್ಯಕ್ಕೆ ರಾಜನನ್ನಾಗಿ ತನ್ನ ಮಗ ಮಲ್ಲಾಸುರನನ್ನು ನೇಮಿಸಿದನು.

ಬಲಿಯ ಈ ಯಾಗದ ಬಗ್ಗೆ ಕೇಳಿದ ಇಂದ್ರನು ತನ್ನ ಪದವಿಯನ್ನು ಉಳಿಸಿಕೊಳ್ಳಲು ವಿಷ್ಣುವಿನ ಮೊರೆಹೋದನು. ವಿಷ್ಣುವು ವಾಮನ ರೂಪಿಯಾಗಿ ಬಂದು ಮೂರು ಪಾದದಷ್ಟು

ಭೂಮಿಯನ್ನು ದಾನವಾಗಿ ಬೇಡಿದನು. ನಂತರದಲ್ಲಿ ಒಂದನೆಯ ಪಾದದಿಂದ ಆಕಾಶಲೋಕವನ್ನು, ಎರಡನೆಯ ಪಾದದಿಂದ ಭೂಲೋಕವನ್ನು ಅಳೆದು ಮೂರನೆಯ ಪಾದವನ್ನು ಬಲಿಯ ತಲೆಯ ಮೇಲಿಟ್ಟು ಅವನನ್ನು ಪಾತಾಳಕ್ಕೆ ತಳ್ಳಿದನು.

ಮಲ್ಲಾಸುರ ಹಾಗೂ ಮಣಿಕಾಸುರರು ತಮ್ಮ ತಂದೆಯ ಯಾಗ ಯಶಸ್ವಿಯಾಗಿ ಅವನು ಇಂದ್ರನಾಗುವುದನ್ನು ಕಣ್ಣಾರೆ ನೋಡಬೇಕೆಂದುಕೊಂಡಿದ್ದರು. ಆದರೆ ವಾಮನನ ಕಾರ್ಯದಿಂದ ಅವರ ಕನಸು ಭಗ್ನವಾಯಿತು. ತಮ್ಮ ತಂದೆಯನ್ನು ನಾಶಗೊಳಿಸಿದ್ದಕ್ಕೆ ಪ್ರತೀಕಾರವನ್ನು ತೀರಿಸಿಕೊಳ್ಳಲು ನಿರ್ಧರಿಸಿದರು. ಇದಕ್ಕಿದ್ದ ಒಂದೇ ದಾರಿಯೆಂದರೆ ದೇವತೆಗಳ ಹಾಗೂ ದೈವಭಕ್ತರ ಮೇಲೆ ಹಲ್ಲೆನಡೆಸುವುದು. ಈ ಇಬ್ಬರೂ ಈಗ ಅಕ್ಷರಶಃ ರಾಕ್ಷಸರಾಗಿ ಬದಲಾದರು.

ಹೀಗೆ ಅಸುರೀ ವೃತ್ತಿಯನ್ನು ತಮ್ಮದಾಗಿಸಿಕೊಂಡ ಮಣಿಕ ಮಲ್ಲರು ವಿಷ್ಣುವಿನ ಮೇಲೆ ಸೇಡು ತೀರಿಸಿಕೊಳ್ಳಲು ನಿರ್ಧರಿಸಿದರು. ಇದೇ ಸಂದರ್ಭದಲ್ಲಿ ಬಂದ ನಾರದರು ನೀವು ದೇವತೆಗಳಿಗಿಂತಲೂ ಬಲಶಾಲಿಗಳಾಗಬೇಕು. ಅದಕ್ಕಾಗಿ ಬ್ರಹ್ಮನನ್ನು ಕುರಿತು ಘೋರತಪಸ್ಸು ಮಾಡಿ ಅಜೇಯವಾದ ವರವನ್ನು ಪಡೆಯಿರಿ ಎಂದು ಹೇಳಿದರು. ಅದನ್ನು ಕೇಳಿದ ಅಸುರರು ಮಂತ್ರಿಗಳಿಗೆ ರಾಜ್ಯಭಾರ ಒಪ್ಪಿಸಿ ತಪಸ್ಸಿಗಿಳಿದರು. ಇವರ ತಪಸ್ಸಿಗೆ ಮೆಚ್ಚಿದ ಬ್ರಹ್ಮನು ಪ್ರತ್ಯಕ್ಷನಾಗಿ ಏನು ವರಬೇಕೋ ಕೇಳಿಕೊಳ್ಳಿ ಎಂದನು. ಆಗ ಆ ಅಸುರರು ನಮಗೆ ಯಾವ ದೇವತೆಯಿಂದಲೂ ಮರಣ ಬರಬಾರದು. ತ್ರಿಶೂಲಧಾರಿಯಿಂದಲೂ ಚಕ್ರಪಾಣಿಯಿಂದಲೂ ಮರಣವಾಗಬಾರದು ಎಂದು ಕೇಳಿದರು. ಬ್ರಹ್ಮನು ಹಾಗೆಯೇ ಆಗಲಿ ಎಂದು ಹೇಳಿದನು.

ಬ್ರಹ್ಮನಿಂದ ವರ ಪಡೆದ ಅಸುರರು ಮತ್ತರಾಗಿ ಋಷಿಮುನಿಗಳ ಮೇಲೆ ದಾಳಿಯಿಡಲು ಆರಂಭಿದರು. ಹೀಗೆ ಒಮ್ಮೆ ತುಂಗಭದ್ರಾ ತೀರದಲ್ಲಿರುವ ಮಣಿಚೂಲ ಪರ್ವತದ ಬಳಿ ತಿರುಗಾಡುತ್ತಿದ್ದಾಗ ಅಲ್ಲಿ ಋಷ್ಯಾಶ್ರಮವೊಂದನ್ನು ಕಂಡ ಅವರು ಅಲ್ಲಿನ ಋಷಿಮುನಿಗಳ ಮೇಲೆ ದಾಳಿಯಿಟ್ಟು ಅಲ್ಲಿನ ಯಜ್ಞ – ಯಾಗಾದಿಗಳನ್ನು ಧ್ವಂಸಗೊಳಿಸಿದರು.

ಇವರ ಉಪಟಳದಿಂದ ತತ್ತರಿಸಿದ ಋಷಿ ಮುನಿಗಳು ದೇವೇಂದ್ರನ ನೆರವು ಪಡೆಯಲು ಅಮರಾವತಿಗೆ ಹೋದರು. ಅಲ್ಲಿ ಅವನು ತನ್ನ ನಿಸ್ಸಹಾಯಕತೆಯನ್ನು ತೋರಿಸಿದನು.

ಋಷಿಗಳು ಬ್ರಹ್ಮನ ಬಳಿಗೇ ತೆರಳಿದರು. ಅಸಹಾಯಕನಾದ ಬ್ರಹ್ಮನು ಎಲ್ಲರೊಡಗೂಡಿ ವೈಕುಂಠಕ್ಕೆ ಬಂದನು. ವಿಷ್ಣುವು ಇವರ ಸಂಕಷ್ಟಗಳನ್ನು ಕೇಳಿ ದೇವತೆಗಳೇ ಈ ದೈತ್ಯರು ಕೈಲಾಸದ ದ್ವಾರಪಾಲಕರಾದ ಮಾಯಿಗಳು[5]. ನಂದಿಯಿಂದ ಶಾಪಗ್ರಸ್ತರಾಗಿ ಈಗ ಅಸುರರಾಗಿದ್ದಾರೆ[6]. ಇವರಿಗೆ ಪರಶಿವನಿಂದಲೇ ಮರಣವಿದೆ ಎಂಬ ವರವಿದೆ. ಆ ಕಾರಣದಿಂದ ಇದು ಶಿವನಿಂದ ಮಾತ್ರ ಆಗಬೇಕಾದ ಕಾರ್ಯ ಎಂದನು.

ಅನಂತರದಲ್ಲಿ ವಿಷ್ಣುವಿನ ನೇತೃತ್ವದಲ್ಲಿ ದೇವಾನುದೇವತೆಗಳು ಕೈಲಾಸಕ್ಕೆ ತೆರಳಿದರು. ಅಲ್ಲಿ ಶಿವನಿಗೆ ಮಣಿಕಾಸುರ– ಮಲ್ಲಾಸುರರ ದೌರ್ಜನ್ಯವನ್ನು ಕುರಿತು ಹೇಳಿದಾಗ ಅವನು ಏಳು ಕೋಟಿ ದೇವತೆಗಳು ಒಟ್ಟಿಗೆ ಸೇರಿ ಯುದ್ಧ ಮಾಡಿದಾಗ ಮಾತ್ರ ಅವರ ಮರಣ ಎಂಬ ಸಂಕಲ್ಪವಿದೆ. ಆದ್ದರಿಂದ ನೀವೆಲ್ಲ ಇಲ್ಲಿಯೇ ಇದ್ದು ಯುದ್ಧ ಸನ್ನದ್ಧರಾಗಿ ಎಂದು ಹೇಳಿದನು.

ಆದರೆ ಬ್ರಹ್ಮದೇವರ ವರಪ್ರಸಾದದಂತೆ ಶಿವ ಅಥವಾ ವಿಷ್ಣುವಿನಿಂದ ಮರಣ ಬಾರದು. ಆದ್ದರಿಂದ ಶಿವನು ಪ್ರಳಯ ಕಾಲದ ರುದ್ರನಂತೆ ಮಾರ್ತಾಂಡ ಭೈರವನಾದನು. ಕೊರಳಲ್ಲಿ ರುಂಡಮಾಲೆ, ಕೈಯ್ಯಲ್ಲಿ ಡಮರುಗ, ಖಡ್ಗ, ಕಪಾಲ, ಕರಿಯ ಕಂಬಳಿಯ ನಿಲುವಂಗಿ ಹೀಗೆ ವಿಶಿಷ್ಟ ರೂಪ ಧರಿಸಿದನು. ಶಿವನು ಗಂಗೆ ಹಾಗೂ ಗೌರಿಯರನ್ನು ಕುರಿತು ನೀವೂ ನನ್ನ ಜೊತೆ ರಣರಂಗಕ್ಕೆ ತೆರಳಲು ಸಿದ್ಧರಾಗಿ ಎಂದನು. ಆಗ ಗಂಗೆ ಹಾಗೂ ಪಾರ್ವತಿ ಇಬ್ಬರೂ ಸೇರಿ (ಗಂಗೆ ಮತ್ತು ಮಾಳಮ್ಮ) ಗಂಗೆ ಮಾಳಮ್ಮನ ರೂಪದಲ್ಲಿ ರಾಜಕುಮಾರಿಯ ವೇಷಧರಿಸಿ ಶಿವನ ಜೊತೆಗೂಡಿದರು.

ಬಳಿಕ ವಿಷ್ಣುವು ನಂದಿಯ ಕೊಂಬುಗಳನ್ನು ಮುರಿದು ಭಂಡಾರವನ್ನಾಗಿ ತೇಯ್ದು ಶಿವನಿಗೆ ಲೇಪಿಸಿದನು. ಭೈರವನು ಮಹಾ ಆಕ್ರೋಶದಿಂದ ನರ್ತಿಸುತ್ತಾ ಕೆದರಿದ ಕೆಂಜಡೆಯನ್ನು ನೆಲಕ್ಕಪ್ಪಳಿಸಿದನು. ಆಗ ಮಾರಿಯ ಉಗಮವಾಯಿತು. ಅವಳು ಅಸುರ ಸಂಹಾರಕ್ಕೆ ದೇವಾನುದೇವತೆಗಳ ಶಕ್ತಿಯನ್ನು ಗ್ರಹಿಸಿಕೊಂಡು ಯುದ್ಧಕ್ಕೆ ಸಿದ್ಧಳಾದಳು.

ಅನಂತರ ವಿಷ್ಣುವನ್ನು ಕುರಿತು ನಮ್ಮಿಬ್ಬರಲ್ಲಿ ಯಾವುದೇ ಭೇದವಿಲ್ಲ. ನನ್ನ ಜೊತೆ ನೀನು ಸಹಕರಿಸಬೇಕು. ಹೆಗ್ಗಡೇಶ್ವರನಾಗಿ[7] ಏಳುಕೋಟಿ ದೇವಸೇನೆಯ ಮಹಾ

ದಂಡನಾಯಕನಾಗಿ ಸೇನೆಯನ್ನು ಮುನ್ನಡೆಸಬೇಕು. ಅಷ್ಟೇ ಅಲ್ಲ ಮಹಾ ಮಂತ್ರಿಯಾಗಿ ದೇವತೆಗಳಿಗೆ ಮಾರ್ಗದರ್ಶನ ಮಾಡಬೇಕು ಎಂದು. ವಿಷ್ಣುವಿನ ಒಪ್ಪಿಗೆಯ ನಂತರ ಪರಮೇಶ್ವರನು ಷಣ್ಮುಖ[8] ಹಾಗೂ ಗಣಪತಿ[9]ಯರನ್ನು ಸಹ ತನ್ನ ಜೊತೆ ಕರೆದೊಯ್ಯಲು ನಿರ್ಧರಿಸಿದನು. ಜೊತೆಗೆ ವೀರಭದ್ರನನ್ನು ಸಹ ಕರೆದು ತನ್ನೊಡನೆ ಬರಲು ತಿಳಿಸಿದನು.

ಈ ರೀತಿ ಸಕಲ ಸನ್ನದ್ಧನಾಗಿ ಭೈರವನು ಯುದ್ಧಕ್ಕೆ ಹೊರಡುವ ಮುನ್ನ ಸಮಸ್ತ ಸೇನೆಯನ್ನು ಕುರಿತು "ಹೇ ದೇವ ಸೇನೆಯೆ, ನಾವು ಈ ರೀತಿ ರಣವಾದ್ಯಗಳನ್ನು ಬಾರಿಸುತ್ತ, ಜಯಕಾರ ಮಾಡುತ್ತ ನೇರವಾಗಿ ರಣಭೂಮಿಗೆ ತೆರಳಬಾರದು. ಆಗ ನಮ್ಮ ಶತ್ರುಗಳಿಗೆ ಇನ್ನಷ್ಟು ಸಿದ್ಧತೆಮಾಡಿಕೊಳ್ಳಲು ಸಾಧ್ಯವಾಗಬಹುದು. ಆದ್ದರಿಂದ ನಾವು ಮೌನವಾಗಿ[10] ಅವರು ಇರುವ ಪ್ರದೇಶಕ್ಕೆ ತೆರಳೋಣ" ಎಂದನು. ಇದರ ಮರ್ಮವರಿತ ದೇವತೆಗಳು ಮಣಿಚೂಲ ಪರ್ವತದ ಬಳಿ ಬಂದು ಅಲ್ಲಿ ವಿಶಾಲವಾಗಿದ್ದ ಕರಿಯ ಆಲದ ಮರದ ಬಳಿ ಬೀಡುಬಿಟ್ಟರು.

ಈ ವಿಚಾರವನ್ನು ಗೂಢಚಾರರ ಮೂಲಕ ತಿಳಿದ ಅಸುರರು ಯುದ್ಧ ಸನ್ನದ್ಧರಾಗಿರಲು ಸೇನೆಗೆ ತಿಳಿಸಿ ಅಶ್ವಾರೂಢರಾಗಿ ಕರಿಯಾಲದ ಕಡೆಗೆ ಬಂದರು. ಅಂದು ಮಾಘ ಶುದ್ಧ ಸಪ್ತಮೀ (ರಥಸಪ್ತಮೀ). ಈ ವಿಷಯ ತಿಳಿದ ಮಾರ್ತಾಂಡ ಭೈರವ ಹಾಗೂ ಅವನ ಏಳುಕೋಟಿ ಸೈನ್ಯ ಬೆಳಗಿನ ಬ್ರಾಹ್ಮೀ ಮುಹೂರ್ತದಲ್ಲಿ ಡೆಂಕನ ಮರಡಿ[11]ಯತ್ತ ನುಗ್ಗಿದರು. ಎರಡೂ ಸೈನ್ಯಗಳೂ ಸಂಧಿಸಿದವು. ಇಬ್ಬರ ನಡುವೆ ಭೀಕರವಾದ ಕಾಳಗ ನಡೆಯಿತು. ಮಹಾದಂಡನಾಯಕನಾದ ಹೆಗ್ಗಡೇಶ್ವರನು ಷಣ್ಮುಖ, ಗಣೇಶ, ಮಾರಿ ಮೊದಲಾದವರಿಗೆ ಆದೇಶ ನೀಡುತ್ತ ಸೇನೆಯನ್ನು ಮುಂದೆ ನಡೆಸಿದನು. ಷಣ್ಮುಖನು ಖರದಂಷ್ಟ್ರ[12]ನನ್ನು ಸಂಹರಿಸಿದನು. ಗಣೇಶನು ಉಲ್ಕಾಮುಖ[13]ನನ್ನು ಸಂಹರಿಸಿದನು. ನಂದಿಯು ಕುಂತಲೋಮ[14]ನನ್ನು ಸಂಹರಿಸಿದನು. ಹೀಗೆ ತಮ್ಮ ಮಕ್ಕಳೆಲ್ಲ ನಾಶವಾದಾಗ ಮಣಿಕಾಸುರನು ತನ್ನ ಅಣ್ಣ ಮಲ್ಲಾಸುರನನ್ನು ಕುರಿತು "ಅಣ್ಣಾ! ನಾನು ಹೋಗಿ ಅವರನ್ನು ಸೋಲಿಸುತ್ತೇನೆ" ಎಂದು ಹೇಳಿ ದಿವ್ಯಾಸ್ತ್ರಗಳೊಂದಿಗೆ ಡೆಂಕನ ಮರಡಿಗೆ ಹೋದನು. ಅಲ್ಲಿ ಭೈರವನು ತನ್ನ ಜೊತೆಗಾತಿ ಗಂಗಮಾಳಮ್ಮನೊಡನೆ ಅಶ್ವಾರೋಹಿಯಾಗಿ ಯುದ್ಧಕ್ಕೆ ತೊಡಗಿದನು. ಉಳಿದ ದೇವಸೇನೆ ಸಹ ಇವರೊಡನೆ ಯುದ್ಧಕ್ಕೆ ನಿಂತಿತು. ಮಣಿಕನು ದೇವಸೇನೆಯ ಜೊತೆ ಭೀಕರವಾಗಿ ಕಾದಾಡಿದನು. ಅವನ ಹೊಡೆತವನ್ನು ತಡೆಯಲಾರದೇ

ದೇವತೆಗಳು ದಿಕ್ಕಾಪಾಲಾಗಿ ಓಡಿಹೋದರು. ಇದರಿಂದ ಕ್ರೋಧಗೊಂಡ ಭೈರವನು ಮಣಿಕನ ಮೇಲೆ ಯುದ್ಧಕ್ಕೆ ನಡೆದನು. ಆದರೆ ಮಣಿಕಾಸುರನು ಭೈರವನನ್ನು ಅವನ ಕುದುರೆ ಸಮೇತ ಎತ್ತಲು ಹೋದನು. ಶಿವನ ಕುದುರೆಯ ಕಾಲು ಮಣಿಕಾಸುರನಿಗೆ ಬಲವಾಗಿ ಅಪ್ಪಳಿಸಿತು. ಸಿಡಿಲೇಟು ತಿಂದಂತೆ ಮಣಿಕನು ಬಿದ್ದು ಒದ್ದಾಡಲಾರಂಭಿಸಿದನು. ಅದೇ ಸಮಯದಲ್ಲಿ ನಾಯಿಯೊಂದು ಬಂದು ಮಣಿಕ ಮೇಲೇಳದಂತೆ ಅವನ ಕಾಲನ್ನು ಕಚ್ಚಿ ಹಿಡಿಯಿತು. ಶಿವನು ಕೆಳಗೆ ಬಿದ್ದ ಮಣಿಕಾಸುರನನ್ನು ತ್ರಿಶೂಲದಿಂದ ತಿವಿದನು. ಅಷ್ಟೇ ಅಲ್ಲದೇ ತನ್ನ ಬಲಗಾಲಿನಿಂದ ಅಸುರನನ್ನು ಹೊಸಕಿಹಾಕಲು ಬಯಸಿ ಕಾಲನ್ನೆತ್ತಿದನು. ಆಗ ಶಿವನ ಪಾದಗಳನ್ನು ಹಿಡಿದ ಮಣಿಕಾಸುರನು "ನಾನು ನಿನಗೆ ಶರಣಾಗಿದ್ದೇನೆ. ನನ್ನ ಅವಸಾನದ ಅನಂತರವೂ ಸಹ ನಿನ್ನ ಪಾದದಡಿಯಲ್ಲಿ ನನ್ನ ಶಿರಸ್ಸು ಸದಾ ಇರುವಂತೆ ಕರುಣಿಸು" ಎಂದು ಕೇಳಿದನು. ಶಿವನು ತಥಾಸ್ತು ಎಂದು ಕರುಣಿಸಿದನು. ದೇವತೆಗಳು ಜಯಘೋಷ ಮಾಡಿದರು.

ತಮ್ಮನ ಮರಣದ ಸಮಾಚಾರವನ್ನು ಕೇಳಿದ ಮಲ್ಲಾಸುರನಿಗೆ ಕೋಪ ಉಕ್ಕೇರಿತು. ಅವನು ಭೈರವ ಹಾಗೂ ಅವನ ಸೇನೆಯನ್ನು ನಾಶಪಡಿಸಲು ತನ್ನ ಸಕಲ ಸೈನ್ಯದೊಂದಿಗೆ ದಾಳಿಮಾಡಿದನು. ಸತತವಾಗಿ ಹನ್ನೊಂದು ದಿನಗಳ ಕಾಲ ಯುದ್ಧನಡೆಯಿತು. ವಿಷ್ಣುವೂ ಸಹ ತನ್ನ ಚಕ್ರ ಗದೆಗಳಿಂದ ರಾಕ್ಷಸ ಸಂಹಾರಮಾಡುತ್ತಿದ್ದನು. ಮಲ್ಲಾಸುರನು ಭೈರವನಿಗೆ ಎದುರಾದನು. ಘೋರಯುದ್ಧದ ನಂತರದಲ್ಲಿ ಶಿವನು ಸಂಕಲ್ಪಿಸಿದಂತೆ ಮಲ್ಲಾಸುರನನ್ನು ಖಡ್ಗದಿಂದ ಅಪ್ಪಳಿಸಿದನು. ಭೈರವನ ಪೆಟ್ಟನ್ನು ತಡೆಯಲಾಗದೇ ಮಲ್ಲಾಸುರನು ಭೂಮಿಯ ಮೇಲೆ ಬಿದ್ದು ಒದ್ದಾಡತೊಡಗಿದನು. ಅವನ ಅಂತಿಮ ಸಮಯದಲ್ಲಿ ಶಿವನು ಮಲ್ಲನಿಗೆ ನಿನ್ನ ಕೊನೆಯಾಸೆಯೇನೆಂದು ಕೇಳಿದನು. ಆಗ ಮಲ್ಲಾಸುರನು "ಯಾವಾಗಲೂ ನಿನ್ನ ಹೆಸರಿನ ಜೊತೆ ನನ್ನ ಹೆಸರಿರುವಂತೆ ಕರುಣಿಸು" ಎಂದು ಕೇಳಿದನು. ಶಿವನು ತಥಾಸ್ತು ಎಂದು ಕರುಣಿಸಿದನು[15].

## ಉದ್ಭವಲಿಂಗ

ಮೈಲಾರ ದೇವಾಲಯದ ಮುಖ್ಯಸ್ಥರನ್ನು ಒಡೆಯರು ಎಂದು ಕರೆಯುತ್ತಾರೆ. ಇವರು ತಮ್ಮನ್ನು ಕಪಿಲ ಋಷಿಗಳ ವಂಶಸ್ಥರು ಎಂದು ಕರೆದುಕೊಂಡಿದ್ದಾರೆ. ಈ ಕಪಿಲಋಷಿಗಳೇ

ಮೈಲಾರಲಿಂಗನ ಸ್ಥಾಪಕರು ಎಂಬ ಕಲ್ಪನೆ ಇದೆ. ಇನ್ನೊಂದು ಪರಿಕಲ್ಪನೆಯ ಪ್ರಕಾರ ಕಪಿಲ ಋಷಿಗಳು ಆದಿ ಮೀನಗುಂದಿ[16] ಎಂಬ ಕ್ಷೇತ್ರದಲ್ಲಿ ತಪಸ್ಸುಮಾಡಿ ಸಿದ್ಧಿ ಪಡೆದವರು. ಇವರು ಒಮ್ಮೆ ತಮ್ಮ ಶಿಷ್ಯಂದಿರೊಂದಿಗೆ ಪರ್ಯಟನೆ ಮಾಡುತ್ತಿದ್ದಾಗ ಒಂದು ಹಸು ಹುತ್ತವೊಂದರ ಬಳಿ ನಿಂತು ತನ್ನಷ್ಟಕ್ಕೆ ತಾನೇ ಹಾಲನ್ನು ಸುರಿಸುತ್ತಿತ್ತು. ಆಶ್ಚರ್ಯದಿಂದ ಅಲ್ಲಿ ಅಗೆದು ನೋಡಿದಾಗ ಅಲ್ಲೊಂದು ಸ್ವಯಂಭೂ ಲಿಂಗವಿದ್ದಿತು ಎಂದು ಕಥೆಯ ಮೂಲಕ ತಿಳಿದುಬರುತ್ತದೆ.[17]

ಇನ್ನೊಂದು ಘಟನೆಯ ಪ್ರಕಾರ ಕಪಿಲರು ಗಂಗೆ ಭೂಮಿಗೆ ಬರಲು ಕಾರಣರಾದವರು[18]. ಇವರು ವಿಷ್ಣುವಿನ ಅಂಶದವರು ಎಂಬ ಕಲ್ಪನೆಯೂ ಇದೆ. ಅವರು ಮಣಿಚೂಲ ಪರ್ವತದ ಬಳಿ ಗುರುಕುಲವೊಂದನ್ನು ನಡೆಸುತ್ತಿದ್ದರು. ಅವರ ಹಾಗೂ ಅವರ ಶಿಷ್ಯಂದಿರ ಅನುಕೂಲಕ್ಕೆ ಅನೇಕ ಹಸುಗಳನ್ನು ಸಾಕಿದ್ದರು. ಒಮ್ಮೆ ಒಂದು ಹಸು ಇದ್ದಕ್ಕಿದ್ದಂತೆ ಹಾಲುಕೊಡುವುದನ್ನು ನಿಲ್ಲಿಸಿತು. ಇದಕ್ಕೆ ಏನೋ ಮಹತ್ಕಾರಣವಿರಬೇಕೆಂದು ಊಹಿಸಿದ ಕಪಿಲರು ಹಸುವನ್ನು ಹಿಂಬಾಲಿಸಿದರು. ಆ ಹಸು ದಟ್ಟ ಅರಣ್ಯದಲ್ಲಿ ಒಂದು ಪೊದೆಯ ಬಳಿ ಇದ್ದ ಹುತ್ತದ ಮೇಲೆ ನಿಂತು ಕೆಚ್ಚಲಿನಿಂದ ಹಾಲುಹರಿಸಲು ಆರಂಭಿಸಿತು. ಇದನ್ನು ಕಂಡ ಕಪಿಲರು ಆಶ್ಚರ್ಯಚಕಿತರಾದರು. ಅಂದೇ ರಾತ್ರಿ ಅವರ ಕನಸಿನಲ್ಲಿ ಪರಶಿವನು ಪ್ರತ್ಯಕ್ಷನಾಗಿ ಮಣಿಕಾಸುರ ಹಾಗೂ ಮಲ್ಲಾಸುರರನ್ನು ಸಂಹರಿಸಿದ ನಾನು ಲಿಂಗ ರೂಪದಲ್ಲಿ ದರ್ಶನ ಕೊಡುತ್ತೇನೆ. ಈಗ ನಾನು ನಿನಗೆ ಯಾವ ರೂಪದಲ್ಲಿ ಪ್ರತ್ಯಕ್ಷನಾಗಿರುವೆನೋ ಅದೇ ರೂಪದಲ್ಲಿ ನೀನು ಈ ಹುತ್ತದ ಮಣ್ಣಿನಿಂದ ವಿಗ್ರಹವನ್ನು ನಿರ್ಮಿಸು ಎಂದು ಹೇಳಿದನು. ಅದರಂತೆ ಒಂದು ಶುಭದಿನ (ಮಾಘ ಶುದ್ಧ ಷಷ್ಠಿ, ಭಾನುವಾರ, ಶತತಾರಾ ನಕ್ಷತ್ರ) ಗೋಮುನಿ ಕಪಿಲರು ಹುತ್ತಕ್ಕೆ ವಿಧಿವತ್ತಾಗಿ ಪೂಜೆ ಮಾಡಿ ಹಾಲಿನಿಂದ ಅಭಿಷೇಕಮಾಡಿದರು. ಹುತ್ತದ ಮಣ್ಣು ಪಕ್ಕಕ್ಕೆ ಸರಿದಂತೆ ಅದರಡಿಯಲ್ಲಿ ಸ್ವಯಂಭೂ ಲಿಂಗ ಗೋಚರಿಸಿತು. ಕಪಿಲರು ಹುತ್ತದ ಮಣ್ಣನ್ನು ಒಂದೆಡೆ ಸಂಗ್ರಹಿಸಿ ಮೂರ್ತಿಯೊಂದನ್ನು ನಿರ್ಮಿಸಿದರು.

ಬ್ರಹ್ಮಾಂಡಪುರಾಣದ ಆಧಾರದಲ್ಲಿಯೇ ಸಂಸ್ಕೃತ ಭಾಷೆಯಲ್ಲಿ ೧೩ನೆಯ ಶತಮಾನದಲ್ಲಿ ಮಲ್ಲಾರಿ ಮಹಾತ್ಮ್ಯೆ ಎಂಬ ಪುರಾಣ ರಚಿತವಾಗಿದೆ. ಇತ್ತೀಚೆಗೆ

ಶ್ರೀಮೈಲಾರಲಿಂಗೇಶ್ವರ ದಿವ್ಯಚರಿತಾಮೃತ ಎಂಬ ಗ್ರಂಥದ ರಚನೆಯು ಆಗಿದೆ. ಈ ಎರಡೂ ಗ್ರಂಥಗಳಲ್ಲಿಯೂ ಮೇಲ್ಕಂಡ ಕಥಾನಕಗಳಿವೆ.

## ೨.೩ ಕಾವ್ಯಗಳು

ಕಾವ್ಯಗಳೂ ಸಹ ಒಂದು ವಿಷಯದ ಒಳ ಹೊರಗುಗಳನ್ನು ಅರಿಯಲು ಅನುವು ಮಾಡಿಕೊಡುತ್ತವೆ. ಜನಪದ ಕಾವ್ಯಗಳು ತಲೆಮಾರಿನಿಂದ ತಲೆಮಾರಿಗೆ ಹರಿದು ಬರುತ್ತವಾದ್ದರಿಂದ ಅವುಗಳಲ್ಲಿ ನಿರಂತರತೆಯಿರುತ್ತದೆಯೇ ವಿನಃ ಖಚಿತತೆಯ ಅಭಾವವಿರುತ್ತದೆ. ಆದರೆ ಕಾವ್ಯಗಳು ಕವಿ ಕಲ್ಪನೆ ಹಾಗೂ ಆಧಾರಗಳ ಮೂಲಕ ರಚಿತವಗಿರುತ್ತವೆ. ಹೀಗಾಗಿ ಕಾವ್ಯಗಳನ್ನು ನಿಖರ ಎನ್ನಲಾಗದಿದ್ದರೂ ಅಧ್ಯಯನದ ದೃಷ್ಟಿಯಿಂದ ಪೂರಕ ಸಾಮಗ್ರಿಯೆಂದು ಒಪ್ಪಿಕೊಳ್ಳಬಹುದು.

ಮೈಲಾರಲಿಂಗನನ್ನು ಕುರಿತಾದ ಕಾವ್ಯಗಳು ಅಷ್ಟಾಗಿ ಕಂಡುಬರುವುದಿಲ್ಲ. ಸಂಸ್ಕೃತದಲ್ಲಿ ರಚಿತವಾದ ಮಲ್ಲಾರಿ ಮಹಾತ್ಮೆಯ ಆಧಾರದ ಮೇಲೆ 'ಶ್ರೀ ಮ್ಹಾಳಾಸಾ ಮಾರ್ತಾಂಡ ಭೈರವ ಪುರಾಣಂ' ಎಂಬ ಷಟ್ಪದೀ ಕಾವ್ಯವೊಂದು ಕನ್ನಡದಲ್ಲಿ ಪ್ರಸಿದ್ಧವಾಗಿದೆ. ಇದೂ ಸಹ ಮಲ್ಲಾರಿ ಮಹಾತ್ಮೆಯಂತೆಯೇ ಮಣಿಕ ಮಲ್ಲಾಸುರರ ಕಥೆಯನ್ನು ಹೊಂದಿದ್ದು, ಸಂಸ್ಕೃತ ಕಾವ್ಯದಷ್ಟು ವಿಸ್ತಾರವಾಗಿಲ್ಲ. ಈ ಕಥೆಯಲ್ಲಿ ಮಣಿಕ ಮಲ್ಲರ ಹಿನ್ನೆಲೆಯನ್ನು ಅಷ್ಟು ವಿಸ್ತಾರವಾಗಿ ವಿಸ್ತರಿಸದೇ ನೇರವಾಗಿ ಅವರ ಉಪಟಳವನ್ನು ತಡೆಯಲಾಗದೇ ಋಷಿಗಳು ಹಾಗೂ ದೇವತೆಗಳು ಶಿವನನ್ನು ಪ್ರಾರ್ಥಿಸಿದ ವರ್ಣನೆಯಿದೆ. ಮೊದಲ ನಾಲ್ಕು ಅಧ್ಯಾಯಗಳಲ್ಲಿ ಋಷಿಗಳ ತಪೋಭೂಮಿಯ ವರ್ಣನೆ, ಮಣಿಕಾಸುರ ಮಲ್ಲಾಸುರನ ಹಾವಳಿ ಮೊದಲಾದವುಗಳಿದ್ದರೆ, ಐದನೆಯ ಅಧ್ಯಾಯದಲ್ಲಿ ವಿಶೇಷವಾಗಿ ವಿಷ್ಣುವಿನ ಮಹಿಮೆಯನ್ನು ಎತ್ತಿ ತೋರಿಸಲಾಗಿದೆ. ಒಟ್ಟು ಇಪ್ಪತ್ತೈದು ಅಧ್ಯಾಯಗಳಿರುವ ಸಂಪೂರ್ಣ ಕಥಾಮೃತವು ಬ್ರಹ್ಮಾಂಡ ಪುರಾಣದಲ್ಲಿನ ಕಥೆಯಂತೆಯೇ ಸಾಗಿದ್ದರೂ ಅಲ್ಲಲ್ಲಿ ಕವಿಯ ಕಾವ್ಯ ಸೌಂದರ್ಯದಿಂದ ಕೂಡಿದ್ದು, ಮೈಲಾರನ ಅದ್ಭುತ ವರ್ಣನೆಗಳು ಹಾಗೂ ಅವನ ಲೀಲೆಗಳನ್ನು ವರ್ಣಿಸಲಾಗಿದೆ.

**ಕಥಾ ಸಾರಾಂಶ :**

ಸತ್ವಗುಣ ಪ್ರಧಾನರಾದ ದೇವತೆಗಳನ್ನು ದೈತ್ಯರು ಅನಾದಿ ಕಾಲದಿಂದಲೂ ದ್ವೇಷಿಸುತ್ತ ಬಂದಿದ್ದಾರೆ. ಮೊದಲು ಬ್ರಹ್ಮನಿಂದ ವರ ಪಡೆದು ನಂತರ ತಮ್ಮ ಸಾಮರ್ಥ್ಯದಿಂದ ಜನರಿಗೆ ತೊಂದರೆ ಕೊಡುವುದು ಅವರ ಕ್ರಮ. ಅದೇ ರೀತಿ ಕೃತಯುಗದ ಆದಿಭಾಗದಲ್ಲಿ ಮಣಿಕಾಸುರ ಹಾಗೂ ಮಲ್ಲಾಸುರರೆಂಬ ಇಬ್ಬರು ದೈತ್ಯರು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ, ನರರೂಪಿ ಶಿವನಿಂದ ಮಾತ್ರ ತಮಗೆ ಮರಣ ಉಂಟಾಗಬೇಕು ಎಂಬ ವರವನ್ನು ಪಡೆದರು. ಬಳಿಕ ಒಮ್ಮೆ ತುಂಗಭದ್ರಾ ತೀರದಲ್ಲಿ ವಿಹಾರಕ್ಕೆಂದು ಹೊರಟಾಗ ಅಲ್ಲಿ ನಡಿಯುತ್ತಿದ್ದ ಯಜ್ಞ ಯಾಗಾದಿಗಳನ್ನು ಕಂಡು ಉದ್ರಿಕ್ತರಾಗಿ ಅಲ್ಲಿದ್ದ ಋಷಿಮುನಿಗಳ ಮೇಲೆ ದಾಳಿ ಮಾಡಿದರು.

ಅನಿರೀಕ್ಷಿತ ದಾಳಿಯಿಂದ ಕಂಗೆಟ್ಟ ಋಷಿಮುನಿಗಳು ಬ್ರಹ್ಮ ಮಾನಸಪುತ್ರರಾದ ಸನಕ, ಸನಾತನ, ಸಾನಂದ ಹಾಗೂ ಸನತ್ಕುಮಾರರನ್ನು ಸ್ಮರಿಸಿದರು. ಅವರು ಪ್ರತ್ಯಕ್ಷರಾಗಿ ದೇವೇಂದ್ರನಲ್ಲಿ ಪ್ರಾರ್ಥಿಸಿದರೆ ನಿಮ್ಮ ಕಷ್ಟ ನಿವಾರಣೆಯಾಗಬಹುದು ಎಂದು ಹೇಳಿದರು. ಅದರಂತೆ ಋಷಿಗಳು ದೇವೇಂದ್ರನಲ್ಲಿ ಬರುತ್ತಾರೆ.

ಮುಂದಿನ ಭಾಗದಲ್ಲಿ ದೇವಲೋಕದ ವರ್ಣನೆ ಹಾಗೂ ಇಂದ್ರನ ವೈಭೋಗಗಳ ವರ್ಣನೆಯನ್ನು ಕವಿ ಸುಂದರವಾಗಿ ಮಾಡಿದ್ದಾರೆ. ದೇವೇಂದ್ರನಲ್ಲಿಗೆ ಬಂದ ಋಷಿ ಮುನಿಗಳು ತಮ್ಮ ಕಷ್ಟವನ್ನು ಹೇಳಿದಾಗ ದೇವೇಂದ್ರನು ಶಿವನ ಹೊರತು ಬೇರೆ ಯಾರಿಂದಲು ಅವರನ್ನು ಸಂಹರಿಸಲು ಸಾಧ್ಯವಿಲ್ಲ. ಆದ್ದರಿಂದ ಇದು ನನ್ನ ಕೈಲಾಗದ ಕೆಲಸ ಎಂದು ಕೈಚೆಲ್ಲಿ ಕುಳಿತುಬಿಡುತ್ತಾನೆ. ಋಷಿಗಳು ಅಸಹಾಯಕರಾಗಿ ವೈಕುಂಠಕ್ಕೆ ಹೋಗಿ ವಿಷ್ಣುವನ್ನು ಕುರಿತು ನೀನು ಬಂದು ಶಿವನಿಗೆ ನಮ್ಮ ಪರವಾಗಿ ವಿನಂತಿಸು ಎಂದು ಬೇಡಿಕೊಳ್ಳುತ್ತಾರೆ. ಈ ಭಾಗದಲ್ಲಿ ವೈಕುಂಠದ ವರ್ಣನೆ ಹಾಗೂ ಋಷಿ ಮುನಿಗಳು ಶ್ರೀಮನ್ ನಾರಾಯಣನನ್ನು ಪ್ರಾರ್ಥಿಸಿದ ವಿವರವಿದೆ. ವಿಷ್ಣುವು ತನ್ನ ಜ್ಞಾನಚಕ್ಷುವಿನಿಂದ ಇವರ ಕಷ್ಟವನ್ನು ಅರಿತು ಶಿವನು ಮಾರ್ತಾಂಡ ಭೈರವನ ರೂಪದಲ್ಲಿ ಬಂದು ಮಣಿಕ ಮಲ್ಲರನ್ನು ಸಂಹರಿಸುವ ಕಾಲ ಹತ್ತಿರವಾಗಿದೆ. ಬನ್ನಿ ನಾವೆಲ್ಲ ಸೇರಿ ಕೈಲಾಸಕ್ಕೆ ಹೋಗೋಣ ಎಂದು ಹೇಳಿ ಎಲ್ಲರೊಡನೆ ಕೂಡಿ ಕೈಲಾಸಕ್ಕೆ ಹೊರಟನು.

ಮುಂದಿನ ಅಧ್ಯಾಯದಲ್ಲಿ ಕೈಲಾಸದ ವರ್ಣನೆಯನ್ನು ಮಾಡುವ ಕವಿ ಶಿವ ಪಾರ್ವತಿಯರ ಸೌಂದರ್ಯ ವರ್ಣನೆಗೂ ಒತ್ತು ನೀಡಿದ್ದಾನೆ. ವಿಷ್ಣುವಿನೊಡನೆ ತನ್ನಲ್ಲಿಗೆ ಬಂದ ಋಷಿಮುನಿಗಳನ್ನು ಆದರದಿಂದ ಬರಮಾಡಿಕೊಂಡ ಶಂಕರನು ಅವರ ಸಮಸ್ಯೆಯನ್ನು ಕೇಳಿ ಅವರನ್ನು ಸಂತೈಸಿ, ತಾನು ಭೈರವನಾಗಿ ಅವತರಿಸುವುದಾಗಿ ಹೇಳಿ ಅಭಯವಿತ್ತನು.

ತನ್ನ ಕೆಂಜೆಡೆಯಿಂದ ಘೃತಮಾರಿಯನ್ನು ಸೃಷ್ಟಿಸಿದ ಶಿವನು ಭೈರವ ರೂಪಧಾರಣ ಮಾಡಿ, ಪಾರ್ವತಿಯನ್ನು ಮಾಲತೀ ರೂಪದಲ್ಲಿ ತನ್ನೊಂದಿಗೆ ಕರೆದುಕೊಂಡು ಬಿಳಿ ಕುದುರೆಯನ್ನೇರಿ ಬಲಗಡೆಯ ಎರಡು ತೋಳುಗಳಲ್ಲಿ ತ್ರಿಶೂಲ , ಖಡ್ಗಗಳನ್ನು ಧರಿಸಿ, ಎಡಗಡೆಯ ಎರಡು ತೋಳುಗಳಲ್ಲಿ ಡಮರುಗ ಹಾಗೂ ಪಾನಪಾತ್ರೆಗಳನ್ನು ಧರಿಸಿ, ಕೊರಳಲ್ಲಿ ರುಂಡಮಾಲೆಯನ್ನು ಧರಿಸಿ, ಸಕಲ ಅಂಗಾಂಗಗಳಿಗೆ ಭಂಡಾರವನ್ನು ಲೇಪಿಸಿಕೊಂಡು, ಅಸುರವಧೆಗೆ ಸಿದ್ಧನಾಗಿ ಹೊರಟನು. ಏಳು ಕೋಟಿ ದೇವಗಣಗಳು ವಿಷ್ಣುವಿನ ನೇತೃತ್ವದಲ್ಲಿ ಸಿದ್ಧರಾದರು. ಗಣಪತಿ ಷಣ್ಮುಖರೂ ಸಹ ಸಹಾಯಕ್ಕೆ ಬಂದರು. ಇವರೆಲ್ಲರೊಡಗೂಡಿದ ಶಿವನು ಮಣಿಕ ಮಲ್ಲರಿರುವ ಪ್ರದೇಶಕ್ಕೆ ಬಂದನು. ಮಣಿಕ ಮಲ್ಲರೂ ಸಹ ಭೈರವನೊಡನೆ ಯುದ್ಧಕ್ಕೆ ಸಿದ್ಧರಾಗಿ ನಿಂತರು. ಎರಡೂ ಬಣಗಳ ನಡುವೆ ನಿರಂತರವಾಗಿ ಹನ್ನೊಂದು ದಿನಗಳ ಕಾಲ ಯುದ್ಧ ನಡೆಯಿತು. ಅನೇಕಾನೇಕ ರಾಕ್ಷಸವೀರರು ಕೊಲ್ಲಲ್ಪಟ್ಟರು. ಬಳಿಕ ಮಣಿಕನು ತನ್ನ ಅಣ್ಣನ ಅಪ್ಪಣೆ ಪಡೆದು ಶಿವನ ಜೊತೆ ಯುದ್ಧಕ್ಕೆ ಹೋದನು. ಭಯಂಕರವಾದ ಯುದ್ಧ ನಡೆಯಿತು. ಶಿವನು ತನ್ನ ತ್ರಿಶೂಲದಿಂದ ಮಣಿಕನ ಎದೆಗೆ ಚುಚ್ಚಿದನು. ಆಗ ಆ ರಾಕ್ಷಸನು ತನ್ನ ಮಾಯಾ ಶಕ್ತಿಯಿಂದ ಘೋರವಾದ ಕಾಡುಕುದುರೆಯಾಗಿ ಬಂದು ಶಿವನ ಮುಂದೆ ಹೇಷಾರವ ಮಾಡಿದನು. ಹೀಗೆ ಬಂದ ಮಣಿಕನನ್ನು ಶಿವನು ತನ್ನ ಖಡ್ಗದಿಂದ ಕತ್ತರಿಸಿದಾಗ ಅವನು ನಿಜರೂಪದಲ್ಲಿ ಕೆಳಗೆ ಬಿದ್ದನು. ಭೈರವನು ಅವನನ್ನು ತುಳಿಯಲೆಂದು ತನ್ನ ಕಾಲುಗಳನ್ನೆತ್ತಿದಾಗ ಅವನಿಗೆ ತನ್ನ ಪೂರ್ವಾಂತರಗಳ ನೆನಪಾಗಿ, ತಾನು ಶಿವನೊಡನೆ ಹೋರಾಡಿದ ಸ್ಥಾನವು ತನ್ನ ಹೆಸರಿನಲ್ಲಿ ಪುಣ್ಯಕ್ಷೇತ್ರವಾಗಿ ಪರಿಗಣಿಸಲ್ಪಡಲಿ ಎಂದು ಪ್ರಾರ್ಥಿಸಿದನು.

ಹೀಗೆ ಮಣಿಕನ ಮರಣಾನಂತರ ಮತ್ತಷ್ಟು ಕ್ರೋಧಗೊಂಡ ಮಲ್ಲಾಸುರನು ಶಿವನ ಮೇಲೆ ಯುದ್ಧ ಸಾರಿದನು. ಆದರೆ ಶಿವನು ಮಲ್ಲನು ತನ್ನ ಪರಮ ಭಕ್ತನಾದ ಮಣಿಕನ ಅಣ್ಣನು. ಆದ್ದರಿಂದ ಅವನ ಜೊತೆ ಯುದ್ಧ ಮಾಡುವುದು ಬೇಡ ಎಂದು ನಿರ್ಧರಿಸಿ, ವಿಷ್ಣುವನ್ನು ಅವನ ಬಳಿ ಸಂಧಾನಕ್ಕೆ ಕಳಿಸುತ್ತಾನೆ. ಆದರೆ ಮಲ್ಲಾಸುರನು ಸಂಧಾನವನ್ನು ತಿರಸ್ಕರಿಸಿ ಯುದ್ಧಕ್ಕೆ ಸಿದ್ಧನಾಗುತ್ತಾನೆ.

ಆಮೇಲೆ ನಡೆದ ಯುದ್ದದಲ್ಲಿ ಮಲ್ಲಾಸುರನನ್ನು ಶಿವನು ಸಂಹರಿಸಲು ಬಹಳಷ್ಟು ಪ್ರಯತ್ನಿಸಿದರೂ ಅದು ಸಾಧ್ಯವಾಗುವುದಿಲ್ಲ. ಆ ಸಂದರ್ಭದಲ್ಲಿ ವೇದಗಳೆಂಬ ನಾಯಿಗಳು ಎಲ್ಲಿಂದಲೋ ಹಾರಿ ಬಂದು ದೈತ್ಯನ ತೊಡೆಗಳನ್ನು ಹರಿದವು. ಭಯಂಕರವಾಗಿ ಬೊಗಳುತ್ತ ಹಾರಿ ಕಚ್ಚುತ್ತಿರುವ ಆ ನಾಯಿಗಳನ್ನು ಕಂಡ ಆ ರಾಕ್ಷಸನು ಅವುಗಳನ್ನು ಒದೆಯಲು ಹೋದನು. ಅವು ಮತ್ತಷ್ಟು ಸಿಟ್ಟಿನಿಂದ ಅವನ ಗಂಟಲಿಗೆ ಹಾರಿ ಸಿಕ್ಕಷ್ಟು ಮಾಂಸವನ್ನು ತಿಂದವು. ಹೀಗೆ ಹಣ್ಣು ಹಣ್ಣಾದ ಆ ರಾಕ್ಷಸನನ್ನು ತನ್ನ ಶೂಲದಿಂದ ನಾಶಪಡಿಸಲೆಂದು ಶಿವನು ಮುಂದಾದಾಗ ಅವನಿಗೆ ಜ್ಞಾನೋದಯವಾಯಿತು. ಆಗ ಅವನು ಶಿವನನ್ನು ಕುರಿತು – ನಿನ್ನ ಹೆಸರಿಗೆ ಮೊದಲು ನನ್ನ ಹೆಸರು ಬರಲಿ ಎಂದು ಪ್ರಾರ್ಥಿಸಿದನು. ಶಿವನು ಅದರಂತೆಯೇ ವರನೀಡಿದನು.

ನಂತರದಲ್ಲಿ ಋಷಿಮುನಿಗಳ ಬಯಕೆಯಂತೆ ಶಿವನು ಮಣಿಚೂಲ ಪರ್ವತದಲ್ಲಿ ತನ್ನ ಹೆಂಡತಿ ಗಂಗಿಮಾಳಮ್ಮ ಹಾಗೂ ಮಕ್ಕಳಾದ ಗಣೇಶ ಷಣ್ಮುಖರೊಂದಿಗೆ ಅನುಗಾಲ ವಾಸಿಸತೊಡಗಿದನು.

ಈ ರೀತಿ ಪುರಾಣ ಹಾಗೂ ಕಾವ್ಯಗಳಲ್ಲಿ ಪರಿಕಲ್ಪಿತವಾಗಿರುವ ಶ್ರೀಮೈಲಾರಲಿಂಗೇಶ್ವರನು ಬ್ರಾಹ್ಮಣರಾದಿಯಾಗಿ ಎಲ್ಲ ಜನ ಜಾತಿಗಳ ಪ್ರಮುಖ ಆರಾಧ್ಯ ದೈವವಾಗಿದ್ದಾನೆ. ಉದ್ಭವ ಲಿಂಗ ಹಾಗೂ ಮೃಣ್ಮಯ ಮೂರ್ತಿಯನ್ನು ಹೊಂದಿರುವ ಶೈವ ಸಂಪ್ರದಾಯದ ವಿಶಿಷ್ಟ ಆರಾಧನೆಗಳು ಈ ಕ್ಷೇತ್ರದಲ್ಲಿ ಕಂಡುಬರುತ್ತವೆ. ಈ ದೈವವನ್ನು ಕುರಿತ ಆಚರಣೆ, ನಂಬಿಕೆ, ವಿಧಿ, ಹರಕೆ, ಪವಾಡ ಮೊದಲಾದವು ಪೌರಾಣಿಕ ಹಿನ್ನೆಲೆಯನ್ನು ಹೊಂದಿರುವುದು ಈ ಕ್ಷೇತ್ರದ ವಿಶೇಷವಾಗಿದೆ.

**ಅಡಿಟಿಪ್ಪಣಿಗಳು :**

1. *ಭಾರತ ದರ್ಶನ – ಲೇ. ವಿದ್ಯಾನಂದ ಶೆಣ್ಯೈ ಪುಟ – ೧*
2. *ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।*
   *ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಾಂ ಸೃಜಾಮ್ಯಹಂ ॥ (ಭಗವದ್ಗೀತೆ)*
3. *ಬ್ರಹ್ಮಾಂಡ ಪುರಾಣ – ಸಂಗ್ರಹ; ಕೆ. ವಿ. ಶರ್ಮಾ*
4. *ಮಣಿಕಾಸುರ – ಮಲ್ಲಾಸುರ*
5. *ವೈಕುಂಠಕ್ಕೆ ಜಯ ವಿಜಯರಿರುವಂತೆ ಕೈಲಾಸಕ್ಕೆ ಮಾಯಿಗಳು ದ್ವಾರಪಾಲಕರು. (ವೈಷ್ಣವ ಸಂಪ್ರದಾಯದ ಅನುಸರಣೆಯೂ ಆಗಿರಬಹುದು)*
6. *ಮಾಯಿಗಳು ನಂದೀಶ್ವರನನ್ನು ಕಾಣಲು ಬರುತ್ತಿದ್ದರು. ಅವರ ಭಾವನೆಯನ್ನು ಅರಿಯಲಾರದೆ, ಅವರನ್ನು ತಪ್ಪಾಗಿ ಭಾವಿಸಿದ ನಂದೀಶ್ವರನು ಅವರಿಗೆ ನೀವು ಭೂಲೋಕದಲ್ಲಿ ಹುಟ್ಟಿ ಲೋಕಕಂಟಕರಾಗಿ ಎಂದು ಶಾಪ ನೀಡಿದ – ಶ್ರೀ ಮೈಲಾರಲಿಂಗೇಶ್ವರ ದಿವ್ಯ ಚರಿತಾಮೃತ; ಲೇ. – ಶ್ರೀ ಕೃಷ್ಣಪ್ಪ. ಪುಟ – ೨೮*
7. *ಈಗಲೂ ಮೈಲಾರದಲ್ಲಿ ಹೆಗ್ಗಪ್ಪ ಎಂದು ವಿಷ್ಣುವನ್ನು ಪೂಜಿಸುತ್ತಾರೆ.*
8. *ಈಗಲೂ ಮೈಲಾರದಲ್ಲಿ ದೊಡ್ಡಯ್ಯ ಎಂದು ಪೂಜಿಸುತ್ತಾರೆ.*
9. *ಈಗಲೂ ಮೈಲಾರದಲ್ಲಿ ಚಿಕ್ಕಯ್ಯ ಎಂದು ಪೂಜಿಸುತ್ತಾರೆ.*
10. *ಇಂದಿಗೂ ಮೈಲಾರದ ಕಾರಣಿಕದ ದಿನ ಬೆಳಗಿನ ಜಾವದಲ್ಲಿ ಗುಪ್ತ ಮೌನ ಸವಾರಿ ಹೊರಡುವ ಸಂಪ್ರದಾಯವಿದೆ.*
11. *ಈಗಿನ ಕಾರಣಿಕದ ಮೈದಾನ*
12. *ಮಣಿಕಾಸುರನ ಸೇನಾಧಿಕಾರಿ*
13. *ಮಣಿಕಾಸುರನ ಸೇನಾಧಿಕಾರಿ*
14. *ಮಣಿಕಾಸುರನ ಸೇನಾಧಿಕಾರಿ*
15. *ಆದ್ದರಿಂದಲೇ ಮೈಲಾರ (ಮಲ್ಲನ ಅರಿ ಇರುವ ಸ್ಥಾನ) ಎಂಬ ಹೆಸರು ಬಂದಿದೆ ಎಂಬ ಪ್ರತೀತಿಯಿದೆ.*
16. *ಈಗಿನ ಆಂಧ್ರಪ್ರದೇಶದಲ್ಲಿವೆ.*
17. *ಇದು ಹಲವು ಕಡೆ ಬರುವ ಪುರಾಣ. (ಜನಪದ ಕವಿಸಮಯ)*
18. *ಸಗರನ ಅರವತ್ತು ಸಾವಿರ ಮಕ್ಕಳು ಕಪಿಲನ ಕೋಪಕ್ಕೆ ತುತ್ತಾಗಿ ಸುಟ್ಟು ಭಸ್ಮವಾಗುತ್ತಾರೆ. ಅವರಿಗೆ ಮುಕ್ತಿ ನೀಡಲು ಭಗೀರಥನು ದೇವಲೋಕದಿಂದ ಗಂಗೆಯನ್ನು ತರುತ್ತಾನೆ.*
19. *ಲೇಖಕರು– ಶ್ರೀ ಕೃಷ್ಣಪ್ಪ*

* * *

# ಅಧ್ಯಾಯ ೩ : ಮೈಲಾರಲಿಂಗನ ಪ್ರಾಚೀನತೆ

೧. ಶಾಸನಗಳು

೨. ಕಾವ್ಯಗಳು (ಶಿಷ್ಟ ಹಾಗೂ ಜಾನಪದ)

೩. ಇತಿಹಾಸ

# ಅಧ್ಯಾಯ – ೩

## ಮೈಲಾರಲಿಂಗನ ಪ್ರಾಚೀನತೆ

ಒಂದು ಪಂಗಡದ ಪ್ರಾಚೀನತೆಯ ಅಧ್ಯಯನದಿಂದ ಅದರ ಹಿಂದಿರುವ ಸಂಪ್ರದಾಯದ, ಸಂಸ್ಕೃತಿಯ ಪರಿಚಯ ಮುಂದಿನ ಜನಾಂಗಕ್ಕೆ ಆಗುತ್ತದೆ. ಪಂಗಡಗಳು ಬೆಳೆದುಬಂದ ದಾರಿ, ಅವುಗಳಲ್ಲಿ ಆದ ರೂಪಾಂತರ ಮೊದಲಾದವನ್ನು ಅವುಗಳ ಪ್ರಾಚೀನತೆಯ ಹಿನ್ನೆಲೆಯಿಂದ ನೋಡಿದಾಗ ಅವುಗಳ ಸ್ಪಷ್ಟಕಲ್ಪನೆ ನಮಗೆ ಸಿಗುತ್ತದೆ.

ಈ ರೀತಿಯ ಯಾವುದೇ ಒಂದು ಸಂಪ್ರದಾಯವನ್ನು ಕುರಿತು ಅಧ್ಯಯನ ಮಾಡಲು ಆಯಾ ಪಂಗಡಗಳಲ್ಲಿ ಬಂದ ಪುರಾಣ, ಐತಿಹ್ಯ, ಕಥೆ, ಕಾವ್ಯ, ನಾಟಕ ಮೊದಲಾದ ಸಾಹಿತ್ಯಿಕ ಆಕರಗಳು ಹಾಗೂ ಆಗಿನ ಕಾಲದ ಶಾಸನ, ತಾಮ್ರಪತ್ರ, ತಾಡವಾಲೆಗಳು ಸಹ ಪೂರಕ ಸಾಮಗ್ರಿಗಳಾಗುತ್ತವೆ. ವಿಶೇಷವಾಗಿ ಕಾಲ ನಿರ್ಣಯದ ಸಂದರ್ಭದಲ್ಲಿ ಶಾಸನಗಳು ಪ್ರಮುಖ ದಾಖಲೆಗಳಾಗುತ್ತವೆ. ಪುರಾಣ, ಐತಿಹ್ಯಗಳಲ್ಲಿ ಕಲ್ಪನೆಗಳು ಮನೆಮಾಡಿದ್ದರೆ ಶಾಸನಗಳಲ್ಲಿ ಸ್ಪಷ್ಟ ವಿವರಣೆ ಸಿಗುತ್ತದೆ. ಅದೇ ರೀತಿ ಆ ಸಂದರ್ಭದ ವಚನಕಾರರು, ಕವಿಗಳು ಹಾಗೂ ದಾಸಶ್ರೇಷ್ಠರು ರಚಿಸಿದ ವಚನಗಳು, ಕಾವ್ಯಗಳು, ನಾಟಕಗಳು, ಭಕ್ತಿಗೀತೆಗಳು ಸಹ ಕಾಲನಿರ್ಣಯಕ್ಕೆ ಪ್ರಧಾನ ಆಕರಗಳಾಗುತ್ತವೆ. ಆಯಾ ಕಾಲದ ಜನಜೀವನ ಹಾಗೂ ಸಾಮಾಜಿಕ ವ್ಯವಸ್ಥೆಯನ್ನು ಅಧ್ಯಯನ ಮಾಡಲು ಇತಿಹಾಸ ತಜ್ಞರು ಸಹ ಈ ಆಕರಗಳನ್ನು ಪ್ರಮುಖವಾಗಿ ಗಮನಿಸುವುದು ಇವುಗಳ ಮಹತ್ವವನ್ನು ತಿಳಿಸುತ್ತವೆ.

ಮೈಲಾರಲಿಂಗನ ಸಂಪ್ರದಾಯ ಪ್ರಮುಖವಾಗಿ ಕಂಡುಬರುವುದು ಕ್ರಿ. ಶ. ೧೧ನೆಯ ಶತಮಾನದಿಂದೀಚೆಗೆ. ಅದಕ್ಕೂ ಮೊದಲು ಇದ್ದಿರಬಹುದಾದ ಕಲ್ಪನೆಗಳು ತುಂಬಾ ಕಡಿಮೆಯೆಂದೇ ಹೇಳಬಹುದು. ಏಕೆಂದರೆ ಭಾರತದಲ್ಲಿನ ಧಾರ್ಮಿಕ ಹಿನ್ನೆಲೆಯನ್ನು ನೋಡಿದಾಗ, ಪ್ರತಿ ೫೦೦ ವರ್ಷಗಳಿಗೊಮ್ಮೆ ಪರಿವರ್ತನೆಗೊಳ್ಳುವ ಪರಿಯನ್ನು ಕಾಣಬಹುದಾಗಿದೆ. ಅದಕ್ಕೆ ಅಂದಿನ ಸಾಮಾಜಿಕ ಹಾಗೂ ರಾಜಕೀಯ ಪರಿಸ್ಥಿತಿಯೂ

ಕಾರಣವಿದ್ದಿರಬಹುದು. ಇಂತಹ ಪರಿಸ್ಥಿತಿಯಲ್ಲಿ ರಾಜರ ಜೊತೆಗೆ ಧರ್ಮಗಳೂ ಬದಲಾದದ್ದು ವಿಶೇಷವೇನಲ್ಲ. ಈ ಹಿನ್ನೆಲೆಯಲ್ಲಿ ಮೈಲಾರಲಿಂಗನ ಆರಾಧನೆ ಅತ್ಯಂತ ಪ್ರಾಚೀನವಿದ್ದರೂ ಇರಬಹುದು[1]. ಪ್ರಮುಖವಾಗಿ ಬ್ರಹ್ಮಾಂಡ ಪುರಾಣದಲ್ಲಿ ಇದರ ಉಲ್ಲೇಖ ಬಂದಿದೆ. ಹಾಗೆಯೇ ಸ್ಕಾಂದ ಪುರಾಣದಲ್ಲಿ ಹಾಗೂ ಕೂರ್ಮ ಪುರಾಣದಲ್ಲಿ ಸಹ ಇದರ ಉಲ್ಲೇಖವಿದೆ. ಕಪಿಲ ಮಹಾಮುನಿಯೇ ಈ ಸಂಪ್ರದಾಯದ ಮೂಲಗುರುವೆಂದು ತಿಳಿದುಬರುತ್ತದೆ. ಕಪಿಲನ ಕಾಲವನ್ನು ನೋಡಿದರೆ ಅದು ರಾಮಾಯಣಕ್ಕೂ ಹಿಂದಿನದಾಗುತ್ತದೆ[2]. ಪುರಾಣಗಳಲ್ಲಿ ಉಲ್ಲಿಖಿತ ಕಾಲ ಕೃತಯುಗ. (ಆದರೆ ಪುರಾಣಗಳ ಕರ್ತೃ ಭಗವಾನ್ ವ್ಯಾಸನೆಂದು ಹೇಳುತ್ತಾರೆ. ಅಂದರೆ ಮಹಾಭಾರತದ ಕಾಲ. ವಿದ್ವಾಂಸರ ಪ್ರಕಾರ ಮಹಾಭಾರತ ನಡೆದದ್ದು ಕ್ರಿ. ಪೂ. ೩೦೦೦ ವರ್ಷಗಳಷ್ಟು ಹಿಂದೆ.) ಆದರೆ ಕೇವಲ ಪುರಾಣಗಳ ಆಧಾರವನ್ನೇ ಇಟ್ಟುಕೊಂಡು ಅಲ್ಲಿ ಬಂದಿರುವ ಉಲ್ಲೇಖಗಳನ್ನೇ ಮೂಲವೆಂದು ನಂಬಿ ಈ ಸಂಪ್ರದಾಯದ ಕಾಲ ನಿರ್ಧಾರ ಕಷ್ಟಸಾಧ್ಯ. ಆದ್ದರಿಂದ ನಂಬಬಹುದಾದ ಉಲ್ಲೇಖಗಳಾದ ಶಾಸನಗಳು, ತಾಮ್ರಪತ್ರಗಳು, ಐತಿಹಾಸಿಕ ಘಟನೆಗಳ ಆಧಾರದಲ್ಲಿ ಒಂದು ನಿರ್ಧಾರಕ್ಕೆ ಬರಲು ಸಾಧ್ಯವಾಗುವುದು. ಈ ಹಿನ್ನೆಲೆಯಲ್ಲಿ ಮೈಲಾರದ ಪ್ರಾಚೀನತೆಯನ್ನು ಕುರಿತಾದ ಕೆಲ ವಿವರಗಳನ್ನು ನೋಡುವುದು ಆವಶ್ಯಕ.

## ೩.೧ ಶಾಸನಗಳು

ವಿದ್ವಾಂಸರಾದ ಶ್ರೀಪಾಂಡುರಂಗ ದೇಸಾಯಿ ಹಾಗೂ ಶ್ರೀ ಜ. ಹೆಚ್. ಖರೆ ಅವರು ತಮ್ಮ ಸಂಶೋಧನೆಯಲ್ಲಿ "ಮೈಲಾರನ ವೈಭವೀಕರಣಕ್ಕಾಗಿ ಪುರಾಣಗಳ ಮೊರೆ ಹೋಗಲಾಗಿದೆ. ಆದರೆ ವಾಸ್ತವವೇ ಬೇರೆ" ಎಂದು ತಿಳಿಸಿದ್ದಾರೆ. ಅವರ ಪ್ರಕಾರ ಮೈಲಾರನ ಪ್ರಾಚೀನತೆ ಕ್ರಿ. ಶ. ಸುಮಾರು ೧೧ನೆಯ ಶತಮಾನಕ್ಕಿಂತ ಹಿಂದೆ ಹೋಗುವುದಿಲ್ಲ. ಇದೇ ರೀತಿಯಲ್ಲಿ ಅನೇಕ ಶಾಸನಗಳನ್ನು ಗಮನಿಸಿದಾಗ ಮೈಲಾರದ ಪ್ರಾಚೀನತೆ ಕ್ರಿ. ಶ. ೧೧ನೆಯ ಶತಮಾನದ ಈಚಿನದು ಎಂದು ತಿಳಿದು ಬರುತ್ತದೆ. ಬ್ರಹ್ಮಶಿವನ ಸಮಯ ಪರೀಕ್ಷೆಯಲ್ಲಿ ಈಚೆಗೆ ಬಂದ ಮೈಲಾರ ಮಾಳಚಿಯರು ಪ್ರಸಿದ್ಧರಾದರು. ಇನ್ನು ಪ್ರಾಚೀನರಾದ ಹರಿಹರರ ಪಾಡೇನು[3] ಎಂದು ಹೇಳಿದ್ದಾನೆ.

ಬ್ರಹ್ಮಶಿವನ ಕಾಲ ಸುಮಾರು ಕ್ರಿ. ಶ. ೧೨ನೆಯ ಶತಮಾನ. ಈಗತಾನೆ ಬಂದ ಮೈಲಾರ ಮಾಳಚಿಯರು ಜನಕೆ ಆಪ್ತರಾದರು ಎಂಬ ಉಲ್ಲೇಖವನ್ನು ಗಮನಿಸಿದಾಗ ಬಹುಶಃ ಬ್ರಹ್ಮಶಿವನಿಗೆ ನೂರು ವರ್ಷಗಳ ಆಚೀಚೆ ಈ ಸಂಪ್ರದಾಯ ಪ್ರಸಿದ್ಧಿಗೆ ಬಂದಿದೆಯೆಂದು ಹೇಳಬಹುದಾಗಿದೆ. ಶಾಸನಗಳಲ್ಲಿ ಬಂದ ಉಲ್ಲೇಖಗಳೂ ಸಹ ಇದಕ್ಕೆ ಪುಷ್ಟಿಯನ್ನು ಒದಗಿಸುತ್ತವೆ. ಈ ನಿಟ್ಟಿನಲ್ಲಿ ಕೆಲವು ಉಲ್ಲೇಖಗಳನ್ನು ನೋಡುವುದು ಸೂಕ್ತ.

೧. ಶಾಸನಗಳಲ್ಲಿ ದೇವತಾವಾಚಕವಾಗಿ ಮೈಲಾರ ಶಬ್ದ ಮೊದಲ ಬಾರಿಗೆ ಆಂಧ್ರದ ಸಂಗಾರೆಡ್ಡಿ ಜಿಲ್ಲೆಯ ಮುಪಗೊಂಡದ ಶಿಲಾ ಶಾಸನದಲ್ಲಿ ಕಂಡುಬಂದುದೆ. ಈ ಶಾಸನದ ಕಾಲ ಸುಮಾರು ಕ್ರಿ. ಶ. ೧೦೧೯. ಇದರಲ್ಲಿ ಮೈಳಾರದೇವರಿಗೆ ನೈವೇದ್ಯಕ್ಕೆ ದಾನ ಕೊಟ್ಟ ಉಲ್ಲೇಖವಿದೆ[4].

೨. ಕೇಶವಯ್ಯನ ಕೋಟವುಮಚನಿ ದಾನ ಶಾಸನ : ಕ್ರಿ. ಶ. ೧೦೧೨ ಡಿಸೆಂಬರ್ ೨೩ರಂದು ಚಾಲುಕ್ಯ ಸಾಮ್ರಾಟ ತ್ರಿಭುವನಮಲ್ಲ ವಿಕ್ರಮಾದಿತ್ಯನ ಮಹಾಸಾಮಂತ ಕೇಸವಯ್ಯನು ಉಮಚಗಿ (ಗದಗ ಜಿಲ್ಲೆ) ಸಮೀಪದ ರೋಣದಲ್ಲಿ ಮೌನರ ಶ್ರೀಧರಭಟ್ಟರಿಗೆ ಅಗ್ರಹಾರ ಕಟ್ಟಿಸಿಕೊಟ್ಟನು. ಶ್ರೀಧರ ಭಟ್ಟನು ಅದರಲ್ಲಿಯ ಹನ್ನೆರಡುಮತ್ತರ ಭೂಮಿಯನ್ನು ಏಳುಕೋಟಿ ತಪೋಧನರ ಭೋಜನಕ್ಕಾಗಿ ಕೊಟ್ಟನೆಂದು ಕೋಟವುಮಚನಿಯ[5] ಕನ್ನಡ ಶಾಸನದಲ್ಲಿ ಹೇಳಲಾಗಿದೆ. ಅದರಲ್ಲಿನ ಏಳು ಕೋಟಿ ಶಬ್ದವು ಮೈಲಾರನ ಉಪಾಸಕರಿಗೆ ಸಂಬಂಧಿಸಿದ್ದು. ಏಳುಕೋಟಿ ತಪೋಧನರೆಂದರೆ ಮೈಲಾರನ ಉಪಾಸಕರೆಂದು ಜಿ. ಹೆಚ್. ಖರೇ ಅವರು ಅಭಿಪ್ರಾಯ ಪಡುತ್ತಾರೆ.

೩. ಕ್ರಿ. ಶ. ೧೧೩೨ರ ಶಾಸನವೊಂದರಲ್ಲಿ ಮೈಲರಸ ಎಂಬ ವ್ಯಕ್ತಿಯ ಹೆಸರಿರುವುದನ್ನು ನಾವು ಕಾಣಬಹುದು[6].

೪. ಬೆಳಗಾವಿಯ ಬಳಿ ಇರುವ ಮುರುಗೋಡದ ಬೆಟ್ಟದ ಈರಣ್ಣನ ದೇವಸ್ಥಾನದ ಸಮೀಪದಲ್ಲಿರುವ ಕನ್ನಡ ಶಾಸನದಲ್ಲಿ ಕ್ರಿ. ಶ. ೧೧೮೫ರ ಡಿಸೆಂಬರ್ ೨೪ರಂದು ದಾನ ನೀಡಿದ ವಿವರವಿದೆ[7]. ಅದರಲ್ಲಿ ಮೈಲಾರ ಶಕ್ತಿ ಎಂಬ ಉಲ್ಲೇಖವಿದೆ. ಇದು ಮೈಲಾರ ಹೆಸರಿನ ವ್ಯಕ್ತಿ ನಾಮವನ್ನು ಸೂಚಿಸುತ್ತದೆ.

೫. ಕ್ರಿ. ಶ. ೧೧೧೫ರ ಒಂದು ಶಾಸನದಲ್ಲಿ ಮೈಳರಸ ಎಂಬ ಅಧಿಕಾರಿ ಉಲ್ಲಿಖಿತನಾಗಿದ್ದಾನೆ[8].

೬. ಬೀದರ ಜಿಲ್ಲೆಯಲ್ಲಿರುವ ಅಣದೂರಿನ ಶಾಸನದಲ್ಲಿ ಚಾಲುಕ್ಯ ಎರಡನೆಯ ಜಗದೇಕ ಮಲ್ಲನು (ಕ್ರಿ. ಶ. ೧೧೩೯ – ೧೧೪೯) ತನ್ನ ಪಟ್ಟಾಭಿಷೇಕದ ಶುಭಸಂದರ್ಭದಲ್ಲಿ ಮಹಾಭೈರವ ಮೈಳಾರದೇವರಿಗೆ ಕೆಲವೊಂದು ದತ್ತಿ ನೀಡಿ ದೇವಾಲಯದ ಶಿಖರವನ್ನು ನಿರ್ಮಿಸಿದನೆಂದು ಹೇಳಲಾಗಿದೆ[9].

೭. ಮಧ್ಯಪ್ರದೇಶದ ವಿಲಾಸಪುರದ ಮಲ್ಹಾರ[10] ಮತ್ತು ರತನಪುರದಲ್ಲಿರುವ ಎರಡು ಚೇದಿ ವಂಶದ ಶಾಸನಗಳಲ್ಲಿ (ಕ್ರಿ. ಶ. ೧೧೬೩ – ೬೪ ಹಾಗೂ ೧೧೬೭ – ೬೮) ಮಲ್ಲಾಲ ಪತ್ತನವೆಂದು ಮೈಲಾರ ಕ್ಷೇತ್ರದ ಉಲ್ಲೇಖವಿದೆ.

೮. ಮಾನಂಗಾಡಿಯಲ್ಲಿರುವ ಕ್ರಿ. ಶ. ೧೧೮೮ರ ಕನ್ನಡ ಶಾಸನದಲ್ಲಿ ಶಿವಣೂರ ಮೈಲಾರಭಟ್ಟರ ಮಕ್ಕಳು ವಾಸುದೇವ ಎಂಬ ಬ್ರಾಹ್ಮಣನ ಹೆಸರು ಬಂದಿದೆ.

೯. ವೆಂಗಿಯ ಕೋನ ಮಂಡಲದಲ್ಲಿ ಹೈಹಯ ಮನೆತನದ ಒಂದನೆಯ ರಾಜೇಂದ್ರಚೋಡ ಎಂಬವನ ಮಗ ಕ್ರಿ. ಶ. ಸುಮಾರು ೧೧೯೫ರಲ್ಲಿ ಕೋರಮಂಡಲ ಪ್ರದೇಶವನ್ನು ಆಳುತ್ತಿದ್ದ. ಈ ಮಲ್ಲಿದೇವನ ತಾಯಿ ಹಾಗೂ ರಾಜೇಂದ್ರಚೋಡನ ಪತ್ನಿಯ ಹೆಸರು ಮೈಲಾರದೇವಿ ಎಂದು ಪೀಠಾಪುರದ ಸ್ತಂಭಶಾಸನ[11]ದಿಂದ ತಿಳಿದುಬರುತ್ತದೆ.

೧೦. ಕ್ರಿ. ಶ. ೧೨೦೭ರ ಜುಲೈ ೨೬ರ ಬಳ್ಳಾರಿ ಜಿಲ್ಲೆಯ ಕುಡಿತಿನಿ ಶಾಸನದಲ್ಲಿ ವಿಷ್ಣುಕರ ಬ್ರಹ್ಮಚಾರಿಯ ಅಧ್ಯಕ್ಷತೆಯಲ್ಲಿ ಸಭೆ ಸೇರಿದ ಐದು ವರ್ಗ ಏಳುಕೋಟಿ ಮಹಾದೇವ, ಅಸಂಖ್ಯ ಗಣ ಹಾಗೂ ಮುಮುರಿ ದಂಡುಗಳು ಅಲ್ಲಿ ನಡೆಯುವ ಅಪರಾಧಗಳ ನಿರ್ಣಯಕ್ಕಾಗಿ ವಿಷ್ಣುಕರ ಬ್ರಹ್ಮಚಾರಿಗಳ ಬಳಿಗೆ ಹೋಗಬೇಕೆಂಬುದಾಗಿ ತೆಗೆದುಕೊಂಡ ನಿರ್ಣಯದ ದಾಖಲೆಯಿದೆ[12].

೧೧. ಬಳ್ಳಾರಿ ಜಿಲ್ಲೆಯ ಹಡಗಲಿ ತಾಲ್ಲೂಕಿನ ಸೋಗಿಯಲ್ಲಿರುವ ಕಲ್ಮೇಶ್ವರ ಗುಡಿಯ ಮುಖ ಮಂಟಪದ ಮೇಲಿನ ೨ ಮಾರ್ಚ್ ೧೨೨೬ರ ಕನ್ನಡ ಶಾಸನವೊಂದರಲ್ಲಿ

ಮಯಿಲಾರದೇವ, ಮಲ್ಲಯ್ಯ ಹೆಗ್ಗಡೆ ಮತ್ತು ಇತರರು ಸೋಗಿಯ ಕಲಿದೇವರಿಗೆ ದಾನ ಕೊಟ್ಟ ವಿವರಗಳಿವೆ.

೧೨. ಈಗಿನ ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ಆಕವೀಡು ಹಾಗೂ ಜಿನಗಾನಿ (ಪಲ್ಲಿ)ಯಲ್ಲಿರುವ ತೆಲಗು ಶಾಸನಗಳಲ್ಲಿ ಸಹ (ಕ್ರಿ. ಶ. ೧೧೫೪ ಹಾಗೂ ೧೨೩೨) ಮೈಲಾರ ಮುದ್ದ ಎಂಬ ತೆರಿಗೆ ಸಂಗ್ರಹಕಾರರ (ಪ್ರತಿಗ್ರಾಹಿಯ) ಹೆಸರಿದೆ.

೧೩. ಸೋಗಿಯ ೧೩ನೆಯ ಶತಮಾನದ ಎರಡು ಶಾಸನಗಳಲ್ಲಿ ಮಯ್ಲಾರದೇವ ಎಂಬ ವ್ಯಕ್ತಿ ವಾಚಕ ಕಂಡುಬಂದಿದೆ[13].

೧೪. ರಾಮಚಂದ್ರ ಯಾದವನ ಪುರುಷೋತ್ತಮಪುರಿ ಸಂಸ್ಕೃತ ತಾಮ್ರಪಟದಲ್ಲಿ (ಕ್ರಿ. ಶ. ೧೩೧೦) ಮೈಲಾರ ಭಟ್ಟನೆಂಬ ಪ್ರತಿಗ್ರಾಹಿಯ (ತೆರಿಗೆ ಸಂಗ್ರಹಕಾರನ) ಹೆಸರಿದೆ.

೧೫. ಕ್ರಿ. ಶ. ೧೪೯೧ರ ವಿಜಯನಗರ ಸಾಮ್ರಾಟ ಹರಿಹರನ ಚೌಡಾಲಾ ಸಂಸ್ಕೃತ ತಾಮ್ರ ಪಟದಲ್ಲಿ ಮೈಲಾರ ಭಟ್ಟನ ಉಲ್ಲೇಖವಿದೆ.

೧೬. ಪುಷ್ಪಗಿರಿಯಲ್ಲಿಯ[14] ವೈದ್ಯನಾಥ ಮಂದಿರದೊಳಗಿರುವ ತ್ರಿಕೂಟೇಶ್ವರ ಗುಡಿಯಲ್ಲಿರುವ ಕ್ರಿ. ಶ. ೧೨೫೪ರ ಶಾಸನದಲ್ಲಿ ಸೂರ್ಯವಂಶಿ ಪಲ್ಲವ ರಾಜ ಖಂಡೇರಾಯನು ಪಲ್ಲವೇಶ್ವರನನ್ನು ಪ್ರತಿಷ್ಠಾಪಿಸಿದ ಉಲ್ಲೇಖವಿದೆ.

೧೭. ಹಾಸನ ಜಿಲ್ಲೆಯ ಬೇಲೂರಿನ ೩ ಫೆಬ್ರವರಿ ೧೨೭೩ರ ಶಾಸನದಲ್ಲಿ ನರಸಿಂಹದೇವ ಹೊಯಿಸಳನಲ್ಲಿ ಖಂಡೇಯರಾವ[15] ಎಂಬ ಪ್ರಧಾನನಿದ್ದನು ಎಂಬ ಉಲ್ಲೇಖವಿದೆ.

೧೮. ಚಾಲುಕ್ಯ ಸಾಮ್ರಾಟನಾದ ೬ನೆಯ ವಿಕ್ರಮಾದಿತ್ಯನ ಹೂಲಿಯ ಶಾಸನದಲ್ಲಿ ಪಿಟ್ಟ ಎಂಬ ಗಂಗರಾಜನ ಮಗಳ ಹೆಸರು ಮೈಳಲದೇವಿ ಎಂಬ ಉಲ್ಲೇಖವಿದೆ[16].

೧೯. ಹಾವೇರಿ ಜಿಲ್ಲೆಯ ದೇವಿ ಹೊಸೂರಿನ ಬನಶಂಕರಿ ದೇವಸ್ಥಾನದಲ್ಲಿರುವ ಕ್ರಿ. ಶ. ೧೧೪೮ರ ( ೩೦ ರವಿವಾರ ಶಕೆ ೧೦೭೦) ಸುಮಾರಿನ ಎರಡು ಶಾಸನಗಳಲ್ಲಿ ೧೫ ಮೈಲಾರನ ಪತ್ನಿ ಮಾಳಸಾ ಅಥವಾ ಮಾಳವ್ವನ ಉಲ್ಲೇಖವಿದೆ[17]. ಒಂದರಲ್ಲಿ ಮಹಾ ಸಾಮಂತಾಧಿಪತಿ ಸೇನಾಧಿಪತಿ ಮೊದಲಾದ ಬಿರುದುಗಳನ್ನು ಪಡೆದ ರೇಚರಸನು ಬನವಾಸಿ ಪ್ರದೇಶದ ಅಧಿಕಾರಿಯಾಗಿದ್ದನು. ಇವನು ಮಾಳಚಿದೇವಿಯ ಪರಮ ಭಕ್ತನಾಗಿದ್ದರಿಂದ ಹರಿಕೆ ಸಲ್ಲಿಸುವುದಕ್ಕಾಗಿ ದೇವಿಯ ಪ್ರಸಿದ್ಧ ಕ್ಷೇತ್ರವಾಗಿದ್ದ ದೆಯ್ವದ ಹೊಸ ಊರಿಗೆ (ಈಗಿನ ದೇವಿ ಹೊಸೂರು) ಬಂದನು. ಅಲ್ಲಿ ಮಹಾಜನಗಳ ಸ್ಥಾನಿಕ ಅಧಿಕಾರಿಗಳ ಸಮ್ಮುಖದಲ್ಲಿ ದೇವಿಯ ನೈವೇದ್ಯ ಮತ್ತು ನಂದಾದೀಪಗಳಿಗಾಗಿ ದಾನ ಕೊಟ್ಟನು ಎಂದಿದೆ. ಈ ರೀತಿ ಎರಡನೆಯ ಶಾಸನದ ಕಾಲ ಸುಮಾರು ೧೦೬೩ (೧೩, ಗುರುವಾರ ಶಕೆ ೯೮೪) ಇದರಲ್ಲಿ ಇಂದಪಯ್ಯ ಅಧಿಕಾರಿಯು ಮಾಳಜ ದೇವಿಯ ಗುಡಿಗೆ ಮಕರ ತೋರಣ ಕಟ್ಟಿಸಿಕೊಟ್ಟ ವರ್ಣನೆಯಿದೆ.

೨೦. ಕ್ರಿ. ಶ. ೧೦೬೦ರ ಒಂದು ಶಾಸನದಲ್ಲಿ ತುಳುವ ಚಂಡಿಗನು ತನ್ನ ಬೆರಳುಗಳನ್ನು ಬಲಿ ಕೊಟ್ಟ ಸಂಗತಿಯಿದೆ.[18]

ಏಳುಕೋಟಿ ಅಥವಾ ಏಳ್ಕೋಟಿ ಎಂಬುದು ಒಂದು ತೀರ್ಥ ಕ್ಷೇತ್ರವಾಗಿತ್ತೆಂಬ ಊಹೆಯನ್ನು ಕ್ರಿ. ಶ. ಸುಮಾರು ೯ನೆಯ ಶತಮಾನದ ಕರಮುಡಿಯ ಶಾಸನ ಸೂಚಿಸುತ್ತದೆ.[19] ಇದಕ್ಕೆ ಪೂರಕವಾಗಿ ಕ್ರಿ. ಶ ೧೧೮೩ರ ಗುಡ್ಡದಾನವೇರಿ ಶಾಸನದಲ್ಲಿ – ಕೋಟಿ ಪಯಂ ಕವಿಲೆಯ್ನನೆ । ಕ್ಕೋಟಿ ತಪೋಧನರ ಮೊದವಿದರಂ ಹನ್ನಿ । ಕ್ಕೋಟಿಯನ್ಕೋಟಿ ತೀರ್ಥಂ । ಕೋಟಿ ಮಹಾದಿನದೊಳಳಿದೆ ನಿಂತದನಳಿದನು ॥ ಇಲ್ಲಿ ಸಹ ಏಳ್ಕೋಟಿ ತೀರ್ಥವೆಂದೇ ಹೇಳಲಾಗಿದೆ.[20]

ಅನಂತರದಲ್ಲಿ ಬಂದ ಅನೇಕ ಶಾಸನಗಳಲ್ಲಿ ಸಹ ಮೈಲಾರನ ಪ್ರಸ್ತಾಪಗಳಿವೆ. ಮೈಲಾರ ಮಂದಿರ ಕಟ್ಟಿಸಿದ, ಪೂಜೆಗಾಗಿ ದಾನ ಕೊಟ್ಟ, ಮೈಲಾರ ಎಂಬ ಹೆಸರಿಟ್ಟುಕೊಂಡ ಪ್ರತಿಷ್ಠಿತ ವ್ಯಕ್ತಿಗಳ ಉಲ್ಲೇಖಗಳು ಧಾರಾಳವಾಗಿ ಸಿಗುತ್ತವೆ.

## ೩.೨ ಇತಿಹಾಸದಲ್ಲಿನ ಉಲ್ಲೇಖಗಳು

ಶಾಸನಗಳಲ್ಲಿ ಅಲ್ಲದೇ ಮೈಲಾರಲಿಂಗ ಅಥವಾ ಮೈಲಾರನ ಕುರಿತಾದ ಇನ್ನೂ ಹಲವಾರು ಉಲ್ಲೇಖಗಳು ಐತಿಹಾಸಿಕ ದಾಖಲೆಗಳ ರೂಪದಲ್ಲಿ ನಮಗೆ ದೊರಕುತ್ತವೆ. ಅವುಗಳಲ್ಲಿ ಪ್ರಮುಖವಾದುವನ್ನು ಇಲ್ಲಿ ನೋಡಬಹುದು.

ಕ್ರಿ. ಶ. ೧೦೫೩ರಲ್ಲಿ ಆಳುತ್ತಿದ್ದ ಕಲ್ಯಾಣ ಚಾಲುಕ್ಯ ಅರಸು ಒಂದನೆಯ ಸೋಮೇಶ್ವರನ ಪತ್ನಿಯ ಹೆಸರು ಮೈಲಳದೇವಿ ಎಂದಿತ್ತು. ಪಿಟ್ಟ ಎಂಬ ಗಂಗರಾಜನ ಮಗಳು ಮೈಲಳದೇವಿ, ಸೌಂದತ್ತಿಯ ರಟ್ಟ ಅರಸು ಮೊದಲನೆಯ ಸೇನನ (ಕ್ರಿ. ಶ. ೧೦೬೦), ಗೋವೆಯ ಕದಂಬ ಅರಸು ಎರಡನೆಯ ಜಯಕೇಶಿ (ಕ್ರಿ. ಶ. ೧೧೧೯) ಹಾಗೂ ಗುತ್ತಲದ ಮೂರನೆಯ ವಿಕ್ರಮಾದಿತ್ಯನ (ಕ್ರಿ. ಶ. ೧೨೫೦) ಪತ್ನಿಯರ ಹೆಸರುಗಳು ಸಹ ಮೈಲಳ ದೇವಿ, ಮೈಳಲ ಮಹಾದೇವಿ ಎಂದಿದ್ದು, ಇವು ಮೈಲಾರ ದೇವರ ಅಥವಾ ಅವನ ಪತ್ನಿಯಾದ ಮಾಳಮ್ಮನನ್ನು ಪ್ರತಿನಿಧಿಸುತ್ತವೆ.

ತರ್ದವಾಡಿಯ ಅಧಿಕಾರ ಪಡೆದು ಆಳುತ್ತಿದ್ದ ಕಲಚೂರಿ ಬಿಜ್ಜಳನ ಸೇನಾಪತಿಯೊಬ್ಬನ ಹೆಸರು ಮೈಳಾರಯ್ಯ, ಮೈಲಾರ ದಂಡಾಧಿಪ ಎಂದಿತ್ತು.

## ೩.೩ (ಅ) ಶಿಷ್ಟ ಕಾವ್ಯಗಳಲ್ಲಿ ಉಲ್ಲೇಖ

ಮೈಲಾರದ ಉಲ್ಲೇಖ ಶಾಸನಗಳಲ್ಲಿ ಮಾತ್ರವಲ್ಲ ಕನ್ನಡ, ಮರಾಠಿ ಕಾವ್ಯಗಳಲ್ಲಿ ಸಹ ಸಾಕಷ್ಟು ಕಂಡುಬರುತ್ತದೆ. ಕೆಲವು ಉಲ್ಲೇಖಗಳು ವಿರೋಧಾಭಾಸಗಳಿಂದ ಕೂಡಿದ್ದರೂ ಮೈಲಾರನ ಪ್ರಾಚೀನತೆಯನ್ನು ಪ್ರಚುರಪಡಿಸುವಲ್ಲಿ ಸಾಕಷ್ಟು ಮಹತ್ವಪೂರ್ಣ ಕೊಡುಗೆ ನೀಡುತ್ತವೆ.

ಈವರೆಗಿನ ಸಂಶೋಧನೆಯಂತೆ ಕನ್ನಡ ಕಾವ್ಯಗಳಲ್ಲಿ ಮೈಲಾರಕ್ಕೆ ಸಂಬಂಧಿಸಿದಂತೆ ಕಂಡುಬರುವ ಮೊದಲ ಉಲ್ಲೇಖ ನಯಸೇನನ ಧರ್ಮಾಮೃತದಲ್ಲಿ. ಸುಮಾರು ಕ್ರಿ. ಶ. ೧೧೧೨ರಲ್ಲಿ ರಚಿತವಾದ ಈ ಜೈನಕಾವ್ಯದಲ್ಲಿ ಮೈಲಾರನ ಗೊರವರಂತೆ ತಂತಮ್ಮನೆ ಬಡಿದುಕೊಳ್ಳಚ್ಚುಳಯಿರಾಮಂ[21] ಎಂಬ ಉಲ್ಲೇಖವಿದೆ.

ಜೈನಕವಿಯಾಗಿದ್ದ ಬ್ರಹ್ಮಶಿವನ (ಕಾಲ ಸುಮಾರು ಕ್ರಿ. ಶ. ೧೧೫೦ – ೬೦) ಸಮಯ ಪರೀಕ್ಷೆಯಲ್ಲಿ[22] "ವರನೀನಮೆ ಮೈಲಾರಂ ಕ್ಷೇತ್ರಂ ಕಾಟಂ ಮರಿಗೆ । ಮಸಣಿಗೆಯನಿಪ್ಪ ಕೊಳೆದೆಯ್ಯಂಗಳ್ – ಎಂದಿದೆ. ಹಾಗೆಯೇ ಮುಂದುವರಿದು – ಎಕ್ಕಲ ದೇವಿಗೆ ಮಾದೂಲಕ್ಕನಿಗೂ ಬನದ ಬಳರಿಗೋ ಮೈಲಾರಲಿಂಗಕ್ಕೆಯ್ದೆ ಜಾತ್ರೆ ಮಾಳ್ಪ ವೊಕ್ಕಲಿಗಂ ಜೈನನಲ್ಲನಾತಂ ಕಾಳಂ ।" ಎಂಬ ಉಲ್ಲೇಖವಿದೆ. ಅದರಲ್ಲಿಯೇ ಮೈಲಾರನಿಗಾಗಿ ಜನರು ವ್ರತಗಳನ್ನು ಆಚರಿಸುತ್ತಿದ್ದರು ಎಂಬ ನಿದರ್ಶನವೂ ಇದೆ.

ಪ್ರಸ್ತುತದ ಮಣ್ಣು ಮೈಲಾರದ ಕುರಿತಾದ – ಪಸಕಾಲದೊಳೆವೆಯಪ ನಾಗಸದಬ್ಬೆ, ಬಳ್ಳಾರಿ, ಮೈಲಾರಂ, ಮಸಣಿ, ಮಾರಬ್ಬೆಯೆಂದಿತು ಸತ್ತರಾ ಭಕ್ತರೇಕೆಯೋ ಕೊಂಡಾಡರ್[23]– ಎಂಬ ಉಲ್ಲೇಖವನ್ನು ಸಹ ನಾವು ಸಮಯಪರೀಕ್ಷೆಯಲ್ಲಿ ಕಾಣಬಹುದು. ಮೈಲಾರ ಉಗ್ರಪರಂಪರೆಗೆ ಸೇರಿದ ದೈವವೆಂಬುದನ್ನು ಇದು ಸ್ಪಷ್ಟಪಡಿಸುತ್ತದೆ.

ಇನ್ನೂ ಮುಂದುವರಿದ ಬ್ರಹ್ಮಶಿವನು – ಛಲದಿಂದ ಶೌರ್ಯವನ್ನು ತೋರಿ ಕಾದಾಡಿ ಸತ್ತ ಒಬ್ಬ ಜೈನನೇ ಲೋಕದಲ್ಲಿ ಮೈಲಾರನೆಂದು ರೂಢಿ ಪಡೆದನು ಎಂದು ಹೇಳಿದ್ದಾನೆ[24].

ಇದೇ ಬ್ರಹ್ಮಶಿವನು ಜೈನೇತರ ದೇವತೆಗಳನ್ನು ವಿಡಂಬಿಸುತ್ತ – ಎಷ್ಟೊಂದು ವಿಪರ್ಯಾಸ ನೋಡಿ, ಮನೆವೆಗ್ಗಡೆ ಚಟ್ಟಪನು ಇತ್ತೀಚೆಗಷ್ಟೇ ಬೆಳಸಿದಂತಹ ಮೈಲ ಮತ್ತು ಮಾಳಚಿಯರು ಜಯಪ್ರಿಯರಾದರು, ಪ್ರಾಚೀನರಾದ ಹರಿಹರರ ಗತಿಯೇನು? ಎಂದು ಹೇಳಿದ್ದಾನೆ[25].

ಬಸವಣ್ಣನವರು ತಮ್ಮ ವಚನಗಳಲ್ಲಿ ಮೈಲಾರನನ್ನು ವಿಡಂಬಿಸಿರುವುದನ್ನು ನಾವು ಕಾಣಬಹುದು. ಮಾರಯ್ಯ, ಬೀರಯ್ಯ, ಅಂತರ, ಬೆಂತರ, ಮಲ್ಲಯ್ಯ (ಮೈಲಾರ) ಮೊದಲಾದ ಕ್ಷುದ್ರದೇವತೆಗಳನ್ನು ವಿಡಂಬಿಸುತ್ತ, ಬಲಿ ಕೊಡುವ ಪದ್ಧತಿಯನ್ನು ಬಸವಣ್ಣನವರು ವಿರೋಧಿಸಿದ್ದಾರೆ.[26]

ಒಳ್ಳಿಹ ಮೈಲಾರನ ಒಳಗೆಲ್ಲ ಸಣಬು
ಹೊರಗಣ ಬಣ್ಣ ಕರ ಲೇಸಾಯಿತ್ತಯ್ಯ

ಶ್ವಾನನ ನಿದ್ರೆ ಅಜ್ಞಾನಿಯ ತಪದಂತೆ
ಆಯಿತಯ್ಯಾ ಎನ್ನ ಮತಿ ಕೂಡಲಸಂಗಮದೇವಾ ॥[27]

ಮತ್ತೊಂದು ವಚನದಲ್ಲಿ

ಒಳ್ಳಿಹ ಮೈಲಾರನ ಸಿಂಗಾರದಂತೆ
ವೇಶ್ಯಯ ಎಂಜಲು ತಿಂಬ ವಿಟರ
ಸಂಸಾರದಂತೆ ಕೂಡಲ ಸಂಗನ
ಶರಣರನು ಅರಿಯದವರ ಗತಿಯಾಯಿತ್ತಯ್ಯಾ ॥[28]

ಇನ್ನೊಂದು ಕಡೆ –

ಮೈಲಾರನ ಪೂಜಿಸಿ ನಾಯಾಗಿ ಬಗಳುವುದ ಕಂಡೆ[29] ಎಂದಿದ್ದಾರೆ.

ಚೆನ್ನಬಸವಣ್ಣನವರ ವಚನಗಳಲ್ಲಿ ಸಹ ಮೈಲಾರನ ಉಲ್ಲೇಖವನ್ನು ನಾವು ಕಾಣಬಹುದಾಗಿದೆ.

ಭೈರವನನಾರಾಧಿಸಿ ಬಾಹಿರರಾದರಯ್ಯಾ
ಮೈಲಾರನಾರಾಧಿಸಿ ಕರುಳರಳ ಕಡಿಸಿಕೊಂಡು
ನಾಯಾಗಿ ಬಗಳುತ್ತಿಪ್ಪರಯ್ಯ ॥[30]

ಕವಿಚಕ್ರವರ್ತಿ ಜನ್ನನ ಅನಂತನಾಥ ಪುರಾಣದಲ್ಲಿ ಸಹ –

ರಕ್ತಾಂಬು ಮಜ್ಜನಮಂ ಮಾಡಿಸಿ ಮಸ್ತಕಾಂಬರುಹದಿಂದಂ ಪೂಜೆಗೆಯ್ದೊಂತೊಡಾತನ ಕೊರ್ವಾಳಿಕಲಂತು ಮರವಳೇ ಪಾಮೀರ ಮೈಲಾರನಾ[31] – ಎಂಬ ಉಲ್ಲೇಖವಿದೆ.

ಕುಮಾರವ್ಯಾಸನು ಸಹ ತನ್ನ ಕರ್ನಾಟಕ ಭಾರತ ಕಥಾಮಂಜರಿಯಲ್ಲಿ "ವೀರರಿಹಿರಹ ಹೊತ್ತುರಣ ಮೈಲಾರರಾದರು, ಮರಳಿ ತೆಗೆವುತ ಭೈರವನ ಸಾರೂಪ್ಯವಾದರು ಮಾತು ಮರೆಘುರೆನುತೆ"[32]– ಎಂಬ ಉಲ್ಲೇಖಿಸಿದ್ದಾನೆ.

ವಿರಕ್ತ ತೋಂಟದಾರ್ಯ ತೋಂಟದ ಸಿದ್ದೇಶ್ವರ ಪುರಾಣದಲ್ಲಿ ಕೊರಳಿಗೆ ಕವಡೆಗಳ ಕಟ್ಟಿಸಿ ಶೂನಿಯ ತೆರೆದ ಬಗುಳಿಸುತ್ತವನಿಯೊಳು ಹೊಟ್ಟೆಯ ಹೊರೆದುಕೊಂಡು ತಿರುಗುತಿಹ ಭವ ಭಾರಿ ದೈವಗಳ ಹೆಚ್ಚುಗೆಯದೆಂತು ಮರುಳೇ ಎಂಬ ಉಲ್ಲೇಖವಿದೆ.

ರಾಮನಾಥ ಚರಿತದಲ್ಲಿ ಮೈಲಾರನನ್ನು ದೊಡ್ಡಿಹದೇವ ಎಂದು ಕರೆದಿದೆ.[33]

ಶಾಂತಲಿಂಗದೇಶಿಕನ ಭೈರವೇಶ್ವರ ಕಾವ್ಯದ ಕಾಮಮಣಿಸೂತ್ರ ರತ್ನಾಕರದಲ್ಲಿ – ಮಾರಿ – ಮಸಣಿ, ಬೀರ, ಮೈಲಾರ, ಉಡಿಸಿಕರಿ, ಬಾದಾಮೈಯ್ಯ, ಎಂಬ ದೇವತೆಗಳ ಹೆಸರಿದೆ.[34]

ಚಕ್ರಧರನ ಕಲಿಧರ್ಮ ನಿರೂಪಣೆಯಲ್ಲಿ[35] ಕಲಿಯುಗದ ಅಂತ್ಯಕ್ಕೆ ಶಿವಾಲಯ ವಿಷ್ಣು ದೇವಾಲಯಗಳು ಕಣ್ಮರೆಯಾಗುವುವು, ಮೈಲಾರ ಕ್ಷೇತ್ರಗಳು ಸ್ಥಾಪನೆಯಾಗುವುವು – ಎಂದು ನಿರೂಪಿಸಲಾಗಿದೆ.

ಕನಕದಾಸರ ಕೀರ್ತನೆಗಳಲ್ಲಿ ಎಕ್ಕನಾತಿ, ಕಾಟ, ಜಕ್ಕಿ ಕನ್ನೆಯಾರು, ಭೈರವದೇವ, ಮಾರಿ, ಮಸಣಿ, ಚೌಡಿ, ಮೈಲಾರ, ಗುತ್ತಿಯ ಯಲ್ಲಮ್ಮ ಮೊದಲಾದ ದೇವತೆಗಳ ಹೆಸರಿದೆ.[36]

ವಿಜಯದಾಸರ ಸಾಧನ ಭಾಗ ಸುಳಾದಿಗಳಲ್ಲಿ ಎಲ್ಲಾಯಿ, ಯಕನಾತಿ, ಬನಶಂಕರಿ, ಮಲ್ಲಗ (ಮೈಲಾರ) ಮಾಳಿಗೆ (ಮಾಳಚಿ) ಮೊದಲಾದ ದೈವಗಳ ಹೆಸರುಗಳಿವೆ.

ಬ್ರಹ್ಮಾಂಡಪುರಾಣದಲ್ಲಿ ಮೈಲಾರಕ್ಕೆ ಸಂಬಂಧಿಸಿದ ಭಾಗವೊಂದಿದೆ. ಅದನ್ನೇ ಆಧರಿಸಿ ಸಂಸ್ಕೃತದಲ್ಲಿ ಮಲ್ಲಾರಿ ಮಹಾತ್ಮ್ಯೆ, ಜಯಾದ್ರಿ ವಿಜಯ ಹಾಗೂ ಮಾರ್ತಾಂಡ ವಿಜಯ ಎಂಬ ಕೃತಿಗಳು ಬಂದಿವೆ.

## ೩.೩ (ಆ) ಜನಪದ ಕಾವ್ಯಗಳಲ್ಲಿ ಉಲ್ಲೇಖ

ಜನಪದಗೀತೆಗಳಲ್ಲಿ ಮೈಲಾರಲಿಂಗನನ್ನು ಕುರಿತ ಉಲ್ಲೇಖಗಳನ್ನು ಹುಡುಕುವುದು ಕಷ್ಟ. ಜನಪದ ಗೀತೆಗಳು ಸಾಂದರ್ಭಿಕವಾಗಿ ಸೃಷ್ಟಿಯಾದ ರಚನೆಗಳು. ಮೈಲಾರಲಿಂಗನಿಗೆ ಸಂಬಂಧಿಸಿದಂತೆ ಅನೇಕ ಏಳೆಗಳು, ತ್ರಿಪದಿಗಳು, ಕಾವ್ಯಗಳು ಇದ್ದರೂ ಇವೆಲ್ಲ ಒಂದು ಉದ್ದೇಶಕ್ಕೆಂದು ರಚಿತವಾದ ರೂಪಗಳಾಗಿವೆ. ಇವುಗಳಲ್ಲಿ ಮೈಲಾರನ ಪವಾಡಗಳು, ರಾಕ್ಷಸರ ವಧೆ, ಶೃಂಗಾರ ಲೀಲೆಗಳು ಮುಂತಾದ ಅಂಶಗಳು ಸೇರಿವೆ.

ಇವುಗಳನ್ನು ಬಿಟ್ಟು ಜಿಡಿಪದ್ಯಗಳಲ್ಲಿ ಮೈಲಾರನ ಉಲ್ಲೇಖಗಳು ಬಹಳ ಅಲ್ಪ. ಡೊಳ್ಳಿನ ಪದಗಳಲ್ಲಿ, ಸುಗ್ಗಿಯ ಪದಗಳಲ್ಲಿ ಜೀರಪ್ಪನ ಬದಲಾಗಿ ಮೈಲಾರ ಶಬ್ದವನ್ನು ಸೇರಿಸಿಕೊಂಡು ಹಾಡುವುದೂ ಸಹ ರೂಢಿಯಲ್ಲಿದೆ. ಆದರೆ ಇವು ರಚನೆಯಾದ ಕಾಲ ಹಾಗೂ ಸಂದರ್ಭಗಳು ಸ್ಪಷ್ಟವಾಗಿ ತಿಳಿದುಬರುವುದಿಲ್ಲವಾದ್ದರಿಂದ ಮೈಲಾರನ ಪ್ರಾಚೀನತೆಯನ್ನು ಅರಿಯುವಲ್ಲಿ ಇವುಗಳ ಪಾತ್ರ ಅತ್ಯಂತ ಕಿರಿದು ಎಂದೇ ಹೇಳಬಹುದು.

## ಅಡಿಟಿಪ್ಪಣಿಗಳು :

1. *ಬ್ರಹ್ಮಾಂಡ ಪುರಾಣದಲ್ಲಿ ಉಕ್ತವಾಗಿರುವಂತೆ ೩೮,೮೮,೦೦೦ ವರ್ಷಗಳು. ವಿವರಣೆಗಾಗಿ ನೋಡಿರಿ - ಶ್ರೀ ಮೈಲಾರಲಿಂಗೇಶ್ವರ ದಿವ್ಯ ಚರಿತಾಮೃತ, ಲೇಖಕರು- ಕೃಷ್ಣಪ್ಪ, ಪುಟ ೧೮*
2. *ಸಗರನೆಂಬ ಚಕ್ರವರ್ತಿ ೬೦,೦೦೦ ಮಕ್ಕಳನ್ನು ಹೊಂದಿದ್ದ. ನೂರನೆಯ ಅಶ್ವಮೇಧಯಾಗದ ಸಂದರ್ಭದಲ್ಲಿ ಇಂದ್ರನು ಕುತಂತ್ರದಿಂದ ಯಾಗದ ಅಶ್ವವನ್ನು ತೆಗೆದುಕೊಂಡು ಹೋಗಿ ಪಾತಾಳಲೋಕದಲ್ಲಿರುವ ಕಪಿಲ ಮುನಿಯ ಆಶ್ರಮದಲ್ಲಿಟ್ಟನು ಎಂಬ ಕಲ್ಪನೆಯಿದೆ. ಸಾಂಖ್ಯದರ್ಶನ ಬರೆದ ಮುನಿಯ ಹೆಸರು ಕಪಿಲ ಎಂದಿದೆ.*
3. *ಮನೆ ವೆಗ್ಗಡೆ ಜಟ್ಟಿಪ್ಪ ನಿಂದೆ ನಿನ್ನ ತಾನಾದ ಮೈಲಾನುಂ ಮಾಳಸಿಯುಂ ಜನಕಾಪ್ತರಾವರೆನ ಮು । ನೀನ ಹರಿಹರರಾಪ್ತರಾಗ ಬೇಕೆಯಾ ಮಾಣ್ಮರೆ । - ಸಮಯ ಪರೀಕ್ಷೆ, ಬ್ರಹ್ಮಶಿವ - ೧೧೫೦ - ೧೧೬೦; ಸಂ. ಬಿ. ಎಸ್. ಕುಲಕರ್ಣಿ.*
4. *ಶ್ರೀಮನು ಮಹಾಮಂಡಳೇಶ್ವರಂ ಸೋಮ ಪೆರ್ಮಾನಡಿಗಳು ಸವಲಕ್ಕೆಯು ಮುಕುಂದ ಮುನ್ನೂರ ನಾಲತ್ತುಂ ವೆಲುಪಗೊಂಡೆಯುರ ಮೈಳಾರ ದೇವರಿಗೆ ಹೆಗ್ಗಡೆ... ಪಬ.... ದನುಂ ಊರ.. ನ... ಧೋಬೌಆಕ... ಉಅ.. ದವರು ದೇವರ ನಿವೇದ್ಯಕ್ಕೆ ವಾಯಿ ಕೊಟ್ಟು ಮತ್ತರೊಂದು ಮಾ... ದವರು - (ಸಾಧನೆ - ಸಂ.-೯-೧).*
5. *ಇಂದಿನ ಕೋಟುಮಚಗಿ - ಗಜೇಂದ್ರಗಡ - ಹುಬ್ಬಳ್ಳಿ ರಾಜ್ಯ ಹೆದ್ದಾರಿಯಲ್ಲಿ ಬರುವ ಪ್ರಾಚೀನ ಗ್ರಾಮ.*
6. *ಸಂಶೋಧನ ತರಂಗ - ೨.*
7. *ARSE 1939 - 40, NO 69*
8. *S II - XVIII - Inter. P XXI*
9. *SII XVIII, NO - 156*
10. *ಮಧ್ಯಪ್ರದೇಶದಲ್ಲಿ ಮಲ್ಹಾರ ಎಂಬ ಹೆಸರಿನ ಊರೇ ಇದೆ.*
11. *EI IV PP, 83-97*
12. *ಇಲ್ಲಿಯ ಏಳುಕೋಟಿ ಮಹಾದೇವ ಹೆಸರು ಏಳುಕೋಟಿ ತಪೋಧನರ ಹಾಗೆಯೇ ಇದೆ.*
13. *S II - IX i No. 341, 342, 1226 A. D*

14. ಇದಕ್ಕೆ ಕಡರ್ಪೆ ಎಂಬ ಹೆಸರೂ ಇದೆ.
15. ಮಹಾರಾಷ್ಟ್ರದಲ್ಲಿ ಮೈಲಾರದೇವನನ್ನು ಖಂಡೇರಾಯ ಎಂದು ಕರೆಯುತ್ತಾರೆ. ಅಲ್ಲಿನ ಬ್ರಾಹ್ಮಣರಲ್ಲಿ ಈ ಹೆಸರು ಸರ್ವೇಸಾಮಾನ್ಯ.
16. EI - V - P-203
17. ಪಾಂಡುರಂಗ ದೇಸಾಯಿ – ನವ ಭಾರತಿ, ಜುಲೈ ೧೯೫೭.
18. ಬೆರಳುಗಳನ್ನು ಬಲಿಕೊಡುವುದು ಒಂದು ಸಂಪ್ರದಾಯವಾಗಿತ್ತು – EC - VII - SK - 152-1060 A D
19. ಏಳ್ಕೋಟಿ ಎಂಬುದು ಮೈಲಾರದ ಆಚರಣೆಗಳಲ್ಲಿ ಬರುವ ಉದ್ಗಾರ.
20. ಡಾ. ಎಂ. ಬಿ. ನೇಗಿನಹಾಳ್–ಮೈಲಾರಲಿಂಗ ಖಂಡೋಬಾ – ಪುಟ ೨೯೬
21. ಧರ್ಮಾಮೃತ – ನಯಸೇನ – ೧೧೧೨, ವಚನ ೩.೨೦೬.
22. ಸಂ. ಬಿ. ಎಸ್. ಕುಲಕರ್ಣಿ. ೯.೧೨೮.
23. ಅದೇ
24. ವೀರದೊಲಕ್ಕೆ ಮುಚ್ಚುರಿಸಿ ಕೋಪದೆ ಜೈನನೆ ಕಾದಿ ಸತ್ತು ಮೈಲಾರನೇನೆಲ್ಕೆ ರೂಪವಡಿದಂ ಬ್ರತಮಂ ಬಿಡದೀಗಳುಮ್ ಖರಂ ಘೋರಾವೆನಲ್ಕಿ ಕೊಲ್ವ ಕೊಲೋಗದವೆ ತಾನುಪವಾಸಮಿಪ್ಪುದಂ ಪಾರಣೆ ಮಾಳ್ಪುದಂ ತಿಳಿದು ನಂಬುವುದಾತನ ಜೈನ ವೃತ್ತಿಯಂ – ಬ್ರಹ್ಮಶಿವ, ಸಮಯ ಪರೀಕ್ಷೆ; ಸಂ. ಬಿ. ಎಸ್. ಕುಲಕರ್ಣಿ.
25. ಮನೆ ವೆಗ್ಗಡೆ ಚಟ್ಟಿಪ್ಪ ನಿಂದೆ ನಿನ್ನ ತಾಸಾದ ಮೈನಾನುಂ ಮಾಳಸಿಯುಂ ಜನಕಾಪ್ತರಾದರೆನ ಮು । ನೀನ ಹರಿಹರರಾಪ್ತರಾಗ ಬೇಕೆಯಾ ಮಾಣ್ಮರೆ । – ಸಮಯ ಪರೀಕ್ಷೆ, ಬ್ರಹ್ಮ ಶಿವ – ೧೧೫೦ – ೧೧೬೦ ; ಸಂ. ಬಿ. ಎಸ್. ಕುಲಕರ್ಣಿ.
26. ಬಲಿಕೊಡುವುದು ಆಗ ಒಂದು ಸಂಪ್ರದಾಯವಾಗಿತ್ತು.
27. ಬಸವಣ್ಣನವರ ಷಟ್‌ಸ್ಥಲ ವಚನಗಳು. ಸಂ – ಶಿ. ಶಿ. ಬಸವನಾಳ, ಸಂ. ೩೮೦
28. ಅದೇ – ೬೬೩
29. ಅದೇ – ೫೬೮
30. ಚೆನ್ನ ಬಸವಣ್ಣನವರ ವಚನಗಳು – ಸಂ. ಆರ್. ಸಿ. ಹಿರೇಮಠ – ಪುಟ – ೧೦೨.
31. ಅನಂತನಾಥ ಪುರಾಣ – ೧೨–೨೬
32. ಕುಮಾರವ್ಯಾಸಭಾರತ – ವಿರಾಟಪರ್ವ – ೮ನೆಯ ಸಂಧಿ, ೬೯ನೆಯ ಪದ್ಯ.
33. ಸಂ. ಎಚ್. ದೇವೀರಪ್ಪ, ೨೪–೩೭
34. ಸಂ. ಆರ್. ಸಿ. ಹಿರೇಮಠ ಹಾಗೂ ಎಂ. ಎಸ್. ಸುಂಕಾಪುರ, ಪುಟ – ೨೦೪.
35. ಲೀಲಾಚರಿತ್ರೆ – ಉತ್ತರಾರ್ಧ – ೧೮೯
36. ಸಂ. ಸುಬೋಧ ರಾಮರಾಯರು, ಪುಟ – ೬೨

* * *

# ಅಧ್ಯಾಯ ೪ : ಕರ್ನಾಟಕದಲ್ಲಿನ ಮೈಲಾರ ಕ್ಷೇತ್ರಗಳು

೧. ಶ್ರೀಕ್ಷೇತ್ರ ಮೈಲಾರ (ಬಳ್ಳಾರಿ ಜಿಲ್ಲೆ)
೨. ದೇವರಗುಡ್ಡ (ಹಾವೇರಿ ಜಿಲ್ಲೆ )
೩. ಕಾರಿಮನಿ (ಬೆಳಗಾವಿ ಜಿಲ್ಲೆ)
೪. ಗುಡೂರು (ಬಾಗಲಕೋಟೆ ಜಿಲ್ಲೆ)
೫. ಯಾತಗಿರಿ (ಗುಲ್ಬರ್ಗಾ ಜಿಲ್ಲೆ)
೬. ಹಿಪ್ಪರಿಗೆ (ವಿಜಾಪೂರ ಜಿಲ್ಲೆ)
೭. ಪ್ರೇಮಪುರ ಮೈಲಾರ (ಬೀದರ್ ಜಿಲ್ಲೆ)
೮. ಮಂಗಸೂಳಿ (ಬೆಳಗಾವಿ ಜಿಲ್ಲೆ)
ಮಹಾರಾಷ್ಟ್ರರಾಜ್ಯದ ಪ್ರಮುಖ
ಮೈಲಾರಕ್ಷೇತ್ರಗಳು

# ಅಧ್ಯಾಯ - ೪

# ಕರ್ನಾಟಕದಲ್ಲಿನ ಮೈಲಾರ ಕ್ಷೇತ್ರಗಳು

ಮೈಲಾರದ ಸಂಪ್ರದಾಯ ಅತ್ಯಂತ ಪ್ರಾಚೀನವಾದುದು. ಬಹುಶಃ ದಕ್ಷಿಣ ಭಾರತದಾದ್ಯಂತ ವಿಶೇಷವಾಗಿ ಆಂಧ್ರಪ್ರದೇಶ, ಕರ್ನಾಟಕ ಹಾಗೂ ಮಹಾರಾಷ್ಟ್ರಗಳಲ್ಲಿ ಮೈಲಾರ ಸಂಪ್ರದಾಯಕ್ಕೆ ಸಂಬಂಧಿಸಿದ ದೇವಸ್ಥಾನಗಳನ್ನು ಕಾಣಬಹುದು. ಆಂಧ್ರ ಪ್ರದೇಶ ಹಾಗೂ ಮಹಾರಾಷ್ಟ್ರಗಳು ಸ್ವಾತಂತ್ರ್ಯ ನಂತರ ಪ್ರತ್ಯೇಕ ರಾಜ್ಯಗಳಾಗಿ ಮಾನ್ಯತೆ ಪಡೆದರೂ ಮುಂಚೆ ಅವು ಕರ್ನಾಟಕದ ರಾಜರ ಅಧೀನದಲ್ಲಿದ್ದವು ಎಂಬ ವಿಷಯವನ್ನು ತೆಗೆದುಹಾಕುವಂತಿಲ್ಲ. ಹೀಗಾಗಿ ಮೈಲಾರ ಸಂಪ್ರದಾಯದ ನೆಲೆಗಟ್ಟನ್ನು ಹುಡುಕಬೇಕಾದಲ್ಲಿ ಅದು ಸ್ವತಂತ್ರಪೂರ್ವ ಭಾರತದಲ್ಲಿಯೇ ಹೊರತು, ಸ್ವಾತಂತ್ರ್ಯ ನಂತರದ ವಿಭಾಗಗಳಲ್ಲಿ ಅಲ್ಲ. ಆದರೆ ಸಂಶೋಧನೆಯ ದೃಷ್ಟಿಯಿಂದ ಅನೇಕರು ಮಹಾರಾಷ್ಟ್ರ, ಆಂಧ್ರ, ಕರ್ನಾಟಕ ಹೀಗೆ ಇತ್ತೀಚಿನ ರಾಜ್ಯಗಳ ಉಲ್ಲೇಖ ನೀಡುತ್ತ ವಿಭಿನ್ನತೆಯನ್ನು ತೋರ್ಪಡಿಸಲು ಯತ್ನಿಸಿರುವುದು ವಿಷಾದಕರ. ಈ ನಿಟ್ಟಿನಲ್ಲಿ ಸ್ವಾತಂತ್ರ್ಯ ಪೂರ್ವದ ಮೈಲಾರ ಸಂಪ್ರದಾಯದ ಸಂಪೂರ್ಣ ಚಿತ್ರಣವನ್ನು ಬೆಳಕಿಗೆ ತಂದು ವಿಶಿಷ್ಟ ಅಧ್ಯಯನ ಸಾಮಗ್ರಿಯನ್ನು ಒದಗಿಸುವುದು ಅಗತ್ಯ. ಆದರೆ ನನ್ನ ವಿಷಯದ ವ್ಯಾಪ್ತಿ ಒಂದು ಪ್ರದೇಶದ ಆಚರಣೆಗಳಿಗೆ ಸೀಮಿತವಾದ್ದರಿಂದ ಈ ಕಾರ್ಯ ನನ್ನ ವ್ಯಾಪ್ತಿಗೂ ಮೀರಿದುದಾಗಿದೆ. ಆದರೂ ಸಹ ಮಾಹಿತಿಯ ದೃಷ್ಟಿಯಿಂದ ಈಗಿನ ಕರ್ನಾಟಕದ ಪ್ರಮುಖ ಮೈಲಾರ ಕ್ಷೇತ್ರಗಳ[1] ವಿವರಣೆಯನ್ನು ಜೊತೆಗೆ ಈಗಿನ ಮಹಾರಾಷ್ಟ್ರದ[2] ಪ್ರಮುಖ ಕ್ಷೇತ್ರಗಳ ಪರಿಚಯವನ್ನು ನೀಡುವ ಪ್ರಯತ್ನ ಮಾಡುತ್ತಿದ್ದೇನೆ.

## ೪.೧ ಮೈಲಾರ ಕ್ಷೇತ್ರ

ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲ್ಲೂಕಿನಲ್ಲಿರುವ ಈ ಕ್ಷೇತ್ರವನ್ನು ಆದಿ ಮೈಲಾರ, ಮಣ್ಣುಮೈಲಾರ, ಹಿರೇಮೈಲಾರ, ಉಂಗ್ಲಾರ ಕ್ಷೇತ್ರ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ. ಹಾವೇರಿ ಜಿಲ್ಲಾ ಕೇಂದ್ರಕ್ಕೆ ಹತ್ತಿರವಿರುವ ಈ ಕ್ಷೇತ್ರ ಬಳ್ಳಾರಿ ಜಿಲ್ಲೆಯ ಗಡಿಯಲ್ಲಿದೆ. ಈ ಊರಿನಿಂದ ಸುಮಾರು ಐದು ಕಿಲೋ ಮೀಟರ್

ಅಂತರದಲ್ಲಿ ಕಪ್ಪತ್ತಗುಡ್ಡದ ಶಾಖೆಗಳಿವೆ. ಇವು ಪೂರ್ವ ಹಾಗೂ ಆಗ್ನೇಯ ದಿಕ್ಕುಗಳಲ್ಲಿ ವ್ಯಾಪಿಸಿವೆ. ಇಲ್ಲಿ ತುಂಗಭದ್ರಾ ನದಿ ಉಂಗುರಾಕಾರವಾಗಿ ಸುತ್ತುವರಿದುದರಿಂದ ಉಂಗ್ಲಾರ ಕ್ಷೇತ್ರ ಎಂಬ ಹೆಸರು ಬಂದಿದೆ. ಶಾಸನಗಳಲ್ಲಿ ಸಹ ಉಂಗುಲಾಲ ಕ್ಷೇತ್ರ ಎಂಬ ಹೆಸರಿದೆ. ಹಾವನೂರಿನ ದೇಸಾಯಿಯವರು ಈ ದೇವಸ್ಥಾನದ ಅಭಿವೃದ್ಧಿಗೆ ಹಾಗೂ ಸೇವಾಕಾರ್ಯಗಳಿಗೆ ಭೂಮಿಯನ್ನು ಉಂಬಳಿ ನೀಡಿದ್ದರಂತೆ.

ಮೈಲಾರ ಶಬ್ದದ ವ್ಯುತ್ಪತ್ತಿಯನ್ನು ಕುರಿತು ಅನೇಕ ಅಭಿಪ್ರಾಯಗಳಿವೆ. ಪುರಾಣದ ಆಧಾರದಲ್ಲಿ ಹೇಳುವುದಾದರೆ ಮಲ್ಲಾಸುರನ ಸಂಹಾರದ ಬಳಿಕ ಶಿವನು ಆ ಅಸುರನ ಕೋರಿಕೆಯಂತೆ ಮಲ್ಲಾರಿಯಾಗಿ ಈ ಪ್ರದೇಶದಲ್ಲಿ ನೆಲೆಸಿದನು. ಮಲ್ಲಾರಿ ಶಬ್ದವೇ ಆಡುಮಾತಿನಲ್ಲಿ ಮೈಲಾರವಾಗಿರಬಹುದು. ಕಪಿಲ ಮುನಿಗಳು ಸ್ವಯಂಭೂ ಲಿಂಗದ ಮೇಲಿನ ಹುತ್ತದ ಮಣ್ಣಿನಿಂದ ವಿಗ್ರಹವನ್ನು ಮಾಡಿ ಪೂಜಿಸಿದ್ದರಿಂದ ಮಣ್ಣು ಮೈಲಾರವೆಂದು ಹೆಸರಾಯಿತು. ಇನ್ನೊಂದು ಅಭಿಪ್ರಾಯದ ಪ್ರಕಾರ ಮೊದಲು ಈ ಕ್ಷೇತ್ರಕ್ಕೆ ಮರಾಲಿ ಎಂಬ ಹೆಸರಿತ್ತು. ನಂತರ ಅದು ಜನರ ಬಾಯಲ್ಲಿ ಮೈಲಾರ ಎಂದು ರೂಪಾಂತರ ಹೊಂದಿರಬಹುದು.

ಶಾಸನವೊಂದರ ಪ್ರಕಾರ ಇದಕ್ಕೆ ಮಯಿಲಾರ ಎಂಬ ಹೆಸರಿದೆ. ಅದೇ ಮುಂದೆ ಮೈಲಾರವೆಂದು ಪ್ರಸಿದ್ಧಿಯನ್ನು ಹೊಂದಿತು ಎನ್ನಬಹುದು. ಹಗರನೂರು ಶಾಸನದ ಪ್ರಕಾರ ಮೈಲಾರಕ್ಕೆ ಅಮರಗೇರಿ ಎಂಬ ಹೆಸರಿತ್ತಂತೆ. ಅಮರರು ಎಂದರೆ ದೇವತೆಗಳು ಎಂದರ್ಥ. ಹಿಂದೆ ಮಣಿಕಾಸುರನ ಸಂಹಾರಕ್ಕೆಂದು ಶಿವನು ಬಂದಾಗ ಅವನ ಹಿಂದೆ ಏಳು ಕೋಟಿ ದೇವಗಣ ಬಂದಿದ್ದ ಉಲ್ಲೇಖ ಪುರಾಣಗಳಲ್ಲಿದೆ. ಇನ್ನೊಂದು ಶಾಸನದ ಪ್ರಕಾರ ಕಾಳಿದಾಸ ಪೇರ್ಗಡೆಯ ತಂದೆ ಮಣಸಬ್ರಹ್ಮದೇವನು ಇಲ್ಲಿ ಆಳುತ್ತಿದ್ದನು. ಆದ್ದರಿಮ್ದ ಈ ಗ್ರಾಮಕ್ಕೆ ಮಸಣ ಮೈಲಾರವೆಂದು ಹೆಸರಿತ್ತು. ಕಾಲಾಂತರದಲ್ಲಿ ಅದೇ ವರ್ಣ ಪಲ್ಲಟವಾಗಿ ಮಣ್ಣು ಮೈಲಾರವೆಂದು ಹೆಸರಾಗಿರಬಹುದು.[3]

ಪ್ರಸ್ತುತ ದೇವಸ್ಥಾನವು ಕರ್ನಾಟದ ಸರ್ಕಾರದ ಧಾರ್ಮಿಕ ದತ್ತಿ ಇಲಾಖೆಗೆ ಸೇರಿದೆ. ಆದರೆ ಇಲ್ಲಿನ ಸರ್ವ ಕಾರ್ಯಗಳೂ ಒಡೆಯರ ನೇತೃತ್ತ್ವದಲ್ಲಿ ನಡೆಯುತ್ತವೆ. ಇವರು ಕಪಿಲ ಮುನಿಯ ವಂಶಸ್ಥರೆಂಬ ನಂಬಿಕೆ ಪರಂಪರಾನುಗತವಾಗಿ ಬಂದಿದೆ. ಭಕ್ತರ

ಹರಕೆ ತೀರಿಸುವುದು, ಹೊರೆಹೊರಿಸುವುದು (ದೀಕ್ಷೆ ನೀಡಿವುದು), ಪೂಜೆ, ಜಾತ್ರೆ, ಹಬ್ಬ ಮೊದಲಾದ ಧಾರ್ಮಿಕ ಸಂದರ್ಭದಲ್ಲಿ ನಡೆಯುವ ಎಲ್ಲ ಕಾರ್ಯಗಳಿಗೂ ಒಡೆಯರೇ ಪ್ರಮುಖರು. ಇವರ ಜೊತೆಗೆ ಬ್ರಾಹ್ಮಣ ಅರ್ಚಕರು ದೇವಸ್ಥಾನದ ಪೂಜೆ, ಪುನಸ್ಕಾರಗಳನ್ನು ನೆರವೇರಿಸುತ್ತಾರೆ. ಇವರ ಜೊತೆಗೆ ಗೊರವರು, ಗೊರವಿಯರು, ಕಂಚಾವೀರರು, ಮೊದಲಾದವರು ಎಲ್ಲ ಧಾರ್ಮಿಕ ಕಲಾಪಗಳಲ್ಲಿ ನಿಷ್ಠೆಯಿಂದ ಪಾಲ್ಗೊಳ್ಳುತ್ತಾರೆ. ಈ ದೇವಸ್ಥಾನಕ್ಕೆ ಎಲ್ಲ ಜಾತಿ, ಜನಾಂಗಗಳ ಭಕ್ತರು ಬರುತ್ತಾರೆ.

## ೪.೨ ದೇವರಗುಡ್ಡ

ಹಾವೇರಿ ಜಿಲ್ಲೆಯ ರಾಣೇಬೆನ್ನೂರು ತಾಲ್ಲೂಕಿನಲ್ಲಿ ಈ ಕ್ಷೇತ್ರವಿದೆ. ವಾಸ್ತವವಾಗಿ ಹಿರೇಮೈಲಾರದಿಂದ ಸುಮಾರು ಹದಿನೈದು ಕಿಲೋ ಮೀಟರ್ ದೂರದಲ್ಲಿ ಈ ಕ್ಷೇತ್ರವಿದೆ. ಮೊದಲು ಹಿರೇಮೈಲಾರಕ್ಕೆ ಹೋಗಬೇಕಾದರೆ ನದಿಯನ್ನು ದಾಟಿ ಹೋಗಬೇಕಿತ್ತು. ಈಗ ಇಲ್ಲಿಂದ ಸುಲಭವಾಗಿ ಹೋಗಿಬರಲು ಸಾಧ್ಯವಾಗುವಂತೆ ಸೇತುವೆಯನ್ನು ನಿರ್ಮಿಸಲಾಗಿದೆ. ಆದರೆ ಗುಡ್ಡ ಸುತ್ತಿ ಮೈಲಾರಕ್ಕೆ ಹೋಗು ಎಂಬ ಸಂಪ್ರದಾಯದಂತೆ ಜನರು ಇಲ್ಲಿನ ದೇವರ ದರ್ಶನ ಪಡೆದಾದ ನಂತರ ಮೈಲಾರದ ಕಾರಣಿಕಕ್ಕೆ ಹೋಗುವುದು ವಾಡಿಕೆ. ಸ್ಥಳ ಪುರಾಣದ ಹಿನ್ನೆಲೆಯನ್ನು ನೋಡುವುದಾದರೆ ಮೈಲಾರನ ಅವತಾರ ಮೊದಲು ಇಲ್ಲಿ ಆಯಿತಂತೆ. ನಂತರದಲ್ಲಿ ಮೈಲಾರ ಕ್ಷೇತ್ರದಲ್ಲಿ ಆಯಿತೆಂಬ ನಂಬಿಕೆಯಿದೆ. ಈಗಲೂ ಜನ ದೇವರಗುಡ್ಡದ ಮೈಲಾರ ಅಣ್ಣ ಹಾಗೂ ಹಿರೇಮೈಲಾರದ ಮೈಲಾರ ತಮ್ಮ ಎಂಬ ನಂಬಿಕೆಯನ್ನಿಟ್ಟುಕೊಂಡಿದ್ದಾರೆ. ಇಲ್ಲಿನ ದೇವರನ್ನು ಮಾಲತೇಶ ಎಂಬ ಹೆಸರಿನಿಂದ ಕರೆಯುವುದು ವಾಡಿಕೆ.

ಕಂದಾಯ ಇಲಾಖೆಯ ದಾಖಲೆಗಳಲ್ಲಿ ಗುಡ್ಡಗುಡ್ಡಾಪುರ ಎಂದೇ ಉಲ್ಲೇಖಿತವಾಗಿರುವ ಈ ಕ್ಷೇತ್ರವನ್ನು ದೇವರಗುಡ್ಡ, ಶ್ರೀಕ್ಷೇತ್ರಗುಡ್ಡಗುಡ್ಡಾಪುರ ಎಂದೂ ಕರೆಯುತ್ತಾರೆ. ನೈರುತ್ಯ – ಈಶಾನ್ಯ ದಿಕ್ಕುಗಳಲ್ಲಿ ಹರಡಿರುವ ಗುಡ್ಡದಲ್ಲಿ ಸುಮಾರು ಒಂದರಿಂದ ಒಂದೂವರೆ ಕಿಲೋ ಮೀಟರ್ ಉದ್ದಕ್ಕೆ ಈ ಕ್ಷೇತ್ರದ ಜನವಸತಿ ಇದೆ. ಇದೇ ಗುಡ್ಡದ ದಕ್ಷಿಣದ ತುದಿಗೆ ಪೂರ್ವಾಭಿಮುಖವಾಗಿ ಮಾಲತೇಶನ ದೇವಸ್ಥಾನವಿದೆ. ಗರ್ಭಗೃಹದಲ್ಲಿ ಒಂದು ಸ್ವಯಂಭೂ ಲಿಂಗವಿದೆ. ಇದು ಅನಿಯಮಿತಾಕಾರವಿದೆ. ತಲೆಯ ಮೇಲೆ ಒಂದು ಕಚ್ಚು ಇದೆ. ಇದಕ್ಕೆ ಸಂಬಂಧಿಸಿದಂತೆ ಎಲ್ಲಕ್ಕೂ ಮೊದಲು ಈ ಲಿಂಗವನ್ನು

ಕಂಡು ಹಿಡಿದಾಗ ಮೇಲಿದ್ದ ಹುತ್ತದ ಮಣ್ಣನ್ನು ಗುದ್ದಲಿಯಿಂದ ಅಗಿಯುವಾಗ ಕೈತಪ್ಪಿನಿಂದ ಬಿದ್ದ ಪೆಟ್ಟಿನಿಂದ ಈ ಕಚ್ಚು ಉಂಟಾಯಿತೆಂಬ ಭಾವನೆ ಜನರಲ್ಲಿದೆ. ದೇವರಿಗೆ ಸಲ್ಲುವ ಎಲ್ಲ ಪೂಜೆ, ಅಭಿಷೇಕಗಳು ಮೊದಲು ಈ ಲಿಂಗಕ್ಕೆ ಸಲ್ಲುತ್ತವೆ. ಈ ಲಿಂಗದ ಹಿಂಬದಿಯಲ್ಲಿ ಸುಮಾರು ಮೂರು ಅಡಿ ಎತ್ತರದ ಪೀಠದ ಮೇಲೆ ಮೈಲಾರಲಿಂಗನ (ಮಾಲತೇಶನ) ಚತುರ್ಭುಜ ಆಕೃತಿಯನ್ನು ಪ್ರತಿಷ್ಠಾಪಿಸಲಾಗಿದೆ. ಇದನ್ನು ಮಾರ್ತಾಂಡ ಭೈರವ, ಮಾಲತೇಶ, ಮೈಲಾರ ಮೊದಲಾದ ಹೆಸರುಗಳಿಂದ ಕರೆಯುವರು. ಜನರು ಹೇಳುವ ಪ್ರಕಾರ ಮಾರ್ತಾಂಡ ಭೈರವನು ಈ ಪ್ರದೇಶದಲ್ಲಿ ಮೊದಲು ಮಣಿಕಾಸುರನ ಸಂಹಾರ ಮಾಡಿದನು. ನಂತರದಲ್ಲಿ ಈಗಿರುವ ಹಿರೇಮೈಲಾರ ಪ್ರಾಂತ್ಯದಲ್ಲಿ ಮಲ್ಲಾಸುರನ ಸಂಹಾರ ಮಾಡಿದನು. ಇಲ್ಲಿರುವ ಪರ್ವತ ಮಣಿಚೂಲ ಪರ್ವತ, ಇಲ್ಲಿನ ದೇವರು ಪ್ರಮುಖವಾದುದು. ನಂತರದಲ್ಲಿ ಮೈಲಾರದಲ್ಲಿರುವ ದೇವರು ಎಂದು ಜನರ ನಂಬಿಕೆ. ಈ ಭಾವನೆಗಳಿಗೆ ಅನುಗುಣವಾಗಿಯೇ ಅನೇಕ ಕುಟುಂಬಗಳಲ್ಲಿ ಮೊದಲು ದೇವರಗುಡ್ಡಕ್ಕೆ ಹೋಗಿ, ನಂತರದಲ್ಲಿ ಮೈಲಾರಕ್ಕೆ ಹೋಗುವುದು ವಾಡಿಕೆ.

ಮೈಲಾರದ ಜನರು ಹೇಳುವ ಪ್ರಕಾರ ಮೊದಲು ಮೈಲಾರಕ್ಕೆ ಬರಲು ಸರಿಯಾದ ಮಾರ್ಗವಿರಲಿಲ್ಲ. ನದಿಯನ್ನು ದಾಟಿಕೊಂಡು ಬಹಳ ಪರಿಶ್ರಮದಿಂದ ಇಲ್ಲಿಗೆ ಬರಬೇಕಾಗಿತ್ತು. ಹೀಗಾಗಿ ಜನರ ಕಷ್ಟವನ್ನು ನೋಡಲಾರದೆ ದೇವರಗುಡ್ಡದಲ್ಲಿಯೇ ಮೈಲಾರದ ಪ್ರತಿ ರೂಪವನ್ನು ಸ್ಥಾಪಿಸಲಾಯಿತು. ಅಲ್ಲಿಂದ ಸಾಧ್ಯವಿದ್ದವರು ಮಾತ್ರ ಮೈಲಾರಕ್ಕೆ ಬರುತ್ತಿದ್ದರು. ಅನುಕೂಲವಿಲ್ಲದವರು ದೇವರಗುಡ್ಡದಲ್ಲಿಯೇ ತಮ್ಮ ಭಕ್ತಿಯನ್ನು ಸಮರ್ಪಿಸಿ ಹೋಗುತ್ತಿದ್ದರು. ಈಗ ತುಂಗಭದ್ರಾ ನದಿಗೆ ಸೇತುವೆ ಕಟ್ಟಿದ್ದರಿಂದ ಎರಡೂ ಕ್ಷೇತ್ರಗಳಿಗೆ ಹೋಗಿ ಬರಲು ಜನರಿಗೆ ಅನುಕೂಲವಾಗಿದೆ. ಹೀಗಾಗಿ ಭಕ್ತರು ಎರಡೂ ದೇವರಿಗೆ ನಡೆದುಕೊಳ್ಳುತ್ತಾರೆ. ಆದರೆ ಮೊದಲಿನ ಸಂಪ್ರದಾಯ ಹಾಗೆಯೇ ಉಳಿದುಬಿಟ್ಟಿದೆ. ಹೀಗಾಗಿ ಮೊದಲು ದೇವರ ಗುಡ್ಡದ ಮೈಲಾರ ಅಥವಾ ಗುಡ್ಡದಯ್ಯನ ದರ್ಶನ, ಅದಾದ ಬಳಿಕವೇ ಮೈಲಾರಲಿಂಗನ ದರ್ಶನ ಮಾಡುವುದು ವಾಡಿಕೆಯಾಗಿದೆ.

ದೇವರ ಗುಡ್ಡದಲ್ಲಿಯೂ ಸಹ ಒಡೆಯರೇ ಮುಖ್ಯಸ್ಥರು. ಇವರ ಮುಂದಾಳತ್ವದಲ್ಲಿಯೇ ಎಲ್ಲ ಧಾರ್ಮಿಕ ಕಾರ್ಯಕ್ರಮಗಳು ನೆರವೇರುತ್ತವೆ. ಇಲ್ಲಿ ದೇವಸ್ಥಾನದ ಆಡಳಿತವನ್ನು ನೋಡಿಕೊಳ್ಳಲು ಒಂದು ಸಮಿತಿಯಿದೆ. ಆ ಸಮಿತಿಯ

ಆದೇಶದಂತೆಯೇ ಇಲ್ಲಿನ ಸಕಲ ಕಾರ್ಯಕ್ರಮಗಳು ನೆರವೇರುತ್ತವೆ. ಬ್ರಾಹ್ಮಣ ಅರ್ಚಕರು ಅಭಿಷೇಕಾದಿ ಪೂಜಾ ಕಾರ್ಯಗಳನ್ನು ನಿರ್ವಹಿಸುತ್ತಾರೆ. ಮುಖ್ಯ ದೇವಸ್ಥಾನದಲ್ಲಿ ಪಂಚಮಸಾಲಿ ಪೂಜಾರಿ ಎಂಬ ವೀರಶೈವ ಸಮುದಾಯಕ್ಕೆ ಸೇರಿದ ಪೂಜಾರಿಗಳೂ ಇದ್ದಾರೆ. ಇವರು ಹಣ್ಣು ಕಾಯಿ, ಕರ್ಪೂರಾರತಿ ಮೊದಲಾದ ಸೇವೆಗಳನ್ನು ಸಲ್ಲಿಸುತ್ತಾರೆ. ಗಂಗಿಮಾಳಮ್ಮನ ದೇವಸ್ಥಾನದಲ್ಲಿ ಮಾತ್ರ ಬೋವಿ ಜನಾಂಗದವರು ಪೂಜೆ ಸಲ್ಲಿಸುತ್ತಾರೆ.

ಮಲ್ಲಾರಿ ಮಹಾತ್ಮೆಯಲ್ಲಿ ಹೇಳಿರುವಂತಹ ಏಳುಜನ ಧರ್ಮ ಪುತ್ರರು ಅಥವಾ ಋಷಿಗಳು ಇದ್ದ ತಪೋಭೂಮಿ ದೇವರಗುಡ್ಡ ಎಂದು ಭಕ್ತರು ನಂಬುತ್ತಾರೆ. ಈ ದೇವಾಲಯಕ್ಕೆ ಇತರೆಡೆಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಬ್ರಾಹ್ಮಣ ಭಕ್ತರು ನಡೆದುಕೊಳ್ಳುತ್ತಾರೆ. ಟ್ರಸ್ಟ್ ನ ಆಡಳಿತವಿದ್ದರೂ ದೇವಾಲಯಕ್ಕೆ ಅನೇಕರು ಉಂಬಳಿಗಳನ್ನು ಬಿಟ್ಟಿದ್ದಾರೆ. (ದೇವಸ್ಥಾನದ ಪ್ರಧಾನ ಅರ್ಚಕರಾದ ಶ್ರೀ ಪ್ರಕಾಶ್ ಅವರು ಹೇಳುವಂತೆ – ಇಲ್ಲಿ ವರ್ಷದ ಮೊದಲ ಅಥವಾ ಎರಡನೆಯ ಹುಣ್ಣಿಮೆಯ ದಿನದಂದು ಆಕಾಶದಲ್ಲಿ ಆಕಸ್ಮಿಕವಾಗಿ ಸಂಜೆಯ ವೇಳೆಯ ಮಬ್ಬು ಕವಿಯುತ್ತದೆ. ಆ ಸಂದರ್ಭದಲ್ಲಿ ಮುಖ್ಯ ದೇವಸ್ಥಾನದ ಕಳಸದ ಮೇಲೆ ಜ್ಯೋತಿಯೊಂದು ಪ್ರಕಾಶಮಾನವಾಗಿ ಕಾಣಿಸಿಕೊಳ್ಳುತ್ತದೆ. ಸುಮಾರು ಎರಡು ಮೂರು ನಿಮಿಷಗಳ ಕಾಲ ನಡೆಯುವ ಈ ಘಟನೆ ಭಕ್ತರನ್ನು ಪರವಶರನ್ನಾಗಿ ಮಾಡುತ್ತದೆ. ಈ ರೀತಿಯ ಘಟನೆ ನಡೆಯುವ ಏಕೈಕ ಮೈಲಾರ ಕ್ಷೇತ್ರ ಇದಾಗಿದೆ.)

## ೪.೩ ಕಾರಿಮನಿ ಕ್ಷೇತ್ರ

ಬೆಳಗಾವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನ ಕಾರಿಮನಿ ಕ್ಷೇತ್ರ ವಾಯುವ್ಯ ಕರ್ನಾಟಕದ ಪ್ರಸಿದ್ಧ ಕ್ಷೇತ್ರ. ಇದು ಸವದತ್ತಿ ತಾಲ್ಲೂಕಿನ ಮುರಗೋಡದಿಂದ ದಕ್ಷಿಣಕ್ಕೆ ಸುಮಾರು ನಾಲ್ಕು ಕಿಲೋಮೀಟರ್ ದೂರವಿದೆ. ಸುತ್ತಲೂ ಮುದ್ಗಲ ಗುಡ್ಡದ ಸಾಲುಗಳಿವೆ. ಬೆಳಗಾವಿ ಜಿಲ್ಲೆಯ ಭಕ್ತರೆಲ್ಲ ಈ ದೇವರನ್ನು ಮಲ್ಲಯ್ಯ, ಮಲ್ಲಿಕಾರ್ಜುನ ಎಂದೇ ಕರೆಯುವರು.

ದೇವಸ್ಥಾನದ ಗರ್ಭಗೃಹದಲ್ಲಿ ಸ್ವಯಂಭೂ ಲಿಂಗವಿದೆ. ಇದರ ಹಿಂದೆ ಒಂದು ಕಲ್ಲಿನ ಫಲಕದಲ್ಲಿ ಅಶ್ವಾರೋಹಿಯಾದ ಮೈಲಾರಲಿಂಗನ ಎರಡು ಅಡಿ ಎತ್ತರದ ಉಬ್ಬು ಶಿಲ್ಪವನ್ನು ಕೆತ್ತಲಾಗಿದೆ. ಈ ದೇವಸ್ಥಾನದ ಬಳಿಯಲ್ಲಿಯೇ ಕ್ರಿ. ಶ. ೧೬ನೆಯ ಶತಮಾನದ ಶಿಲಾ ಶಾಸನವಿದ್ದು ಇದರಲ್ಲಿ ಮೈಲಾರ ದೇವರ ಸ್ಪಷ್ಟ ಉಲ್ಲೇಖವಿದೆ.

ಇಲ್ಲಿನ ಪೂಜಾರಿಗಳು ಪಂಚಮಸಾಲಿ ವೀರಶೈವರಾಗಿದ್ದಾರೆ. ಪೂಜಾರಿಗಳ ಮನೆತನದವರೇ ಪೂಜೆ ಇತ್ಯಾದಿಗಳನ್ನು ನೆರವೇರಿಸುತ್ತಾರೆ. ಈ ಪ್ರದೇಶದ ಸಮೀಪದ ಗ್ರಾಮವಾದ ಮರಕುಂಬಿಯ ನಾಯಕರು ಈ ದೇವಸ್ಥಾನದ ಕಾರ್ಯ ಕಲಾಪಗಳನ್ನು ನಡೆಸುತ್ತಾರೆ. ಹಿಂದೆ ಈ ಪ್ರದೇಶವು ಮರಕುಂಬಿ ಗ್ರಾಮದ ನಾಯಕರ ಆಕಳುಗಳ ದೊಡ್ಡಿಯಾಗಿತ್ತಂತೆ. ಮರಕುಂಬಿಯ ನಾಯಕರ ಪೂರ್ವಜರ ಭಕ್ತಿಯ ಕಾರಣವಾಗಿ ದೇವರ ಗುಡ್ಡದಿಂದ ದೇವರು ಇಲ್ಲಿ ಬಂದು ನೆಲೆಸಿದನಂತೆ. ಆತನಿಗೆ ವಚನ ಕೊಟ್ಟಂತೆ ದೇವರು ಈಗ ಸ್ವಯಂಭೂ ಲಿಂಗವಿರುವ ಸ್ಥಳದಲ್ಲಿದ್ದ ಹುತ್ತದ ಬುಡದಲ್ಲಿ ಲಿಂಗಾಕಾರದಲ್ಲಿ ಪ್ರಕಟನಾದ. ಆದ್ದರಿಂದಲೇ ನಾಯಕರು ಇಲ್ಲಿನ ಧರ್ಮದರ್ಶಿಗಳಾದರು.[4]

## ೪.೪ ಗುಡೂರು

ಬಾಗಲಕೋಟ ಜಿಲ್ಲೆಯ ಹುನಗುಂದ ತಾಲ್ಲೂಕಿನ ಗುಡೂರು ಮತ್ತೊಂದು ಪ್ರಸಿದ್ಧ ಮೈಲಾರ ಕ್ಷೇತ್ರ. ಬಾದಾಮಿಯಿಂದ ಹುನಗುಂದಕ್ಕೆ ಹೋಗುವ ಮಾರ್ಗದಲ್ಲಿ ಬಾದಾಮಿಯಿಂದ ಸುಮಾರು ಮೂವತ್ತೈದು ಕಿಲೋಮೀಟರ್ ದೂರದಲ್ಲಿ ಗುಡೂರ ಗ್ರಾಮವಿದೆ. ಇಲ್ಲಿನ ದೇವರನ್ನು ಹುಲ್ಲಪ್ಪ ಎಂಬ ಹೆಸರಿನಿಂದ ಕರೆಯುತ್ತಾರೆ. ದೇವಾಲಯದ ಬಾಗಿಲಿಗೆ ಹೊಂದಿದಂತೆ ಪೂರ್ವದಲ್ಲಿ ಮೈಲಾರ ಲಿಂಗನ ಉಬ್ಬು ಮೂರ್ತಿಯೊಂದಿದೆ. ಮೈಲಾರ ಲಿಂಗನ ಜೊತೆಗೆ ಗಂಗಿಮಾಳಮ್ಮನೂ ಅವನ ಬೆನ್ನ ಹಿಂದೆ ಇದ್ದಾಳೆ. (ಇದೇ ರೀತಿಯ ಮೂರ್ತಿಗಳು ಮಹಾರಾಷ್ಟ್ರದ ದೇವಸ್ಥಾನಗಳಲ್ಲಿ ಕಂಡು ಬರುತ್ತವೆ. ಮೈಲಾರ ದೇವರ ಫೋಟೋಗಳೂ ಸಹ ಇದೇ ರೀತಿಯವಾಗಿರುತ್ತವೆ. ಇತ್ತೀಚೆಗೆ ದೇವರಗುಡ್ಡದಲ್ಲಿಯೂ ಸಹ ಇಂತಹುದೇ ಒಂದು ಮೂರ್ತಿಯನ್ನು ದೇವಸ್ಥಾನದ ಸಮೀಪದಲ್ಲಿ ಪ್ರತಿಷ್ಠಾಪಿಸಲಾಗಿದೆ.) ಪಶ್ಚಿಮದ ಬದಿಯ ಗೋಡೆಗೆ ಇನ್ನೊಂದು ಮೂರ್ತಿ ಇದೆ. ಇದರಲ್ಲಿ ಅಶ್ವಾರೋಹಿಯಾದ ಮೈಲಾರಲಿಂಗ ಹಾಗೂ ಅವನ ಎಡ ಬಲದಲ್ಲಿ ಗಂಗಿಮಾಳಮ್ಮ ಹಾಗೂ ಕುರುಬರ ಮಾಳವ್ವನ ಮೂರ್ತಿಗಳಿವೆ. ಇವೆರಡೂ ಉಸುಕು ಕಲ್ಲಿನಲ್ಲಿ ಬಿಡಿಸಿದ ಉಬ್ಬು ಮೂರ್ತಿಗಳಾಗಿವೆ.

ಇಲ್ಲಿ ಪ್ರತಿನಿತ್ಯ ಪೂಜೆ ಸಲ್ಲಿಸುವವರು ಅಂಬಿಗ ಜಾತಿಯವರು. ಇಲ್ಲಿ ಸ್ಥಾನಿಕರಾದ ಇತರ ಗೊರವ ಅಥವಾ ಗೊರವಿಯರಿಲ್ಲ. ಇವರು ದೇವರಗುಡ್ಡ ಅಥವಾ ಹಿರೇಮೈಲಾರದ ಕಡೆಯಿಂದ ಬಂದು ಹೋಗುತ್ತಾರೆ.

## ೪.೫ ಯಾತಗಿರಿ

ಶಾಸನಗಳಲ್ಲಿ ಏತಗಿರಿ ಎಂದು ಪ್ರಸಿದ್ಧವಾಗಿರುವ ಈಗಿನ ಗುಲ್ಬರ್ಗಾ ಜಿಲ್ಲೆಯ ಯಾದಗಿರಿ ಅಥವಾ ಯಾತಗಿರಿಯು ಮೈಲಾರಲಿಂಗನ ಪ್ರಸಿದ್ಧ ಕ್ಷೇತ್ರವಾಗಿದೆ. ಇಲ್ಲಿಯ ದೇವರನ್ನು ಜನ ಯಾತಗಿರಿ ಮಲ್ಲೇಶ, ಹೊನ್ನಕೆರೆ ಮಲ್ಲಯ್ಯ ಎಂಬ ಹೆಸರುಗಳಿಂದ ಕರೆಯುತ್ತಾರೆ.



ಯಾತಗಿರಿಯಿಂದ ಸುಮಾರು ಎಪ್ಪತ್ತೇಳು ಕಿಲೋಮೀಟರ್ ದೂರದಲ್ಲಿ ಮೈಲಾರಪುರವೆಂಬ ಹಳ್ಳಿಯಿದೆ. ಅದಕ್ಕೆ ಹೊಂದಿಕೊಂಡಂತೆ ಒಂದು ಕಲ್ಲುಗುಡ್ಡವಿದೆ. ಅದರಲ್ಲಿ ಒಂದು ನೈಸರ್ಗಿಕ ಗುಹೆಯಂತಹ ಪ್ರದೇಶವಿದೆ. ಇದರಲ್ಲಿ ಮೈಲಾರಲಿಂಗನ ಉತ್ಸವ ಮೂರ್ತಿಯಿದ್ದು ಅಖಂಡ ಎರಕದಿಂದ ಕೂಡಿದೆ. ಇನ್ನೂ ಮುಂದೆ ಹೋದಲ್ಲಿ ಗೋಡೆಯಲ್ಲಿ ನೆಲದಿಂದ ಸುಮಾರು ಎರಡು ಅಡಿ ಎತ್ತರದಲ್ಲಿ ಮೂಡಿದ ಮಲ್ಲಯ್ಯನ ಮೂರ್ತಿಯಿದೆ. ಈ ಶಿಲೆಯ ಒಂದು ಭಾಗದಲ್ಲಿಯೇ ಸ್ವಯಂಭೂ ಲಿಂಗವಿದೆ. ದೇವಸ್ಥಾನದ ಪರಿಸರದಲ್ಲಿನ ಕೊಳ್ಳದಲ್ಲಿ ಹೊನ್ನಕೆರೆ ಎಂದು ಕರೆಯಲಾಗುವ ಕೆರೆಯಿದೆ. ಹೂಗಾರ ವಂಶಕ್ಕೆ ಸೇರಿದವರು ಇಲ್ಲಿನ ಮುಖ್ಯ ಪೂಜಾರಿಗಳು. ಗೊರವ ದೀಕ್ಷೆ ನೀಡುವುದು ಹಾಗೂ ಹೇಳಿಕೆ ನುಡಿರುವುದು ಮೊದಲಾದ ಕಾರ್ಯಗಳನ್ನು ಈ ಪೂಜಾರಿಗಳೇ ಮಾಡುತ್ತಾರೆ.[5]

## ೪.೬ ಹಿಪ್ಪರಿಗೆ

ವಿಜಾಪುರದಿಂದ ಪೂರ್ವಕ್ಕೆ ಸುಮಾರು ಮೂವತ್ತೈದು ಕಿಲೋಮೀಟರ್ ದೂರದಲ್ಲಿ ದೇವರ ಹಿಪ್ಪರಿಗೆ ಎಂಬ ಊರಿದೆ. ಜನ ಸಾಮಾನ್ಯರು ಈ ದೇವರನ್ನು ಹಿಪ್ಪರಿಗೆ ಮಲ್ಲಯ್ಯ ಎಂದು ಗುರುತಿಸಿದರೂ ಸ್ಥಾನಿಕರು ಹಾಗೂ ಮೇಲುವರ್ಗದವರು ಮಾರ್ತಾಂಡ ಕ್ಷೇತ್ರ ಎಂದೇ ಹೇಳುತ್ತಾರೆ. ಮುಂಬೈ ಇಲಾಖೆಯ ಗೆಜೆಟಿಯರ್‌ನಲ್ಲಿ ಸಹ ಇಲ್ಲಿನ ದೇವರನ್ನು

ಮಾರ್ತಾಂಡ ಎಂದೇ ಕರೆದಿದ್ದಾರೆ. ಊರಿನಲ್ಲಿನ ಮನೆಯಂತಹ ಒಂದು ಗುಡಿಯಲ್ಲಿ ಮಾನವಾಕಾರದ ಒಂದು ಕಟ್ಟಿಗೆಯ ಮೂರ್ತಿ ಇದ್ದು, ಇದಕ್ಕೆ ಕೆಂಪು ಬಣ್ಣ ಬಳಿಯಲಾಗಿದೆ. ತಲೆಯ ಮೇಲೆ ದೊಡ್ಡ ಗಾತ್ರದ ಮುಂಡಾಸಿದೆ. ಮೂರ್ತಿಯ ಬಲಗೈಯ್ಯಲ್ಲಿ ಖಡ್ಗ ಹಾಗೂ ಎಡಗೈಯ್ಯಲ್ಲಿ ಬಟ್ಟಲು ಇವೆ.

ಈ ದೇವಾಲಯವನ್ನು ಈಗ ನಾಡಗೌಡ ಹಾಗೂ ದೇಶಪಾಂಡೆ ಮನೆತನದವರು ನೋಡಿಕೊಳ್ಳುತ್ತಾರೆ. ಮೊದಲು ಈ ದೇವಾಲಯದ ಪರಾಂಬರಿಕೆ ಸವದತ್ತಿ ತಾಲ್ಲೂಕಿನ ಮುರಗೋಡದಲ್ಲಿರುವ ದೀಕ್ಷಿತರ ಮನೆತನಕ್ಕೆ ಸೇರಿತ್ತು. ಈಗ ಈ ಮನೆತನದವರು ಆಗಾಗ ಹಿಪ್ಪರಿಗೆಗೆ ಬಂದು ದೇವಸ್ಥಾನದಲ್ಲಿ ನಡೆಯಬೇಕಾದ ಉತ್ಸವಾದಿ ಸೇವೆಗಳ ವ್ಯವಸ್ಥೆ ಮಾಡಿ ಹೋಗುತ್ತಾರೆ. ಪಂಚಮಸಾಲಿ ಲಿಂಗಾಯತರು ಇಲ್ಲಿ ಪ್ರತಿನಿತ್ಯದ ಪೂಜೆ, ಭಂಡಾರದ ಪೂಜೆ, ನಂದಾದೀವಿಗೆ ಮೊದಲಾದ ಕಾರ್ಯಗಳನ್ನು ನಿರ್ವಹಿಸುತ್ತಾರೆ. ಮಳ್ಳರು (ಮರುಳರು) ಎಂದು ಕರೆಯಲಾಗುವ ಇನ್ನೊಂದು ಕುರುಬ ಮನೆತನದವರು ರಾಹುತರಾಯನು ಏರುವ ಕುದುರೆಯ ವ್ಯವಸ್ಥೆ ನೋಡಿಕೊಳ್ಳುತ್ತಾರೆ. ಕುದುರೆಗೆ ಬಣ್ಣ ಹಾಕುವುದು, ಬಂಡಿ ಕಟ್ಟುವಾಗ ಅದನ್ನು ತಂದು ಬಂಡಿಯ ಮೇಲೆ ಸ್ಥಾಪಿಸುವುದು, ನಂತರ ಪುನಃ ಅದನ್ನು ಗರ್ಭಗುಡಿಯಲ್ಲಿ ನೆಲೆಗೊಳಿಸುವುದು ಮೊದಲಾದವು ಮಳ್ಳರು (ಮರುಳರು) ಮಾಡುವ ಸೇವೆಗಳು. ಬಂಡಿ ಕಟ್ಟುವ ಕಾರ್ಯ, ಅದರ ಖರ್ಚು, ಅದರ ಮೇಲೆ ಬರುವ ಕಾಣಿಕೆಗಳು, ತಿರುಕುಲದವರಿಗೆ (ವೀರಶೈವ ಗಾಣಿಗರು) ಸೇರುತ್ತವೆ. ಇವರ ಮನೆತನದ ಅಡ್ಡಹೆಸರೇ ಏಳುಕೋಟಿ ಎಂಬುದಾಗಿದೆ.[6]

## ೪.೭ ಪ್ರೇಮಪುರ ಮೈಲಾರ

ಬೀದರಿನಿಂದ ಸುಮಾರು ಇಪ್ಪತ್ತು ಕಿಲೋಮೀಟರ್ ದೂರದಲ್ಲಿ ಪ್ರೇಮಪುರ ಮೈಲಾರವಿದೆ. ಇದನ್ನು ಭೂತ ಮೈಲಾರ, ಏಳುಕೋಟಿ ಪೆಂಬರ, ಪ್ರೇಮಪುರ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ. ಊರ ಬಳಿಯಿರುವ ಹಳ್ಳದ ಸೇತುವೆಯನ್ನು ದಾಟಿಕೊಂದು ಮುಂದೆ ಹೋದರೆ ಮಸೀದಿಯಂತಹ ಒಂದು ದೇವಾಲಯವಿದೆ. ಇಲ್ಲಿ ಒಂದು ಸ್ವಯಂಭೂ ಲಿಂಗವಿದ್ದು, ಇದನ್ನೇ ಮೂಲತಃ ಮೈಲಾರಲಿಂಗನ ಗುಡಿ[7]ಎಂದು ಕರೆಯುತ್ತಾರೆ.

ಇಲ್ಲಿ ದಿನನಿತ್ಯ ಮೂರುಸಲ ಪೂಜೆ ನಡೆಯುತ್ತದೆ. ಬೆಳಗ್ಗೆ ಬ್ರಾಹ್ಮಣ ಅಥವಾ ಹೂಗಾರ ಪೂಜಾರಿಗಳಿಂದ, ಮಧ್ಯಾಹ್ನ ವೀರಶೈವರಿಂದ ಪೂಜೆ ಹಾಗೂ ಸಂಜೆ ಕುರುಬರಿಂದ ಪೂಜೆ ನಡಿಯುತ್ತದೆ. ಸಂಸ್ಕೃತದ ಮಲ್ಲಾರಿ ಮಹಾತ್ಮೆಯಲ್ಲಿ ವರ್ಣಿಸಲಾದ ಪ್ರೇಮಪುರ, ಪೆಂಬರ ಎಂದರೆ ಇದೇ ಕ್ಷೇತ್ರವೆಂದು ಹೇಳಬಹುದು. ಈ ದೇವಸ್ಥಾನಕ್ಕೆ ಕಲ್ಯಾಣಿ ಚಾಲುಕ್ಯ ಚಕ್ರವರ್ತಿಗಳು ತಮ್ಮ ಆದರವನ್ನು ತೋರಿಸಿದ್ದಾರೆ. ಕಲ್ಯಾಣಿ ಚಾಲುಕ್ಯರ ಜಗದೇಕಮಲ್ಲನ ಅಣದೂರು ಶಾಸನ[8]ದಲ್ಲಿ ಈ ದೇವರ ದೇವಸ್ಥಾನಕ್ಕೆ ಕಳಸಾರೋಹಣ ಮಾಡಿಸಿದ ವಿವರಗಳಿವೆ.

ಈ ಊರಿನ ಬಗ್ಗೆ ಇರುವ ಐತಿಹ್ಯದ ಪ್ರಕಾರ ಮಧ್ವಾಚಾರ್ಯರು ಇಲ್ಲಿಗೆ ಬಂದಾಗ ಇಲ್ಲಿನ ಶೈವ ಬ್ರಾಹ್ಮಣರು ಅವರಿಗೆ ಗೌರವ ತೋರಿಸಲಿಲ್ಲ; ಅಲ್ಲದೇ ದೇವಾಲಯದ ಆವರಣದಲ್ಲಿಯೇ ಎಲೆ ಅಡಿಕೆ ತಿಂದು ಉಗಿಯುತ್ತ ಅಸಭ್ಯವಾಗಿ ವರ್ತಿಸುತ್ತಿದ್ದರು. ಆಚಾರ್ಯರು ಹೇಳಿದರೂ ಅವರು ತಮ್ಮ ನಡುವಳಿಕೆಗಳನ್ನು ತಿದ್ದಿಕೊಳ್ಳಲಿಲ್ಲ. ಆಗ ಮಧ್ವಾಚಾರ್ಯರು "ಪ್ರೇಮಪುರ ಹಾಳಾಗಿ ಹೋಗಲಿ; ಬ್ರಾಹ್ಮಣರು ನಿರ್ನಾಮವಾಗಲಿ" ಎಂದು ಶಪಿಸಿದರಂತೆ. ಅಂದಿನಿಂದ ಇಲ್ಲಿ ಯಾರೂ ಬ್ರಾಹ್ಮಣರು ವಾಸಿಸುತ್ತಿಲ್ಲ.

## ೪.೮ ಮಂಗಸೂಳಿ

ಬೆಳಗಾವಿ ಜಿಲ್ಲೆಯ ಅಥಣಿ ತಾಲ್ಲೂಕಿನಲ್ಲಿ ಅಥಣಿಯಿಂದ ಸುಮಾರು ಇಪ್ಪತ್ತು ಕಿಲೋಮೀಟರ್ ದೂರದಲ್ಲಿ ಮಂಗಸೂಳಿ ಮೈಲಾರನ ದೇವಸ್ಥಾನವಿದೆ. ಇಲ್ಲಿನ ದೇವಸ್ಥಾನದಲ್ಲಿ ನೆಲದ ಮೇಲೆ ಮಲ್ಲಯ್ಯನ ಸ್ವಯಂಭೂ ಲಿಂಗವಿದೆ. ಮಲ್ಲಯ್ಯನ ಅಶ್ವಾರೋಹಿಯಾದ ಪಂಚಲೋಹದ ಮೂರ್ತಿಯೊಂದಿದ್ದು ಚತುರ್ಭುಜಗಳನ್ನು ಹೊಂದಿದೆ. ಖಡ್ಗ, ತ್ರಿಶೂಲ, ಡಮರುಗಳನ್ನು ಹಿಡಿದ ಮಲ್ಲಯ್ಯ ಇನ್ನೊಂದು ಕೈಯ್ಯಿಂದ ಗಂಗಿ ಮಾಳವ್ವನನ್ನು ಆಲಿಂಗಿಸಿ ಹಿಡಿದಿದ್ದಾನೆ. ಇದೇ ಸ್ಥಳದಲ್ಲಿ ಇನ್ನೊಂದು ಮೂರ್ತಿಯಿದ್ದು, ಅದು ನಿಂತಿರುವ ಭಂಗಿಯಲ್ಲಿದೆ. ಈ ಮೂರ್ತಿಯ ಎರಡೂ ಕೈಗಳಲ್ಲಿ ಖಡ್ಗ ಹಾಗೂ ಢಾಲು ಇವೆ. ಒಂದು ಬದಿಯಲ್ಲಿ ನಾಯಿ ಇದೆ.

ಇಲ್ಲಿರುವ ಐತಿಹ್ಯದ ಪ್ರಕಾರ ಮೈಲಾರಲಿಂಗನು ತನ್ನ ಭಕ್ತನಾಗಿದ್ದ ದೇಸಾಯಿಯುವರನ್ನು ಬಂಧನದಿಂದ ತಪ್ಪಿಸಿಕೊಳ್ಳುವಂತೆ ಮಾಡಿ ತನ್ನ ದರ್ಶನಕ್ಕೆ

ಕರೆಸಿಕೊಂಡನಂತೆ. ಈ ಸಂದರ್ಭದಲ್ಲಿ ಆದ ಒಂದು ಅಚಾತುರ್ಯದಿಂದಾಗಿ ಮೈಲಾರನು ನಳದುರ್ಗದಿಂದ ಮಂಗಸೂಳಿಗೆ ಬಂದು ಲಿಂಗದರೂಪದಲ್ಲಿ ಸ್ಥಿತಗೊಂಡನಂತೆ.

ಇಲ್ಲಿನ ಪೂಜಾರಿಗಳು ಹೂಗಾರರು. ರುದ್ರಾಭಿಷೇಕ ಮೊದಲಾದ ಸಂದರ್ಭಗಳಲ್ಲಿ ಮಾತ್ರ ಬ್ರಾಹ್ಮಣ ಪುರೋಹಿತರು ಬಂದು ಹೋಗುತ್ತಾರೆ. ದಿನವಹಿ ಎರಡು ಸಲ ಪೂಜೆ ನಡೆಯುತ್ತದೆ. ಸಂಜೆಯ ಹೊತ್ತು ಆರತಿಯ ಕಾರ್ಯಕ್ರಮವಿರುತ್ತದೆ.

ಇವುಗಳಲ್ಲದೇ ಮೈಲಾರನ ಭಕ್ತರು ಸ್ಥಾಪಿಸಿದ ಇನ್ನೂ ಅನೇಕ ದೇವಸ್ಥಾನಗಳು ಕರ್ನಾಟಕದ ವಿವಿಧ ಜಿಲ್ಲೆಗಳಲ್ಲಿವೆ. ಅವುಗಳಲ್ಲಿಯೂ ಸಹ ಮೈಲಾರ ಕ್ಷೇತ್ರದಂತೆಯೇ ಕೆಲವು ಆಚರಣೆಗಳು ರೂಢಿಯಲ್ಲಿವೆ.

## ೪.೯ ಮಹಾರಾಷ್ಟ್ರರಾಜ್ಯದ ಪ್ರಮುಖ ಮೈಲಾರ ಕ್ಷೇತ್ರಗಳು

ಮೈಲಾರ ದೈವಕ್ಕೆ ಸಂಬಂಧಿಸಿದಂತೆ ಈಗಿನ ಕರ್ನಾಟಕ ಹಾಗೂ ಮಹಾರಾಷ್ಟ್ರಗಳ ಕ್ಷೇತ್ರಗಳಲ್ಲಿ ಅನೇಕ ದೇವಸ್ಥಾನಗಳಿವೆ. ಸ್ವಾತಂತ್ರ್ಯಪೂರ್ವದಲ್ಲಿ ಮಹಾರಾಷ್ಟ್ರವೆಂಬ ಕಲ್ಪನೆಯೇ ಇರಲಿಲ್ಲ. ಮಹಾರಾಷ್ಟ್ರವನ್ನು ಕನ್ನಡದ ರಾಜರುಗಳೇ ಬಹುಕಾಲ ಆಳಿರುವುದರಿಂದ ಇಂದಿಗೂ ಅಲ್ಲಿ ಕನ್ನಡತನವನ್ನು ನಾವು ಗುರುತಿಸಬಹುದು. ಆದರೆ ಭಾಷಾವಾರು ಪ್ರಾಂತ್ಯಗಳ ವಿಭಜನೆಯಿಂದಾಗಿ ಜನರು ಭಾಷೆಯ ಆಧಾರದಲ್ಲಿ ವಿಭಜಿತರಾಗಬೇಕಾಯಿತು. ಆದರೆ ಸಾಂಸ್ಕೃತಿಕವಾಗಿ ಅವರಲ್ಲಿ ಯಾವುದೇ ರೀತಿಯ ವಿಭಜನೆಯಾಗಿಲ್ಲ ಎಂಬುದನ್ನು ಮೈಲಾರನನ್ನು ಕುರಿತು ಈ ಭೂಪ್ರದೇಶದಲ್ಲಿ ಇರುವ ಆಚರಣೆಗಳು, ಐತಿಹ್ಯಗಳು, ನಂಬಿಕೆಗಳು ಶೃತಪಡಿಸುತ್ತವೆ.

ಕರ್ನಾಟಕದಲ್ಲಿರುವಂತೆಯೇ ಈಗಿನ ಮಹಾರಾಷ್ಟ್ರರಾಜ್ಯದಲ್ಲಿಯೂ ಮೈಲಾರನಿಗೆ ಸಂಬಂಧಿಸಿದಂತೆ ಜಾಗೃತ ಸ್ಥಾನಗಳಿವೆ. ಅಲ್ಲಿ ಮೈಲಾರನನ್ನು ಖಂಡೋಬಾ, ಮೈಲಾರಮಾರ್ತಾಂಡ, ಮಾರ್ತಾಂಡಭೈರವ ಎಂದೂ, ಗಂಗಿಮಾಳಮ್ಮನನ್ನು ಮ್ಹಾಳಸಾ ಎಂದು ಕರೆಯುತ್ತಾರೆ.

ಇಂದಿನ ಮಹಾರಾಷ್ಟ್ರದಲ್ಲಿ ಜೆಜುರಿ, ಪಾಲಿ, ನಳದುರ್ಗ, ನಾಂದೇಡ, ಸಾತಾರ, ಶೇಗುಡ ಹಾಗೂ ನಿಮಗಾವ ಧಾವಡಿ ಕ್ಷೇತ್ರಗಳು ಮೈಲಾರನ ಪ್ರಧಾನ ಕ್ಷೇತ್ರಗಳಾಗಿವೆ.[9]

೧. **ಜೆಜುರಿ :** ಇದು ಪುಣೆ ಜಿಲ್ಲೆಯಲಿದೆ. ಪುಣೆಯಿಂದ ಸುಮಾರು ೪೦ ಕಿ. ಮೀ. ದೂರದಲ್ಲಿರುವ ಇಲ್ಲಿನ ದೇವರನ್ನು ಖಂಡೋಬಾ ಎಂದು ಕರೆಯುತ್ತಾರೆ.

೨. **ಪಾಲಿ :** ಪುಣೆ ಕರಾಡ ಮಾರ್ಗದಲ್ಲಿ ಕುಶಿಳದಿಂದ ಸುಮಾರು ಐದು ಕಿ. ಮೀ. ದೂರದಲ್ಲಿದೆ. ಇಲ್ಲಿನ ಐತಿಹ್ಯದ ಪ್ರಕಾರ ಶಿವನು ವಿಷ್ಣುವಿನ ಮೋಹಿನೀ ಅವತಾರಕ್ಕೆ ಮರುಳಾಗಿ ಇನ್ನೊಮ್ಮೆ ಅದೇ ರೂಪವನ್ನು ಧರಿಸುವಂತೆ ಕೇಳುತ್ತಾನೆ. ಆಗ ವಿಷ್ಣುವು, ನೀನು ಭೈರವನ ಅವತಾರ ಧರಿಸಿದಾಗ ನಾನು ಮೋಹಿನಿ ರೂಪ ತಾಳುತ್ತೇನೆ ಎಂದು ಹೇಳುತ್ತಾನೆ. ಅದೇ ರೀತಿ ಮಣಿಕ ಮಲ್ಲರ ಸಂಹಾರಕ್ಕೆ ಶಿವನು ಭೈರವ ರೂಪ ತಾಳಿದಾಗ ವಿಷ್ಣುವು ಪಾರ್ವತಿಯ ಶರೀರದಲ್ಲಿ ಪ್ರವೇಶಿಸಿ ತನ್ನ ವಚನವನ್ನು ಪೂರೈಸಿದನು. ಕರ್ನಾಟಕದ ಐತಿಹ್ಯದಂತೆಯೇ ಇಲ್ಲಿಯೂ ಸಹ ಗಂಗಿಮಾಳಿ ಅಥವಾ ಮ್ಹಾಳಸಾ ತಿಮ್ಮಪ್ಪನ ಮಗಳು. ಇಲ್ಲಿ ತಿಮ್ಮಪ್ಪನನ್ನು ತಿಮ್ಮಾಶೇಠ ಎನ್ನುತ್ತಾರೆ.

೩. **ನಳದುರ್ಗ :** ಉಸ್ಮಾನಾಬಾದ ಜಿಲ್ಲೆಯಲ್ಲಿರುವ ಅತ್ಯಂತ ಪ್ರಾಚೀನ ಕ್ಷೇತ್ರ. ಇಲ್ಲಿನ ದೇವರನ್ನು ಮಲ್ಹಾರ – ಮ್ಹಾಳಸಾಕಾಂತ ಎಂದು ಕರೆಯುತ್ತಾರೆ. ಇಲ್ಲಿನ ಐತಿಹ್ಯದ ಪ್ರಕಾರ ದೇವರು ಹತ್ತು ತಿಂಗಳು ನಳದುರ್ಗದಲ್ಲಿಯೂ, ಇನ್ನೆರಡು ತಿಂಗಳು ಅಣದೂರಿನಲ್ಲಿಯೂ ಇರುತ್ತಾನೆ. ಪೌರಾಣಿಕ ಮಾಹಿತಿಯ ಅನುಸಾರ ಇವನು ಬಾಣಾಯಿ[10]ಯನ್ನು ಮದುವೆಯಾದ. ಆಗ ಇವನ ಮೊದಲ ಪತ್ನಿ ಮ್ಹಾಳಸಾ ಹಾಗೂ ಬಾಣಾಯಿಗೆ ಜಗಳವಾಯಿತು. ಇದನ್ನು ಕಂಡ ಮಲ್ಹಾರಿಯು ಬಾಣಾಯಿಗೆ ಜೆಜೂರಿಯ ಕೆಳಭಾಗದಲ್ಲಿ ವಾಸ ಮಾಡಲು ತಿಳಿಸಿದ. ಇಂದಿಗೂ ಪ್ರತಿ ರವಿವಾರ ಮಲ್ಹಾರನು ಬಾಣಾಯಿಯ ಭೇಟಿಗೆ ಹೋಗಿಬರುತ್ತಾನೆ ಎಂಬ ಪ್ರತೀತಿಯಿದೆ.

೪. **ಮಾಳೆಗಾಂವ :** ನಾಂದೇಡ ಜಿಲ್ಲೆಯಲ್ಲಿರುವ ಈ ದೇವಸ್ಥಾನ ಸುಮಾರು ಸಾವಿರ ವರ್ಷಗಳಷ್ಟು ಹಳೆಯದು. ಇಲ್ಲಿ ವರ್ಷದಲ್ಲಿ ಮೂರುದಿನ ಭಕ್ತರಿಗೆ ಹೋಳಿಗೆಯ ಮಹಾಪ್ರಸಾದ ಇರುತ್ತದೆ.

೫. **ಸಾತಾರ :** ಔರಂಗಾಬಾದ ಜಿಲ್ಲೆಯಲ್ಲಿದೆ. ಜಿಲ್ಲಾಕೇಂದ್ರದಿಂದ ಸುಮಾರು ಒಂದೂವರೆ ಕಿ. ಮೀ. ದೂರದಲ್ಲಿರುವ ಈ ದೇವಾಲಯ ತುಂಬ ಪ್ರಾಚೀನವಾದುದು. ಚಂಪಾಷಷ್ಠಿ ಇಲ್ಲಿನ ಪ್ರಮುಖ ಉತ್ಸವವಾಗಿದೆ.

೬. **ಶೇಗುಡ :** ಈ ಕ್ಷೇತ್ರವನ್ನು ಶೇಗುಡ ಮಾಲ್ಹಾರೀ ಮಾರ್ತಾಂಡ ಕ್ಷೇತ್ರ ಎಂದೇ ಕರೆಯುತ್ತಾರೆ. ಅಹಮ್ಮದನಗರ ಜಿಲ್ಲೆಯ ಕರ್ಜ ತಾಲ್ಲುಕಿನಲ್ಲಿದ್ದು, ತಾಲ್ಲೂಕ ಕೇಂದ್ರದಿಂದ ಸುಮಾರು ೩೩ ಕಿ. ಮೀ. ದೂರದಲ್ಲಿದೆ.

೭. **ನಿಮಗಾವ ದಾವಡಿ ಕ್ಷೇತ್ರ :** ಪುಣೆ ಜಿಲ್ಲೆಯ ಖೇಡ ತಾಲ್ಲೂಕಿನಲ್ಲಿರುವ ಈ ಕ್ಷೇತ್ರ ರಾಜಗುರು ನಗರದಿಂದ ಸುಮಾರು ೧೦ ಕಿ. ಮೀ. ದೂರದಲ್ಲಿದೆ. ಇಲ್ಲಿ ನವರಾತ್ರಿಯಲ್ಲಿ ವಿಶೇಷ ಉತ್ಸವವಿರುತ್ತದೆ. ಕಲಸಿದ ಮೊಸರನ್ನದ ಪೂಜೆ ಇಲ್ಲಿನ ವಿಶೇಷ. ಪೂಜೆಯ ಬಳಿಕ ಅದನ್ನೆ ಮಹಾಪ್ರಸಾದದ ರೂಪದಲ್ಲಿ ವಿತರಿಸುತ್ತಾರೆ.

## ಅಡಿಟಿಪ್ಪಣಿಗಳು :

1. *ಅನುಬಂಧ – ೩ ರಲ್ಲಿ ಕರ್ನಾಟಕ ನಕ್ಷೆಯಲ್ಲಿ ಈ ಸ್ಥಳಗಳನ್ನು ಗುರುತಿಸಿದೆ; ಪುಟ – ೨೧೪*
2. *ದಕ್ಷಿಣಭಾರತದಲ್ಲಿನ ಮೈಲಾರಕ್ಷೇತ್ರಗಳನ್ನು ಸೂಚಿಸಿದ ನಕ್ಷೆಯನ್ನು ಅನುಬಂಧ– ೩ ರಲ್ಲಿ ನೀಡಲಾಗಿದೆ; ಪುಟ – ೨೧೫*
3. *ಶ್ರೀಮೈಲಾರಲಿಂಗೇಶ್ವರ ದಿವ್ಯ ಚರಿತಾಮೃತ, ಲೇಖಕರು – ಕೃಷ್ಣಪ್ಪ. ಪುಟ – ೧೦*
4. *ಡಾ. ಎಂ. ಬಿ. ನೇಗಿನಹಾಳ; ಶ್ರೀಮೈಲಾರಲಿಂಗ ದೇವರ ದಿವ್ಯ ಕ್ಷೇತ್ರಗಳು; ಪುಟ – ೭೬–೭೭*
5. *ಮಾಹಿತಿ – ಡಾ. ರಾಘವೇಂದ್ರ ಕುಲಕರ್ಣಿ*
6. *ಡಾ. ಎಂ. ಬಿ. ನೇಗಿನಹಾಳ; ಶ್ರೀಮೈಲಾರಲಿಂಗ ದೇವರ ದಿವ್ಯ ಕ್ಷೇತ್ರಗಳು; ಪುಟ – ೯೨*
7. *ಅದೇ, ಪುಟ – ೯೮*
8. *ಶ್ರೀಮತು ಪ್ರತಾಪ ಚಕ್ರವರ್ತಿ, ಜಗದೇಕಮಲ್ಲದೇವರು ಪಟ್ಟಬಂಧೋತ್ಸವ ಮಾಡಿಸಿಕೊಂಡು ಪ್ರಥಮ ರಾಜ್ಯದಲು. ಶ್ರೀಮನು ಮಹಾಭೈರವಂ ಮೈಳಾರ ದೇವರ ಶ್ರೀಪಾದಂಗಳಕಂ ; ದೇವರ ದೇವಾಲ್ಯಕ್ಕೆ ಕಳಸಾರೋಪಣಂ ಮಾಡಿ.......*
   *SII XVIII, NO - 156*
9. *ಮಾಹಿತಿ ಸಂಗ್ರಹಣೆ – ರಾಜಕುಮಾರ ಕಾಂತೀಲಾಲ ಲೋಢಾ; ಅನುಮೋಲ ದ್ವಾದಶ ಖಂಡೋಬಾ ದರ್ಶನ.*
10. *ಕರ್ನಾಟಕದಲ್ಲಿ ಇವಳನ್ನು ಕುರುಬತ್ತೆವ್ವ ಎಂದು ಕರೆಯುತ್ತಾರೆ.*

* * *

# ಅಧ್ಯಾಯ ೫ : ಮೈಲಾರಲಿಂಗನ ಭಕ್ತ ಪರಂಪರೆ

೧. ಒಡೆಯರು
೨. ಗಣಾಚಾರಿಗಳು
೩. ಗೊರವರು
೪. ಗೊರವಿಯರು
೫. ಶಿಬಾರದಾಳಿಯರು
೬. ಕಂಚಾವೀರರು
೭. ಇತರ ಭಕ್ತರು

# ಅಧ್ಯಾಯ – ೫

# ವೈಲಾರಲಿಂಗನ ಭಕ್ತ ಪರಂಪರೆ

## ೫.೧ ಒಡೆಯರು

ಪ್ರತಿಯೊಂದು ದೇವಾಲಯ ಹಾಗೂ ಧಾರ್ಮಿಕ ಕ್ಷೇತ್ರಗಳಿಗೆ ಹಿಂದಿನ ಕಾಲದಿಂದ ಪಾರುಪತ್ಯದಾರರು, ಪೂಜಾರಿಗಳು, ಪುರೋಹಿತರು, ಸೇವಕರು ಮೊದಲಾದವರನ್ನು ನೇಮಿಸುವ ರೂಢಿಯಿದೆ. ಇವರುಗಳನ್ನು ಸ್ಥಳೀಯರು, ರಾಜರು ಅಥವಾ ಆಯಾ ಪ್ರದೇಶಗಳ ಮುಖಂಡರು ನೇಮಿಸುತ್ತಿದ್ದರು. ಇವರಿಗೆ ದೇವಾಲಯದ ವತಿಯಿಂದ ಬರುವ ಕಾಣಿಕೆ, ಉಂಬಳಿ ಮೊದಲಾದವುಗಳಿಂದ ಜೀವನೋಪಾಯಕ್ಕೆ ಬೇಕಾದ ವ್ಯವಸ್ಥೆಯಾಗುತ್ತಿರುತ್ತದೆ. ಆದರೆ ಕೆಲಕಡೆ ದೇವಾಲಯದ ನಿರ್ಮಾಣಕ್ಕೆ ಕಾರಣರಾದವರು ಅಥವಾ ಅವರ ವಂಶೀಯರು ದೇವಸ್ಥಾನ ಸರ್ವಕಾರ್ಯಗಳನ್ನು ನೋಡಿಕೊಳ್ಳುವ ಕೆಲಸವನ್ನು ಮಾಡುತ್ತಾರೆ. ಇದೇ ರೀತಿಯಾಗಿ ವೈಲಾರದ ಕ್ಷೇತ್ರದಲ್ಲಿ ಒಡೆಯರು ಎಂಬ ವಿಶೇಷ ಜನಾಂಗದವರು ದೇವಸ್ಥಾನದ ಆಡಳಿತವನ್ನು ನಡೆಸುತ್ತ ಬಂದಿದ್ದಾರೆ. ಪ್ರಸ್ತುತ ಕರ್ನಾಟಕ ಸರಕಾರದ ಮುಜರಾಯಿ ಇಲಾಖೆಯ ಅಧೀನದಲ್ಲಿ ದೇವಸ್ಥಾನದ ಸಕಲ ಕಾರ್ಯಗಳು ನಡೆಯುತ್ತಿದ್ದರೂ ಪರಂಪರಾನುಗತವಾಗಿ ಬಂದ ವ್ಯವಸ್ಥೆಯಂತೆ ಒಡೆಯರು ದೇವಸ್ಥಾನದ ಸಕಲ ಕಾರ್ಯಕ್ರಮಗಳನ್ನು ನೆರವೇರಿಸುವ ಮುಖ್ಯಸ್ಥರಾಗಿದ್ದಾರೆ. ಇತರ ಪೂಜಾರಿಗಳು, ಗೊರವರು, ಭಕ್ತರು, ಇವರನ್ನು ಸ್ವಾಮಿಗಳು, ಒಡೆಯರು ಎಂದು ಭಕ್ತಿಯಿಂದ ಕಾಣುತ್ತಾರೆ. ಗೊರವ ದೀಕ್ಷೆ ನೀಡುವುದು, ಹೊರೆ ಹೊರಿಸುವುದು, ಭಗವಂತನಿಗೆ ಸಲ್ಲಬೇಕಾದ ಭಕ್ತಿಯನ್ನು ಸಲ್ಲಿಸುವವರು, ಭಂಡಾರ ಪೂಜೆ ಸಲ್ಲಿಸುವವರು, ಕಾರಣಿಕದ ಸಂದರ್ಭದಲ್ಲಿ ಗೊರವನಿಗೆ ಆದೇಶನೀಡುವವರು ಹಾಗೂ ಇತರೇ ಧಾರ್ಮಿಕ ವಿಧಿ ವಿಧಾನಗಳಿಗೆ ಮೂಲಕರ್ತರು ಇವರೇ ಆಗಿದ್ದಾರೆ[1]. (ಚಿತ್ರ–೨೧) ಭಕ್ತ ಸಮುದಾಯದಲ್ಲಿ ವಿಶಿಷ್ಟ ಮರ್ಯಾದೆ ಹೊಂದಿರುವ ಒಡೆಯರು ತಮ್ಮನ್ನು ತಾವು ವೈಲಾರಲಿಂಗನ ಸ್ವಯಂಭೂ ಲಿಂಗವನ್ನು ಪ್ರಥಮವಾಗಿ ಕಂಡ ಹಾಗೂ ಹುತ್ತದ ಮಣ್ಣಿನಿಂದ ಮೂರ್ತಿಯನ್ನು ಸಿದ್ಧಪಡಿಸಿದ ಕಪಿಲಮಹಾಮುನಿಗಳ ವಂಶಸ್ಥರೆಂದು ಹೇಳಿಕೊಳ್ಳುತ್ತಾರೆ.[2]

ಆದಿ ಜಗದ್ಗುರು ಕೂಡಲಿ ಶೃಂಗೇರಿ ಪೀಠಾಧೀಶ್ವರರಾದ ಮಹಾಸ್ವಾಮಿಗಳು ಶ್ರೀಕ್ಷೇತ್ರದ ಗುರುಪರಂಪರೆಯನ್ನು ಅನುಗ್ರಹಿಸಿ ಶ್ರೀಮುಖವನ್ನು ನೀಡಿದ್ದರಂತೆ.[3]–

ಶ್ರೀಮನ್ಮಹಾ ಕಪಿಲ ಮುನಿ ಕಲಿ ಮೈಲಾರ ಸಿಂಹಾಸನಕ್ಕಧಿಪತಿಗಳಾದ, ಕರಿಯಿಳಿ ಭಂಡಾರಕ್ಕೆ ಕಾರಣಕರ್ತರಾದ, ಆಚಾರ ವಿಚಾರಕ್ಕೆ ಅಗ್ರಗಣ್ಯರಾದ, ಆದಿ ಮೀನಗುಂದಿ (ಇದು ಈಗಿನ ಆಂಧ್ರಪ್ರದೇಶದಲ್ಲಿದೆ) ಪುರವರಾಧೀಶ್ವರಾದ, ಗುರು ಗೋಮುನಿ ಸಾಂಪ್ರದಾಯಿಕರಾದ, ವುಂಗ್ಲಾರ ಕ್ಷೇತ್ರ ತುಂಗಭದ್ರಾ ತೀರವಾಸಿಗಳಾದ, ನಿತ್ಯ ಕರ್ಮಾನುಷ್ಠಾನ ಹರಿಹರ ಧ್ಯಾನ ಪರಾಯಣರಾದ, ವ್ರತ ನೇಮ ನಿತ್ಯಗಳಾದ, ಗೋಬ್ರಾಹ್ಮಣ ಪ್ರತಿಪಾಲಕರಾದ, ನಯ ವಿನಯ ದಯಾ ದಾಕ್ಷಿಣ್ಯ ಪರೋಪಕಾರಿಗಳಾದ, ವಿಭೂತಿ ರುದ್ರಾಕ್ಷ ಮೂಲಿಕಾಭರಣ ಭೂಷಿತರಾದ, ತ್ರಿಕಾಲ ಶಿವ ಪೂಜಾ ಧುರಂಧರರಾದ, ನೀತಿಕಾರ್ಯ ಪ್ರವೀಣರಾದ, ನಿತ್ಯಾನ್ನದಾನ ವಿನೋದಿಗಳಾದ, ಏಕವಾಕ್ಯ ಪ್ರತಿಪಾಲಕರಾದ, ಸತ್ಯ ಸದಾಚಾರ ನಿತ್ಯ ಪರಿಪೂರ್ಣರಾದ, ಅಖಂಡಿತ ಲಕ್ಷ್ಮೀ ಸದಾ ಪ್ರಸನ್ನರಾದ, ಮಹಾರಾಜಾಧಿರಾಜ ಪೂಜಿತ ರಾಜಮಾನ್ಯ ರಾಜಶ್ರೀ ಹಿರೇಮೈಲಾರದ ಶ್ರೀಶ್ರೀಶ್ರೀ ಒಡೆಯರ......................

ಈ ರೀತಿಯ ಒಕ್ಕಣೆಯನ್ನು ಈಗಲೂ ಬಳಸುವುದನ್ನು ನಾವು ನೋಡಬಹುದು. ಇವರು ಕ್ಷತ್ರಿಯ ವರ್ಣದವರಾಗಿದ್ದು ಉಪನಯನಾದಿ ಸಂಸ್ಕಾರಗಳನ್ನು ಹೊಂದುತ್ತಾರೆ. ಹಾಗೆಯೇ ಜನಿವಾರವನ್ನು ಧರಿಸುತ್ತಾರೆ. ಜನನ–ಮರಣಾದಿ ಸೂತಕ ಹಾಗೂ ಮೂರು ದಿನಗಳ ಮಾಸಿಕಗಳನ್ನು ಪಾಲಿಸುವ ಇವರು ಮರಣ ಹೊಂದಿದಾಗ ಅಗ್ನಿ ಸಂಸ್ಕಾರ ಮಾಡುತ್ತಾರೆ.

ಈಗಲೂ ಈ ಒಡೆಯರ ಮನೆತನಕ್ಕೆ ಸೇರಿದವರೇ ದೇವಸ್ಥಾನದ ಧರ್ಮದರ್ಶಿಗಳಾಗಿದ್ದು ಇವರು ಶಿವನ ಅವತಾರವೆಂದೇ ಗೌರವ ಹೊಂದುತ್ತಾರೆ. ಹಣೆಗೆ ಭಂಡಾರ, ವಿಭೂತಿ ಧರಿಸಿ ಕೊರಳಲ್ಲಿ ರುದ್ರಾಕ್ಷಿ ಮಾಲೆ ಹಾಕಿಕೊಳ್ಳುತ್ತಾರೆ. ಉತ್ಸವಾದಿ ಸಂದರ್ಭಗಳಲ್ಲಿ ತಲೆಗೆ ಜರಿಯ ಪೇಟಾವನ್ನು ಸುತ್ತಿಕೊಂಡು ಕೋಟು ಧರಿಸುತ್ತಾರೆ. ಕಾರಣಿಕದಂತಹ ವಿಶೇಷ ಸಂದರ್ಭಗಳಲ್ಲಿ ಇವರಿಗೆ ಛತ್ರಿ, ಚಾಮರ ಹಾಗೂ ಆಪ್ತಾಗಿರಿಯ ಸೇವೆ ಸಲ್ಲುತ್ತದೆ. ಕೆಲ ಸಂದರ್ಭಗಳಲ್ಲಿ ಇವರು ನಡೆಯುವ ಹಾದಿಯಲ್ಲಿ ಮಡಿವಾಳರು

ಹಡದಿ (ಹಸಿಯ/ಮಡಿಯ ಬಟ್ಟೆ) ಹಾಸುವುದೂ ಉಂಟು. ಭಂಡಾರ ಛಟ್ಟಿ (ಷಷ್ಠಿ) ಮೊದಲಾದ ಸಂದರ್ಭಗಳಲ್ಲಿ ಖಡ್ಗದ ಮರ್ಯಾದೆಯೂ ಇವರಿಗೆ ಸಲ್ಲುತ್ತದೆ. ಭಾರತ ಹುಣ್ಣಿಮೆಯ ಸಂದರ್ಭದಲ್ಲಿ ನಡೆಯುವ ಕಾರ್ಣಿಕೋತ್ಸವದಲ್ಲಿ ಇವರು ಕುದುರೆಯನ್ನೇರಿಕೊಂಡು ಸಕಲ ವಾದ್ಯ ವೈಭವದೊಡನೆ ಕೂಡಿ ಡೆಂಕನ ಮರಡಿಗೆ ಹೋಗುತ್ತಾರೆ.

ಇವರ ಒಕ್ಕಣೆಯ ಪ್ರಕಾರ ಇವರು ತ್ರಿಕಾಲ ಪೂಜಾ ಧುರಂಧರರೂ, ಹರಿಹರರಲ್ಲಿ ಭೇದ ಎಣಿಸದಿರುವವರು ಎಂದು ಹೇಳಲಾಗಿದೆ. ಇವರು ಕ್ಷೇತ್ರ ಬಿಟ್ಟು ಭಕ್ತರು ಇರುವಲ್ಲಿಗೆ ಹೋಗುವ ಪ್ರಸಂಗಗಳು ಇರುತ್ತವೆ. ಭಕ್ತರ ಬೇಡಿಕೆಗಳಿಗನುಗುಣವಾಗಿ ಅವರ ಮನೆಯ ವಾಸ್ತು ಶಾಂತಿ, ಮದುವೆ, ಮುಂಜಿ ಮೊದಲಾದ ಸಂದರ್ಭಗಳಲ್ಲಿ ಇವರು ಪತ್ನಿ ಸಮೇತರಾಗಿ ಹೋಗುವುದು ರೂಢಿಯಲ್ಲಿದೆ.

ಇಂತಹ ಸಂದರ್ಭಗಳಲ್ಲಿ ಇವರು ತಮ್ಮ ನಿತ್ಯಪೂಜೆಗೆಂದು ಭಂಡಾರ ಬಟ್ಟಲು[4], ಭಂಡಾರ, ಚಿಕ್ಕ ಗಣಪತಿಯ ಮೂರ್ತಿ, ಮೈಲಾರಲಿಂಗನ ಮೂರ್ತಿ ಹಾಗೂ ಬೆತ್ತವೊಂದನ್ನು (ಬಿದಿರಿನ ಕೋಲು) ತಮ್ಮ ಜೊತೆಯಲ್ಲಿ ಇಟ್ಟುಕೊಂಡಿರುತ್ತಾರೆ. ಜೊತೆಯಲ್ಲಿ ಸ್ವಲ್ಪ ಮಣ್ಣನ್ನು ಸಹ ಇಟ್ಟುಕೊಂಡಿರುತ್ತಾರೆ. ಹೊರಗಡೆ ಹೋದ ಸಂದರ್ಭಗಳಲ್ಲಿ ಆಹಾರ ಪಾನೀಯಗಳ ವಿಷಯದಲ್ಲಿ ವಿಶೇಷ ಮಡಿಯನ್ನು ಇವರು ಪಾಲಿಸುತ್ತಾರೆ. ಇವರು ಶುದ್ಧ ಶಾಖಾಹಾರಿಗಳಾಗಿದ್ದಾರೆ.

## ೫.೨ ಗಣಾಚಾರಿಗಳು

ಮೈಲಾರದ ಗುರುಗಳಲ್ಲಿ ಒಡೆಯರ ನಂತರದ ಸ್ಥಾನ ಗಣಾಚಾರಿಗಳದ್ದು. ಇವರನ್ನು ಒಡೆಯರೇ ತಮ್ಮ ಪರವಾಗಿ ದೀಕ್ಷಾದಿಗಳನ್ನು ನೀಡಲು ನಿಯೋಜಿಸಿರುತ್ತಾರೆ. ಇವರು ಒಂದು ರೀತಿಯಲ್ಲಿ ಒಡೆಯರ ಪ್ರತಿನಿಧಿಗಳು. ಇವರನ್ನು ಹೆಗ್ಗಡೇಶ್ವರರ ಸ್ವರೂಪ ಎಂದು ಜನ ಭಾವಿಸುವರು. ಗಣ ಎಂದರೆ ಗುಂಪು, ಆಚಾರ್ಯ ಎಂದರೆ ಮಾರ್ಗದರ್ಶಕ. ಮಣಿಕ ಮಲ್ಲರೊಡನೆ ಯುದ್ಧ ನಡೆದಾಗ ವಿಷ್ಣುವು ಹೆಗ್ಗಪ್ಪನಾಗಿ (ಗಣಾಚಾರಿಯಾಗಿ) ಏಳು ಕೋಟಿ ದೇವತೆಗಳಿದ್ದ ಸೇನೆಯನ್ನು ಮುನ್ನಡೆಸಿದ್ದನು. ಹೀಗಾಗಿ ಈಗಲೂ ಅವನ ಪ್ರತಿರೂಪವಾಗಿ, ಮಾರ್ಗದರ್ಶಿಯಾಗಿ ದೀಕ್ಷಾಗುರುಗಳಾಗಿ ಗಣಾಚಾರಿಗಳು

ಕಾರ್ಯನಿರ್ವಹಿಸುತ್ತಾರೆ. ಇದೇ ರೀತಿ ಭಂಡಾರಿಗಳು ಎಂಬ ಪ್ರತಿನಿಧಿಗಳನ್ನು ಸಹ ಒಡೆಯರು ನಿಯೋಜಿಸಿಕೊಳ್ಳುವರು.

ಗಣಾಚಾರಿಗಳು ಹಾಗೂ ಭಂಡಾರಿಗಳಿಗೆ ಒಡೆಯರಂತೆಯೇ ಗೊರವರಿಗೆ ದೀಕ್ಷೆ ನೀಡುವ (ಹೊರೆ ಹೊರಿಸುವ) ಅಧಿಕಾರವಿರುತ್ತದೆ. ಇವರು ಈ ಕಾರ್ಯದ ಜೊತೆಗೆ ಆಯಾ ಪ್ರದೇಶದಿಂದ ಮೈಲಾರದೇವರಿಗೆ ಸಲ್ಲಬೇಕಾದ ಮುಡಿಪು, ಕಾಣಿಕೆಗಳನ್ನು ಸಂಗ್ರಹಿಸಿಕೊಂಡು ಬಂದು ಒಡೆಯರ್ ಅವರಿಗೆ ನೀಡುತ್ತಾರೆ. ಒಡೆಯರು ಸಂಚಾರಕ್ಕೆ ಹೊರಟ ಸಂದರ್ಭದಲ್ಲಿ ಗಣಾಚಾರಿಗಳು ಅವರ ಸಂಪೂರ್ಣ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಾರೆ. ಇವರು ಒಂದು ರೀತಿಯಲ್ಲಿ ಮೈಲಾರನ ಭಕ್ತರು ಹಾಗೂ ಒಡೆಯರ ನಡುವಿನ ಕೊಂಡಿಯಾಗಿ ಕಾರ್ಯನಿರ್ವಹಿಸುತ್ತಾರೆ.

## ೫.೩ ಗೊರವರು

ಮೈಲಾರಲಿಂಗನ ಭಕ್ತ ಪರಂಪರೆಯಲ್ಲಿ ಬರುವ ಮೊದಲ ಸ್ಥಾನ ಗೊರವರದು. ಇವರು ಮೈಲಾರನ ಸೈನಿಕರೆಂದೂ ಹೇಳುವುದುಂಟು. ಮಣಿ ಮಲ್ಲಾಸುರರ ಸಂಹಾರಕ್ಕೆಂದು ಬಂದ ಏಳು ಕೋಟಿ ಸೈನಿಕರೇ ಗೊರವರಾಗಿ ತಲೆತಲಾಂತರದಿಂದ ಮುಂದುವರಿದಿದ್ದಾರೆ ಎನ್ನಬಹುದು. ಗೊರವರಾಗಲು ಜಾತಿಯ ಯಾವ ಕಟ್ಟು ಪಾಡುಗಳೂ ಇಲ್ಲ. ಆದರೆ ಹೆಚ್ಚಿನ ಸಂಖ್ಯೆಯಲ್ಲಿ ಕುರುಬ ಗೊರವರೇ ಇದ್ದಾರೆ. ಉಪ್ಪಾರ, ಲಂಬಾಣಿ, ಹರಿಜನ ಗೊರವರಂತೆಯೇ ಬ್ರಾಹ್ಮಣ, ಮುಸಲ್ಮಾನ ಗೊರವರನನ್ನು ಕಾಣಬಹುದಾಗಿದೆ. ಸಾಮಾನ್ಯವಾಗಿ ಮೈಲಾರನ ಭಕ್ತರನ್ನೆಲ್ಲ ಗೊರವರು ಎಂದೇ ಕರೆದರೂ ಗೊರವನಾಗಲು ಒಡೆಯರಿಂದ ಒಂದು ದೀಕ್ಷೆಯನ್ನು ಪಡೆಯಬೇಕು. ಇದನ್ನು ಹೊರೆ ಹೊರುವುದು ಎಂದು ಕರೆಯುತ್ತಾರೆ. (ಚಿತ್ರ – ೨೩)

ಗೊರವ ಪದವು ಸಂಸ್ಕೃತದ ಗುರು ಪದದಿಂದ ಬಂದ ರೂಪವಾಗಿರಬೇಕೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಸಂಸ್ಕೃತದ ಗುರು ಪದದ ಬಹುವಚನ ರೂಪ ಗುರವ: ಎಂದಾಗುತ್ತದೆ. ಇದೇ ಕಾಲಾಂತರದಲ್ಲಿ ಗೊರವ ಎಂದಾಗಿರಬೇಕು ಎಂಬುದು ಈ ಅಭಿಪ್ರಾಯದ ಹಿನ್ನೆಲೆ. ಈ ಪದ ಸಾಮಾನ್ಯವಾಗಿ ಎಲ್ಲ ಕಾಲಕ್ಕೂ, ಎಲ್ಲ ಕಡೆಗಳಲ್ಲಿಯೂ ಪ್ರಚಲಿತವಾಗಿತ್ತು ಎಂದು ಹೇಳಬಹುದು. ಸುಮಾರು ಹತ್ತನೆಯ

ಶತಮಾನದಿಂದಲೂ ಈ ಪದದ ಬಳಕೆಯನ್ನು ನಾವು ನೋಡಬಹುದು. ಅಂದಿನಿಂದ ಇಂದಿನವರೆಗೂ ಈ ಪದದ ರೂಪ ಪರಿವರ್ತನೆಯಾಗಿಲ್ಲ. ನಯಸೇನನ ಧರ್ಮಾಮೃತದಲ್ಲಿ ಈ ಪದದ ಬಳಕೆಯಿರುವುದನ್ನು ನಾವು ಕಾಣಬಹುದು.[5]

ದ್ರಾವಿಡ ವಿಶ್ವವಿದ್ಯಾಲಯದ ಪ್ರಾಧ್ಯಾಪಕ ಡಾ|| ಎಂ. ಎನ್. ವೆಂಕಟೇಶ್ ಅವರ ಪ್ರಕಾರ ಗೊರವ ಪದ ಕುರುಬ ಎಂಬ ಪದದಿಂದ ನಿಷ್ಪತ್ತಿಗೊಂಡಿರಬಹುದು. ಕುರಿ ಎಂಬ ಪದಕ್ಕೆ ತೆಲುಗಿನಲ್ಲಿ ಗುರ್ರ (ಗುರಿ) ಎನ್ನುತ್ತಾರೆ. ಆದ್ದರಿಂದ ಕುರಿ–ಗುರಿ ಯಾದಂತೆ, ಕುರುಬ–ಗುರುಬ–ಗುರುವ–ಗೊರವ ಆಗಿರಬಹುದಾಗಿದೆ.[6]

ಗೊರವರು ಲಾಕುಲೀಶ, ಪಾಶುಪತ ಮತ್ತು ಕಾಳಾಮುಖ ಎಂಬ ಸಂಪ್ರದಾಯಕ್ಕೆ ಸೇರಿದವರು. ವೀರಶೈವಕ್ಕೆ ಪೂರ್ವದ ಕರ್ನಾಟಕವು ಲಾಕುಲೀಶ–ಪಾಶುಪತ–ಕಾಳಾಮುಖ ಎಂಬ ಸಾತ್ವಿಕ ಮಾರ್ಗದ ಹಾಗೂ ಕಾಳಾಮುಖ ಕಾಲ ಎಂಬ ವಾಮ ಮಾರ್ಗಗಳ ಶೈವ ಪಂಥಗಳ ಕೇಂದ್ರವಾಗಿದ್ದಿತು. ಇವರಲ್ಲಿ ಸಾತ್ವಿಕ ಶೈವ ಪಂಥಕ್ಕೆ ಸಂಬಂಧಿಸಿದವರು ಗೊರವರು.[7]

ಇವರಿಗೆ ಸಂಬಂಧಿಸಿದ ಕ್ರಿ. ಶ. ೧೧೬೬ರ ಶಾಸನಾಧಾರವೊಂದು ಹೀಗಿದೆ.

ಹರಿಗೃಹದಿಂ ಹರಗೃಹದಿಂ
ಸಂಗೃಹದಿಂದರುಹಗೃಹದೆ ಬೌದ್ಧಾಲಯದಿಂ ।
ಗೊರವರ, ಸವಣರ, ಬೌದ್ಧರ
ನೆರವಿಗಳಿಂದಿಂದಿ ನಾಡೆ ಸೊಗಯಿಸಿ ತೋರ್ಕುಂ ॥[8]

ಗೊರವರಾಗಲು ಇಂತಹುದೇ ಜಾತಿ, ಜನಾಂಗಕ್ಕೆ ಸೇರಿದವರಾಗಿರಬೇಕೆಂಬ ನಿಯಮಾವಳಿಗಳೇನೂ ಇಲ್ಲ. ಆದರೆ ಗುರುಗಳಿಂದ ಕ್ರಮಬದ್ಧವಾಗಿ ದೀಕ್ಷೆ ತೆಗೆದುಕೊಂಡರೆ ಮಾತ್ರ ಗೊರವರಾಗಲು ಸಾಧ್ಯ. ತಮ್ಮ ಮನೆತನಗಳ ಪರಂಪರೆಯನ್ನು ಮುಂದುವರೆಸುವ ಕಾರಣಕ್ಕೆ ದೀಕ್ಷೆ ತೆಗೆದುಕೊಳ್ಳುವ ಸಂಪ್ರದಾಯ ಒಂದೆಡೆ ಇದ್ದರೆ, ಹರಕೆ ಹೊತ್ತು ಅದರ ಕಾರಣದಿಂದ ಗೊರವರಾಗುವ ಸಂಪ್ರದಾಯ ಇನ್ನೊಂದೆಡೆ ಇದೆ. ಇದಲ್ಲದೆ ಮೈಲಾರದೇವರ ಅಥವಾ ಅವನ ಭಕ್ತರ ಆಚರಣೆಗಳನ್ನು ನಿಂದಿಸಿದವರು, ಗರ್ವದಿಂದ ಅನ್ಯಾಯ ಎಸಗುವವರು, ಮೊದಲಾದವರು ಕಷ್ಟಕ್ಕೆ ಸಿಲುಕಿದಾಗ, ಮೈಲಾರನ

ಮೊರೆ ಹೋಗುತ್ತಾರೆ. ಆಗ ಗೊರವ ದೀಕ್ಷೆ ಪಡೆದು ನಿಯಮಗಳಿಗೆ ಅನುಗುಣವಾಗಿ ನಡೆದುಕೊಳ್ಳುತ್ತಾರೆ.

ಗೊರವ ದೀಕ್ಷೆ ತೆಗೆದುಕೊಳ್ಳುವುದನ್ನು ಹೊರೆ ಹೊರುವುದು ಎಂದು ಹೇಳುತ್ತಾರೆ. ಒಂದು ಮನೆಯಲ್ಲಿ ಒಂದು ತಲೆಮಾರಿನಿಂದ ಮುಂದಿನ ತಲೆಯವರು ಈ ಕ್ರಮವನ್ನು ಪಾಲಿಸುತ್ತಾರೆ. ಮನೆಯಲ್ಲಿ ಹೆಚ್ಚು ಜನ ಮಕ್ಕಳಿದ್ದಾಗ ಸಾಮಾನ್ಯವಾಗಿ ಎಲ್ಲರಿಗಿಂತ ಹಿರಿಯವನು ದೇವರಲ್ಲಿ ಹೊರೆ ಹೊರುತ್ತಾನೆ. ಸಾಮಾನ್ಯವಾಗಿ ಮದುವೆಗೆ ಮುಂಚೆ ಗೊರವ ದೀಕ್ಷೆ ಪಡೆಯುವುದೇ ಹೆಚ್ಚು. ಆದರೆ ಮದುವೆಯ ಬಳಿಕವೂ ದೀಕ್ಷೆಪಡೆಯಬಹುದಾಗಿದೆ.

ಗೊರವರಾಗಲು ಪೂರ್ವಭಾವಿಯಾಗಿ ಅನೇಕ ಸಿದ್ಧತೆಗಳನ್ನು ಮಾಡಿಕೊಳ್ಳಬೇಕಾಗುತ್ತದೆ. ಗೊರವನಾಗುವ ವ್ಯಕ್ತಿ ಮಾನಸಿಕವಾಗಿ ಸಿದ್ಧನಿರಬೇಕು. ನಿಯಮಾನುಸಾರ ಕುಡಿತ ಮೊದಲಾದ ದುಶ್ಚಟಗಳಿಂದ ದೂರವಿರಬೇಕು. ಸಕಲ ಪ್ರಾಣಿಗಳಲ್ಲಿ ದಯೆ ತೋರಬೇಕು. ಸಂಸಾರಿಯಾಗಿದ್ದರೂ ನಿತ್ಯ ಕಾಯಕ ನಡೆಸುತ್ತಿದ್ದು, ದೇವರ ಸೇವೆಯಲ್ಲಿ ಭಾಗಿಯಾಗುವ ಅವಕಾಶ ಇವರಿಗಿದೆ. ಊರಾಡುವುದು ಇವರ ಮುಖ್ಯ ಕಾಯಕ. ಹೀಗಾಗಿ ಕನಿಷ್ಟ ನಾಲ್ಕು ಮನೆಗಳಲ್ಲಿಯಾದರೂ ಅವರು ಭಿಕ್ಷಾಟನೆ ಮಾಡಬೇಕು ಇವೇ ಮೊದಲಾದ ನಿಯಮಗಳಿಗೆ ಅವರು ಬದ್ಧರಾದವರು ಮಾತ್ರ ಹೊರೆ ಹೊರಲು ಅರ್ಹರಾಗಿರುತ್ತಾರೆ.

**ಹೊರೆಯ ಪ್ರಕಾರಗಳು :**

ಗೊರವರಲ್ಲಿ ಹೊರೆ ಹೊರುವ ಕ್ರಮಕ್ಕೆ ಅನುಸಾರವಾಗಿ ವಿವಿಧ ಪ್ರಕಾರಗಳಿವೆ. ಮುಖ್ಯವಾಗಿ ನಾಯಿಗೊರವರು, ಕರಡಿಗೊರವರು, ಪಾರಿಗೊರವರು, ಮದ್ದಲಿಗೊರವರು, ಶಿವ ಗೊರವರು, ಕಿನ್ನರಿ ಗೊರವರು, ಕುದುರೆ ಗೊರವರನ್ನು ಹೆಸರಿಸಬಹುದು. ಇವರಲ್ಲದೆ ಬಿಲ್ಲಿನವರು, ನಿಶಾನೆಯವರು, ತ್ರಿಶೂಲದವರು, ಕಾಯಿಕೋಲು ಗೊರವರು ಹೀಗೆ ವಿಭಿನ್ನ ಸೇವೆಗಳನ್ನು ಮಾಡುವ ಗೊರವರಿದ್ದಾರೆ. ಇದಲ್ಲದೇ ಗೊರವಿಯರೂ ಸಹ ಇದ್ದು, ಮುದ್ರೆಯವರು, ಚವುರದವರು, ಎಲಿಚಂಚಿ ಚವುರದವರು, ಶಿಬರದಾಳಿಯವರು, ಕಲಾವಂತೆಯರು ಹೀಗೆ ವಿಭಿನ್ನ ಪ್ರಕಾರದ ಗೊರವಿಯರೂ ಇದ್ದಾರೆ.

**ಗೊರವರು ಹಾಗೂ ಅವರ ಸೇವೆಗಳು :**

೧. **ಕಾರಣಿಕದ ಗೊರವಪ್ಪ :** ಮೈಲಾರದ ಉತ್ಸವಗಳಲ್ಲಿ ಅತ್ಯಂತ ಪ್ರಮುಖವಾದ ಕಾರಣಿಕದ ದಿನ ಬಿಲ್ಲನ್ನೇರಿ ಕಾರಣಿಕದ ನುಡಿಯನ್ನು ನುಡಿಯುವ ಗೊರವನೇ ಕಾರಣಿಕದ ಗೊರವಪ್ಪ. ಇವನೂ ಸಹ ಇತರ ಗೊರವರಂತೆಯೇ ದೀಕ್ಷೆ ಪಡೆದಿದ್ದರೂ ಜನರು ಈತನ ನುಡಿಗೆ ಹೆಚ್ಚಿನ ಮಹತ್ವ ಕೊಡುತ್ತಾರೆ. ಇವನನ್ನು ಶಿವನ ಅವತಾರವೆಂದೂ ನಂಬುತ್ತಾರೆ. ಕಾರಣಿಕದ ದಿನ ಇವನು ನುಡಿಯುವ ಕಾರಣಿಕದ ನುಡಿಯನ್ನು ಕೇಳಲು ಲಕ್ಷಾಂತರ ಜನ ಮೈಲಾರದಲ್ಲಿ ಸೇರುತ್ತಾರೆ. ಇವನು ನುಡಿದ ನುಡಿ ಇದುವರೆಗೂ ಹುಸಿಯಾದ ಉಲ್ಲೇಖಗಳಿಲ್ಲ.

೨. **ಕರಡಿ ಗೊರವರು :** ಕರಡಿಯಂತೆ ಕಾಣಿಸುವ ಇವರು ಕರಡಿ ಟೊಪ್ಪಿಗೆ ಹಾಕಿಕೊಂಡು ಕೈಯ್ಯಲ್ಲಿ ಪಿಳ್ಳಂಗೋವಿ ಹಿಡಿದು ಊರಾಡುವ ಸೇವೆ ಮಾಡುತ್ತಾರೆ. ಇವರು ಹೆಚ್ಚಾಗಿ ಮೈಸೂರಿನ ಸುತ್ತಮುತ್ತ ಕಾಣುತ್ತಾರೆ. ಬಹುಶಃ ಇವರ ಮೇಲೆ ಮಾದೇಶ್ವರನ ಭಕ್ತರ ಅಥವಾ ಮಂಟೇಸ್ವಾಮಿಯ ಭಕ್ತರ (ಗುಡ್ಡರ) ಪ್ರಭಾವ ಇರುವಂತೆ ಕಾಣುತ್ತದೆ.

೩. **ಕುದುರೆ ಗೊರವಪ್ಪ :** ಇವರು ತಮ್ಮನ್ನು ತಾವು ಮೈಲಾರಲಿಂಗನ ವಾಹನ ಎಂದು ಕೊಳ್ಳುತ್ತಾರೆ. ಇವರನ್ನು ಕುದುರೆಕಾರರು ಎಂದೂ ಗುರುತಿಸುವರು. ಮಣಿಕ ಮಲ್ಲರ ಸಂಹಾರಕ್ಕೆ ಕುದುರೆಯ ಮೇಲೆ ಶಿವನು ಬಂದ ಸಂದರ್ಭದ ನೆನಪಿನಲ್ಲಿ ಈ ಕ್ರಮ ಬಂದಿದೆ ಎನ್ನಬಹುದು. ಇವರು ದೇವರು ತಮ್ಮ ಮೇಲೆ ಆರೂಢನಾಗಿದ್ದಾನೆಂದು ಭಾವಿಸಿ, ಚಾವಟಿಯಿಂದ ತಮ್ಮ ಕಾಲುಗಳಿಗೆ ತಾವೇ ಹೊಡೆದುಕೊಳ್ಳುತ್ತ ಕುಣಿಯುತ್ತಿರುತ್ತಾರೆ. ಇವರು ಸಾಮಾನ್ಯವಾಗಿ ಕಂಬಳಿಯ ನಿಲುವಂಗಿಯ ಬದಲು ಹಸಿರು, ಕೆಂಪು ಬಣ್ಣಗಳ ಕುತನಿಯ ನಿಲುವಂಗಿ ಧರಿಸುವರು. ಕಾಲಲ್ಲಿ ಗಗ್ಗರ ಅಥವಾ ಗೆಜ್ಜೆಸರ ಕಟ್ಟಿಕೊಂಡು ಚಾವಟಿಯಿಂದ ಹೊಡೆದುಕೊಳ್ಳುವರು. ಇದನ್ನು ನಯಸೇನನು ತನ್ನ ಧರ್ಮಾಮೃತದಲ್ಲಿ – “ಮೈಲಾರನ ಗೊರವರಂತೆ ತಂತಮ್ಮನೆ ಬಡಿದುಕೊಳ್ಳುಬ್ಬುಳಯಿಲಕುಮುಂ” ಎಂದು ಉಲ್ಲೇಖಿಸಿದ್ದಾನೆ. ಮೈಲಾರನ ಸಂಪ್ರದಾಯಗಳಲ್ಲಿ ಎಲ್ಲಕ್ಕೂ ಮೊದಲು ಉಲ್ಲೇಖಗೊಂಡ ಸಂಪ್ರದಾಯ ಇದಾಗಿದೆ.

೪. **ನಾಯಿ ಗೊರವಪ್ಪ :** ಮೈಲಾರನನ್ನು ಭೈರವನೆಂದೂ ಕರೆಯುವುದುಂಟು. ಭೈರವನ ವಾಹನ ಕುದುರೆಯಾದರೆ, ಅನುಯಾಯಿಗಳು ಹಾಗೂ ಬೇಟೆಯ ಸಹಾಯಕರು ನಾಯಿಗಳು. ಹೀಗಾಗಿ ಮೈಲಾರನ ಭಕ್ತ ಪರಂಪರೆಯಲ್ಲಿ ನಾಯಿ ಗೊರವರಿಗೆ ಮಹತ್ವವಿದೆ. ಈ ಸೇವೆಯಲ್ಲಿರುವ ಗೊರವರು ತಮ್ಮ ದೋಣಿ[9]ಗಳನ್ನು ನಡುವೆ ಇಟ್ಟು ಅದಕ್ಕೆ ಭಕ್ತಾದಿಗಳು ತುಂಬುವ ಹಣ್ಣುಪ್ಪ[10]ವನ್ನು ತಿನ್ನಲು ತಮ್ಮ ತಮ್ಮಲ್ಲಿ ಕಚ್ಚಾಡುತ್ತ, ನಾಯಿಯಂತೆ ಬೊಗಳುತ್ತ ಇರುತ್ತಾರೆ. ಇದನ್ನು ಕಿಲಾಣಿ ಸೇವೆ ಎನ್ನುತ್ತಾರೆ.

೫. **ದೋಣಿ ಗೊರವಪ್ಪ :** ದೋಣಿ ಎಂಬುದು ಚೌಕಾಕಾರದಲ್ಲಿ ಲೋಹದಿಂದ ಮಾಡಿದ ಒಂದು ಬಟ್ಟಲು. ಇದರಲ್ಲಿಯೇ ಭಕ್ತಾದಿಗಳು ನೀಡಿದ ಹಣ್ಣುಪ್ಪಗಳನ್ನು ಪಡೆದು ಉಣ್ಣುವ ಗೊರವರನ್ನು ದೋಣಿಗೊರವಪ್ಪ ಎನ್ನುತ್ತರೆ. ಈ ದೋಣಿ ಕಂಚಿನದಾಗಿದ್ದರೆ ಕಂಚಿನ ಗೊರವಪ್ಪ ಎನ್ನುವುದೂ ರೂಡಿಯಲ್ಲಿದೆ.

೬. **ದೀವಟಿಗೆ ಗೊರವಪ್ಪ :** ದೀವಟಿಗೆ ಅಥವಾ ಪಂಜಿನಂತಹ ದೀಪವೊಂದನ್ನು ಹಿಡಿದು ದೇವರ ಸೇವೆ ಸಲ್ಲಿಸುವ ಗೊರವರನ್ನು ದೀವಟಿಗೆ ಗೊರವರು ಎಂದು ಗುರುತಿಸುವರು. ಜಾತ್ರೆ, ಕಾರ್ಣೀಕದ ಸಂದರ್ಭದಲ್ಲಿ ಮೈಲಾರದ ದೇವಸ್ಥಾನದಲ್ಲಿ ಸಹಸ್ರಾರು ಜನ ದೀವಟಿಗೆ ಹಿಡಿದು ನಿಂತಿರುವುದನ್ನು ನೋಡಬಹುದು.

೭. **ಕಿನ್ನರಿ ಗೊರವಪ್ಪ :** ಇವನು ಕಿನ್ನರಿ ಎಂಬ ವಾದ್ಯವನ್ನು ಬಾರಿಸುತ್ತ ದೇವರ ಸೇವೆ ಮಾಡುತ್ತಾನೆ.

೮. **ಪಾರಿ ಗೊರವ :** ಪಾರಿ[11] ಅಥವಾ ಪಹರೆಯ ಗೊರವನು ದೇವಾಲಯದಲ್ಲಿ ಪೂಜಾ ವೇಳೆಗೆ ಪಾರಿ ಎಂಬ ವಾದ್ಯವನ್ನು ಬಾರಿಸುತ್ತ ದೇವರ ಪೂಜೆಗೆ ತನ್ನ ಸೇವೆಯನ್ನು ಸಲ್ಲಿಸುತ್ತಾನೆ.

೯. **ಮದ್ದಲೆ ಗೊರವಪ್ಪ :** ಇವನೂ ಸಹ ಕಿನ್ನರಿ ಗೊರವಪ್ಪನಂತೆಯೇ ಇದ್ದು, ಕಿನ್ನರಿಯ ಬದಲಾಗಿ ಮದ್ದಲೆಯನ್ನು ಬಾರಿಸುತ್ತ ಸೇವೆ ಸಲ್ಲಿಸುತ್ತಾನೆ. (ಚಿತ್ರ – ೨೬)

೭. **ಸರಪಳಿ ಗೊರವ :** ಸರಪಳಿ ಎಂದರೆ ಕಬ್ಬಿಣದಿಂದ ಮಾಡಿದ ವಸ್ತು (ಚೈನ್). ಇದನ್ನು ತಮ್ಮ ಬಲದಿಂದ ಹರಿಯುವ ಪವಾಡ ಮಾಡುವವರನ್ನು ಸರಪಳಿ ಗೊರವ ಎನ್ನುತ್ತಾರೆ. ಈ ಸಂದರ್ಭದಲ್ಲಿ ದೇವರು ತಮ್ಮ ಮೈಮೇಲೆ ಬಂದಿರುತ್ತಾನೆಂದು ಇವರು ನಂಬುತ್ತಾರೆ.

**ಗೊರವ ದೀಕ್ಷೆ :**

ಗೊರವ ದೀಕ್ಷೆಯನ್ನು ಪಡೆಯುವುದನ್ನು ಹೊರೆ ಹೊರುವುದು ಎನ್ನುತ್ತಾರೆ. ಸಾಮಾನ್ಯವಾಗಿ ಗಣಾಚಾರಿಗಳು ದೀಕ್ಷೆ ನೀಡುವ ಕಾರ್ಯ ನಿರ್ವಹಿಸಿದರೂ, ಮೈಲಾರದಲ್ಲಿ ಒಡೆಯರೇ ದೀಕ್ಷೆ ನೀಡುತ್ತಾರೆ. ಒಂದು ವೇಳೆ ಒಡೆಯರು ಊರಲ್ಲಿಲ್ಲದಿದ್ದರೆ ಅವರು ವಹಿಸಿದ ವ್ಯಕ್ತಿ (ಗಣಾಚಾರಿ/ಭಂಡಾರಿ/ಗೊರವಪ್ಪ) ಈ ಕಾರ್ಯ ನಿರ್ವಹಿಸುತ್ತಾರೆ.

ಹೊರೆ ಹೊರುವ ವ್ಯಕ್ತಿ ತಮ್ಮ ಮನೆಯ ಸಂಪ್ರದಾಯದಂತೆ ದೀಕ್ಷೆಗೆ ಸಿದ್ಧನಾಗುತ್ತಾನೆ. (ಚಿತ್ರ – ೧೦) ಮನೆಯನ್ನು ಸಾರಿಸಿ ಶುದ್ಧಗೊಳಿಸುತ್ತಾರೆ. ನಂತರ ಹೊರೆ ಹೊರುವ ವ್ಯಕ್ತಿಗೆ ಗೊರವರು ಹಾಗೂ ಮುತ್ತೈದೆಯರು ಸೇರಿ ಗೋಮೂತ್ರ ಹಾಗೂ ಆಕಳ ತುಪ್ಪಗಳನ್ನು ಎರೆದು ನಂತರ ಸ್ನಾನ ಮಾಡಿಸುತ್ತಾರೆ. ಸ್ನಾನದ ನಂತರ ಆ ವ್ಯಕ್ತಿ ಹೊಸ ಬಟ್ಟೆ ಧರಿಸಿ ಸಿದ್ಧನಾಗುತ್ತಾನೆ. ಅವನಿಗೆ ಮದುವೆಯಲ್ಲಿ ಕಟ್ಟುವಂತೆ ಎಲೆ, ಅರಿಷಿಣ ಕೊಂಬುಗಳ ಕಂಕಣವನ್ನು ಕಟ್ಟುತ್ತಾರೆ. ಅದೇ ರೀತಿ ಅವನ ಸಂಬಂಧಿಗಳು, ಈ ಕಾರ್ಯಕ್ರಮದಲ್ಲಿ ಭಾಗಿಯಾಗುವ ಇತರ ಗೊರವ, ಗೊರವಿಯರೂ ಕಂಕಣ ಕಟ್ಟಿಕೊಳ್ಳುತ್ತಾರೆ. ಗೊರವರು ಈ ಸಂದರ್ಭದಲ್ಲಿ ಮೈಲಾರನ ಸ್ತುತಿ ಪರವಾದ ಹಾಡುಗಳನ್ನು ಹಾಡುತ್ತಿರುತ್ತಾರೆ. ಗೊರವರ ಸಲಕರಣೆಗಳನ್ನು ತೆಗೆದುಕೊಂದು ವಾಲಗದವರೊಡನೆ ಕೂಡಿ ಕಳಸ, ಕನ್ನಡಿಗಳೊಂದಿಗೆ ದೇವಸ್ಥಾನಕ್ಕೆ ಹೋಗುತ್ತಾರೆ. ಈ ಸಂದರ್ಭದಲ್ಲಿ ಕೆಲವರು ತಮ್ಮ ಹರಕೆಗಳಿಗೆ ಅನುಗುಣವಾಗಿ ದೀಡ ನಮಸ್ಕಾರ ಹಾಕುವರು. ನಿವಾಳಿಗೆಂದು ತೆಂಗಿನಕಾಯಿಗಳನ್ನು ಒಡೆಯುವರು.

ಇವರೆಲ್ಲ ಸೇರಿ ದೇವಸ್ಥಾನಕ್ಕೆ ಪ್ರದಕ್ಷಿಣೆ ಬಂದು ಕಪಿಲ ಮುನಿಯ ಸಿಂಹಾಸನದ ಸನ್ನಿಧಿಯಲ್ಲಿ ಬಂದು ಸೇರುತ್ತಾರೆ. ಮೈಲಾರದಲ್ಲಿ ಇರುವ ಈ ಸ್ಥಳ ದೇವಸ್ಥಾನದ ನೈರುತ್ಯ ಮೂಲೆಯಲ್ಲಿದೆ. ಅಲ್ಲಿನ ಸಿಂಹಾಸನದ ಮೇಲೆ ಒಡೆಯರಿಗೆ ಮಾತ್ರ ಕುಳಿತುಕೊಳ್ಳುವ ಅಧಿಕಾರವಿದೆ. ಅವರು ಊರಲ್ಲಿಲ್ಲದಾಗ ಅವರ ಪ್ರತಿನಿಧಿಗಳು ದೀಕ್ಷೆ

ಕೊಡುವ ಕಾರ್ಯ ಮಾಡಬಹುದೇ ವಿನಃ ಸಿಂಹಾಸನದ ಮೇಲೆ ಕುಳಿತುಕೊಳ್ಳುವಂತಿಲ್ಲ. ಒಡೆಯರಿಲ್ಲದ ವೇಳೆ ಅವರಿಂದ ನಿಯುಕ್ತರಾದ ವ್ಯಕ್ತಿ ಈ ದೀಕ್ಷೆಯ ಕಾರ್ಯವನ್ನು ನೆರವೇರಿಸುವರು. (ನಾನು ಕ್ಷೇತ್ರ ಕಾರ್ಯಕ್ಕೆ ಹೋಗಿದ್ದಾಗ ಒಡೆಯರ ಸೋದರ ಮಾವನವರಾದ ಶ್ರೀ ತಮ್ಮಣ್ಣನವರು ಈ ಕಾರ್ಯವನ್ನು ನೆರವೇರಿಸುತ್ತಿದ್ದರು) ದೀಕ್ಷೆ ನೀಡುವವರು ಹಾಗೂ ತೆಗೆದುಕೊಳ್ಳುವವರು ಕಂಬಳಿಯನ್ನು ಹಾಸಿ, ಗದ್ದುಗೆ ಮಾಡಿ ಅದರ ಮೇಲೆ ಕುಳಿತುಕೊಳ್ಳುವರು. ಕಂಬಳಿಯ ಮೇಲೆ ಹಾಸಕ್ಕಿ ಹೊಯ್ದು ಅಲಂಕರಿಸಿರುತ್ತಾರೆ. ದೀಕ್ಷೆ ಪಡೆಯುವವನು ಒಡೆಯರಿಗೆ ಕಾಣಿಕೆಗಳನ್ನು ಸಲ್ಲಿಸಿ, ನಮಸ್ಕರಿಸಿ ಅವರ ಎದುರಿಗೆ ಕುಳಿತು ಕೊಳ್ಳುತ್ತಾನೆ. ಸಾಮಾನ್ಯವಾಗಿ ಒಡೆಯರು ಪೂರ್ವಾಭಿಮುಖ ವಾಗಿಯೂ, ದೀಕ್ಷೆ ಪಡೆಯುವವನು ಪಶ್ಚಿಮಾಭಿಮುಖವಾಗಿಯೂ ಕುಳಿತಿರುತ್ತಾರೆ.

ಹೊರೆ ಹೊರುವ ವ್ಯಕ್ತಿ ಕಂಬಳಿಯ ನಿಲುವಂಗಿ ಧರಿಸಿರುತ್ತಾನೆ. ಒಂದು ವೇಳೆ ಆ ಸಂದರ್ಭದಲ್ಲಿ ಕಂಬಳಿಯ ನಿಲುವಂಗಿಯನ್ನು ತಂದಿರದಿದ್ದರೆ, ಆಮೇಲೆ ತನಗೆ ಅನುಕೂಲ ವಾದಾಗ ಧರಿಸಬಹುದು. (ಈಗ ಮೈಲಾರ ಕ್ಷೇತ್ರದಲ್ಲಿ ಸಿದ್ಧ ಉಡುಗೆಗಳೇ ಸಿಗುವುದರಿಂದ ಸಾಮಾನ್ಯವಾಗಿ ಎಲ್ಲರೂ ಧರಿಸಿಯೇ ಇರುತ್ತಾರೆ) ಅವನ ಜೊತೆಗೆ ಗಂಟೆ, ಜೋಳಿಗೆ, ಭಂಡಾರದ ಬಕ್ಸ, ಬೆತ್ತ, ದೋಣಿ, ಡಮರು, ಶೂಲ ಮೊದಲಾದ ವಸ್ತುಗಳನ್ನು ಇಟ್ಟು ಪೂಜೆ ಮಾಡಿ ನಂತರ ಧರಿಸಲು ತಿಳಿಸುತ್ತಾರೆ. ಈ ರೀತಿ ದೇವರಿಗೆ ಸಂಬಂಧಿಸಿದ ವಸ್ತುಗಳನ್ನು ಮುದ್ರಿ ಎನ್ನುವರು.  ಮುಂಡಾಸ ಇದ್ದರೆ ಅದನ್ನು ಧರಿಸುತ್ತಾರೆ. ನಂತರ ಒಡೆಯರು ಎರಡು ಕವಡೆ[12]ಗಳನ್ನು ದಾರದಲ್ಲಿ ಪೋಣಿಸಿ ಅವನ ಕೊರಳಿಗೆ ಕಟ್ಟುತ್ತಾರೆ.

ಒಂದು ವೇಳೆ ಈ ವಸ್ತುಗಳು ಇಲ್ಲದಿದ್ದರೆ, ಆ ಸಂದರ್ಭದಲ್ಲಿ ಬೇರೆಯವರ ವಸ್ತುಗಳನ್ನು ಧರಿಸಿ ದೀಕ್ಷೆ ಪಡೆಯಬಹುದು. ನಂತರ ಅನುಕೂಲವಾದಾಗ ಹೊಸದನ್ನು ಪಡೆದುಕೊಳ್ಳಬಹುದು. ಆದರೆ ಕಂಬಳಿಯ ನಿಲುವಂಗಿ ಹಾಗೂ ಮುಂಡಾಸುಗಳನ್ನು ಮಾತ್ರ ಈ ರೀತಿ ಬೇರೆಯವರಿಂದ ಪಡೆಯಬಾರದು.

ಈ ರೀತಿ ಸಿದ್ಧನಾಗಿ ಕುಳಿತ ದೀಕ್ಷೆಯ ಗೊರವನಿಗೆ ಒಡೆಯರು ಹಾಗೂ ಗೊರವ, ಗೊರವಿಯರು ಪ್ರತಿಜ್ಞೆ ಮಾಡುವಂತೆ ತಿಳಿಸುತ್ತಾರೆ. ಸುಳ್ಳಾಡದಿರುವುದು, ಬೇರೆಯವರು ಹಸಿವಾಗಿದೆ ಎಂದು ಹೇಳುವುದನ್ನು ಕೇಳದಿರುವುದು (ಅವರಿಗೆ ಊಟ ಹಾಕುವುದು), ನ್ಯಾಯದಿಂದ ನಡೆಯುವುದು, ಹೊಲದಲ್ಲಿ ಹಸು ಮೇಯುತ್ತಿದ್ದರೆ ಅದನ್ನು

ಓಡಿಸದಿರುವುದು, ಕರು ಹಾಲು ಕುಡಿಯುತ್ತಿದ್ದರೆ ಅದನ್ನು ಕೀಳದಿರುವುದು, ಸರ್ಪವನ್ನು ಸಾಯಿಸದಿರುವುದು, ರವಿವಾರ ಮತ್ತು ಗುರುವಾರಗಳಂದು ಉಪವಾಸವಿದ್ದು ದೇವರ ಸೇವೆ ಮಾಡುವುದು ಮೊದಲಾದವು ಈ ಪ್ರತಿಜ್ಞೆಯಲ್ಲಿ ಸೇರಿವೆ. ಕೊನೆಯಲ್ಲಿ ಮಡಿ ಅಥವಾ ಮೈಲಿಗೆ ಈ ಎರಡರಲ್ಲಿ ಒಂದನ್ನು ಆರಿಸಿಕೊಳ್ಳಲು ತಿಳಿಸಲಾಗುತ್ತದೆ.

ಮಡಿ ಮೀಸಲು ಬೇಡಿದವರು ಪ್ರತಿನಿತ್ಯ ಬೆಳಗ್ಗೆ ಹಾಗೂ ಸಂಜೆ ತಪ್ಪದೇ ಎರಡು ಹೊತ್ತು ಸ್ನಾನಮಾಡಬೇಕು. ಮೂರೂ ಹೊತ್ತು ಪೂಜೆಮಾಡಿಕೊಳ್ಳಬೇಕು. ಭಕ್ತರ ಮನೆಯಲ್ಲಿ ದೋಣಿ ತುಂಬುವ ಕಾರ್ಯಕ್ರಮವಿದ್ದಲ್ಲಿ ಸ್ನಾನಮಾಡಿ ಒದ್ದೆ ಬಟ್ಟೆಯನ್ನುಟ್ಟುಕೊಂಡು ತಾವೇ ಅಡಿಗೆ ಮಾಡಿ ದೇವರಿಗೆ ನೈವೇದ್ಯ ತೋರಿಸಬೇಕು. ಯಾರನ್ನೂ ಮುಟ್ಟಿಸಿಕೊಳ್ಳಬಾರದು. ಎಲೆ ಅಡಿಕೆ ಸೇವಿಸುವಾಗ ಬೇರೆಯವರಿಂದ ಸುಣ್ಣವನ್ನು ತೆಗೆದುಕೊಳ್ಳಬಾರದು. ಎಲ್ಲೆಂದರಲ್ಲಿ ನೀರು, ಆಹಾರ ಸೇವಿಸುವಂತಿಲ್ಲ. ಈ ರೀತಿ ಜೀವನ ಪರ್ಯಂತ ಆಚರಣೆ ನಡೆಸಬೇಕಾಗುತ್ತದೆ.

ಆದರೆ ಮೈಲಿಗೆ ಬೇಡಿದವರಿಗೆ ಈ ಕಟ್ಟುಪಾಡುಗಳಿರುವುದಿಲ್ಲ. ಸಾಧ್ಯವಿದ್ದಲ್ಲಿ ಅವರು ಎರಡು ಹೊತ್ತು ಸ್ನಾನ, ಮೂರು ಹೊತ್ತು ಪೂಜೆ ಮಾಡಿಕೊಳ್ಳಬಹುದು. ಇಲ್ಲವಾದರೆ ಒಂದೇ ಹೊತ್ತು ಸ್ನಾನ ಮಾಡಿದರೂ ನಡೆಯುವುದು. ನೀರು ಸಿಕ್ಕದಿರುವ ಊರುಗಳಲ್ಲಿ ದೋಣಿ, ಗಂಟೆ, ತ್ರಿಶೂಲಗಳನ್ನು ಪೂಜಿಸಲು ಒಂದು ತಂಬಿಗೆ ನೀರು ದೊರೆತರೂ ಸಾಕು. ದೋಣಿ ತುಂಬುವಾಗಲೂ ಅಷ್ಟೇ! ಮಡಿಯವರ ನಿಯಮಗಳನ್ನು ಪಾಲಿಸುವ ಅವಶ್ಯಕತೆಯಿರುವುದಿಲ್ಲ. ಆದರೆ ಭಾನುವಾರ ಹಾಗೂ ಗುರುವಾರಗಳಂದು ಮಾತ್ರ ಕನಿಷ್ಠ ಐದು ಮನೆಗಳ ಮುಂದೆ ನಿಂತು ಏಳು ಕೋಟಿ, ಏಳು ಕೋಟಿ ಎಂದು ಹೇಳುತ್ತ, ಡಮರು, ಗಂಟೆ ಬಾರಿಸಿ ಸೇವೆ ಸಲ್ಲಿಸುತ್ತ ಭಿಕ್ಷೆ ಬೇಡಬೇಕು. ಈ ಎಲ್ಲ ಆಚರಣೆಗಳ ಸಂದರ್ಭದಲ್ಲಿ ಹಾಗೂ ದೇವಸ್ಥಾನಕ್ಕೆ ಹೋಗುವ ಸಂದರ್ಭದಲ್ಲಿ ಕಾಲಿಗೆ ಚಪ್ಪಲಿ ಧರಿಸಕೂಡದು. ಅದೇ ರೀತಿ ಜಾತ್ರೆ, ಕಾರಣಿಕಕ್ಕೆ ಬರುವ ಸಂದರ್ಭದಲ್ಲಿಯೂ ಕಾಲಿಗೆ ಮೆಟ್ಟು ಹಾಕುವಂತಿಲ್ಲ. ಕೆಲವರು ದೀಕ್ಷೆಯ ಸಂದರ್ಭದಲ್ಲಿ ಹೊಲಮನೆಯ ಕೆಲಸಗಳಲ್ಲಿ ಚಪ್ಪಲಿ ಹಾಕಿಕೊಳ್ಳುತ್ತೇನೆ ಎಂದು ಹೇಳಿಕೊಂಡಿರುತ್ತಾರೆ. ಅವರು ಮಾತ್ರ ಮುದ್ರೆ ತೆಗೆದಿಟ್ಟು ಚಪ್ಪಲಿ ಧರಿಸಬಹುದು. ಇಲ್ಲದಿದ್ದರೆ ಜೀವನವಿಡೀ ಕಾಲಲ್ಲಿ ಚಪ್ಪಲಿ ಹಾಕದೇ ಬರಿಗಾಲಿನಿಂದ ಇರಬೇಕು.

ಕೆಲಬಾರಿ ಮೈಲಿಗೆ ಮುಸುರೆಯ ನಿಯಮವೂ ಇರುತ್ತದೆ. ಇದನ್ನು ಕೇಳಿದವನಾಗಿದ್ದರೆ ದೀಕ್ಷೆಯ ಸಂದರ್ಭದಲ್ಲಿ ಬೇರೆಯವರ ಎಡೆಯಿಂದ ಸ್ವಲ್ಪ ಆಹಾರವನ್ನು ತೆಗೆದುಕೊಂಡು ತಿನ್ನಬೇಕು. ಎಂದರೆ ಮುಂದೆ ತನ್ನ ಮನೆಯವರು, ಮಕ್ಕಳು ಅಥವಾ ಬೇರೆಯವರು ಮುಟ್ಟಿದ ಅಥವಾ ಎಂಜಲಾದ ಅಹಾರವನ್ನು ಪಡೆಯಬಹುದು. ನಂತರ ಬೇರೆಯವರ ಎಂಜಲು ಎಲೆಗಳನ್ನು ಎತ್ತಿ ತೆಗೆಯಬೇಕು. ಬೇರೆಯವರಿಂದ ಎಲೆ ಅಡಿಕೆಗೆ ಸುಣ್ಣವನ್ನು ತೆಗೆದುಕೊಂಡು ತಿನ್ನಬೇಕು. ಅಂದರೆ ಮುಂದೆ ತಮ್ಮ ಜೀವನದಲ್ಲಿ ಬೇರೆಯವರಿಂದ ಸುಣ್ಣವನ್ನು ಪಡೆಯಬಹುದು. ಈ ರೀತಿ ದೀಕ್ಷೆ ಪಡೆದ ವ್ಯಕ್ತಿ ಆ ದಿನ ಒಂದಾದರೂ ಬೇರೆಯವರ ಬಟ್ಟೆ ಒಗೆಯಬೇಕು. ಅಂದರೆ ಮುಂದೆ ಯಾವುದೇ ಸಂದರ್ಭದಲ್ಲಿ ಅವನು ಈ ಕಾರ್ಯ ಮಾಡಬಹುದು. ಒಂದು ವೇಳೆ ಆ ದಿನ ಈ ರೀತಿ ಮುಸುರೆಯ ಆಚರಣೆ ಮಾಡದಿದ್ದಲ್ಲಿ ಮುಂದೆ ಜೀವನ ಪರ್ಯಂತ ಅವರು ಆಯಾ ವಿಷಯಕ್ಕೆ ಸಂಬಂಧಿಸಿದಂತೆ ಸಂಪೂರ್ಣ ಮಡಿಯನ್ನು ಆಚರಿಸುತ್ತಿರಬೇಕು.

ಆದರೆ ಈಗೀಗ ಕೇವಲ ತಮ್ಮ ಮನೆತನದ ಸಂಪ್ರದಾಯವನ್ನು ಮುಂದುವರಿಸುವ ದೃಷ್ಟಿಯಿಂದ ಹೊರೆ ಹೊರುವ ಸಂಪ್ರದಾಯವನ್ನು ಪಾಲಿಸುವರೇ ವಿನಃ ನಿಷ್ಠೆಯಿಂದ ಪಾಲಿಸುವ ಉದ್ದೇಶ ಹೊಂದಿದವರು ವಿರಳ ಎನ್ನಬಹುದು. ಮೈಲಾರ ದೇವರ ಸೇವೆಗೆ ಸಂಬಂಧಿಸಿದಂತೆ ಅನೇಕ ವೈವಿಧ್ಯಗಳಿವೆ. ಇದಕ್ಕೆ ತಕ್ಕಂತೆ ಹೊರೆಗಳೂ ಸಹ ವಿಭಿನ್ನವಾಗಿವೆ. ಆದರೆ ಕಾಲಾಂತರದಲ್ಲಿ ಎಷ್ಟೋ ರೀತಿಯ ಹೊರೆಯ ಸಂಪ್ರದಾಯಗಳು ಮಾಯವಾಗಿವೆ. ಬದಲಾಗುತ್ತಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ಜನರ ವಿಶ್ವಾಸಗಳೂ ಬದಲಾಗುತ್ತಿವೆ. ಎಷ್ಟೋ ಜನರಿಗೆ ತಮ್ಮ ಮನೆತನದ ಸಂಪ್ರದಾಯದಲ್ಲಿ ಹೊರೆಯ ಕ್ರಮ ಎರುವುದು ಗೊತ್ತಿದ್ದರೂ ಆಚರಣೆಯ ರೂಪ ಮರೆತೇ ಹೋಗಿದೆ. ಈಗಿನ ಗುರುಗಳಾದ ಶ್ರೀವೆಂಕಪ್ಪಯ್ಯ ಒಡೆಯರು – "ಹೊರೆಗಳಲ್ಲಿ ಎಷ್ಟು ಪ್ರಕಾರಗಳಿವೆ ಎಂಬುದು ನಮಗೇ ಮರೆತುಹೋಗಿದೆ. ಕೆಲವೊಮ್ಮೆ ಎಲ್ಲಿಂದಲೋ ಭಕ್ತರು ಬರುತ್ತಾರೆ. ಅವರನ್ನು ಈ ಮುಂಚೆ ನೋಡಿದ ನೆನಪೂ ಇರುವುದಿಲ್ಲ. ಅವರು ಬಂದು – ಸ್ವಾಮೀ, ನಮ್ಮ ಮನೆತನದಲ್ಲಿ ಇಂತಹುದೊಂದು ಸೇವೆಯಿದೆ. ಈಗ ಅದನ್ನು ಹೊರಿಸಿ ನಮಗೆ ದೀಕ್ಷೆ ನೀಡಿ ಎಂದು ಕೇಳುವುದಿದೆ, ನಾವು ಅವರು ಹೇಳಿದ ದೀಕ್ಷೆಯನ್ನು ನೀಡಿ ಕಳುಹಿಸುತ್ತೇವೆ" ಎಂದು ಹೇಳುತ್ತಾರೆ.

(ನನ್ನ ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಚಾಮರಾಜನಗರದ ಒಂದು ಕುಟುಂಬ ಹೊರೆ ಹೊರುವ ಕಾರ್ಯಕ್ರಮ ನೆರವೇರಿಸಲು ಬಂದಿತ್ತು. ಆ ಸಂದರ್ಭದಲ್ಲಿ ಶ್ರೀ ತಮ್ಮಣ್ಣ ಒಡೆಯರು ಅವರೆಲ್ಲರ ಪರಿಚಯ ಮಾಡಿಸಿ, ದೀಕ್ಷೆಯ ಪ್ರತಿಯೊಂದು ಹಂತವನ್ನು ವಿವರಿಸುತ್ತ ದೀಕ್ಷೆ ನೀಡಿದರು.)

ಹೊರೆ ಹೊತ್ತ ಗೊರವ, ಗೊರವಿಯರು ಮುಂದೆ ಜೀವನ ಪರ್ಯಂತ ಸಾಕಷ್ಟು ನಿಯಮಾವಳಿಗಳನ್ನು ಪಾಲಿಸಬೇಕಾಗುತ್ತದೆ. ಅವರು ಯಾವಾಗಲೂ ದೇವರ ಸೇವೆಗೆ ಸಮಯವನ್ನು ಮೀಸಲಾಗಿರಿಸಬೇಕು. ಮುದ್ರೆಯ ವಸ್ತುಗಳಾದ ಕಂಬಳಿಯ ನಿಲುವಂಗಿ, ಕವಡೆಗಳು, ಮುಂಡಾಸ, ಜೋಳಿಗೆ, ದೋಣಿ, ಭಂಡಾರ ಬಕ್ಸ, ಗಂಟೆ ಮೊದಲಾದ ಸಲಕರಣೆಗಳು ಹಾಗೂ ಕೈನಲ್ಲಿ ಶೂಲ ಅಥವಾ ತ್ರಿಶೂಲ, ನಾಗಬೆತ್ತ, ಡಮರು ಮೊದಲಾದವನ್ನು ಅವರು ಧರಿಸಬೇಕಾಗುತ್ತದೆ. (ಚಿತ್ರ – ೨೩) ಕೆಲ ಪ್ರದೇಶಗಳಲ್ಲಿ ಕೊರಳಲ್ಲಿ ಒಂದೆರಡು ಕವಡೆಗಳನ್ನು ಮಾತ್ರ ಧರಿಸಿದರೆ ಇನ್ನು ಕೆಲವರು ಕವಡೆಯ ದೊಡ್ಡ ಸರಗಳನ್ನೇ ಧರಿಸುತ್ತಾರೆ. ಕರಡಿಗೊರವರಲ್ಲಿ ಇದು ಸಾಮಾನ್ಯ. ಇವರ ಬಳಿ ಮುಂಡಾಸದ ಬದಲು ಕರಡಿಯ ಕೂದಲು ಸಹಿತವಾದ ಚರ್ಮದ ಟೊಪ್ಪಿಗೆ ಇರುತ್ತದೆ. ಇತರೆ ವಸ್ತುಗಳ ಜೊತೆಗೆ ಕೈಯಲ್ಲಿ ಬಿದಿರಿನ ಕೊಳಲು ಅಥವಾ ಪಿಳ್ಳಂಗೋವಿ ಇರುತ್ತದೆ.

ಗೊರವರಲ್ಲಿ ಹೆಚ್ಚಿನವರು ಹಣೆಗೆ ಭಂಡಾರ ಹಚ್ಚಿಕೊಂಡಿರುತ್ತಾರೆ. ಕೆಲವೊಮ್ಮೆ ಅದನ್ನು ಗಂಧದೊಡನೆ ಬೆರಸಿ ನೀರಿನಲ್ಲಿ ಕಲಸಿ ಅಡ್ಡವಾಗಿ ಪಟ್ಟಿಯಂತೆ ಹಚ್ಚಿಕೊಳ್ಳುತ್ತಾರೆ.

**ದೋಣಿ** : ಪ್ರತಿಯೊಬ್ಬ ಗೊರವನಲ್ಲಿ ಇರಬೇಕಾದ ವಸ್ತು. ಇದನ್ನು ಕಟ್ಟಿಗೆ, ಹಿತ್ತಾಳೆ ಅಥವಾ ಕಂಚಿನಿಂದ ಮಾಡಿರುತ್ತಾರೆ. ಉಳ್ಳವರು ಚಿನ್ನ, ಬೆಳ್ಳಿಯ ದೋಣಿ ಮಾಡಿಸಿಕೊಳ್ಳುವುದೂ ಉಂಟು. ಕೆಲ ದೇವಾಲಯಗಳ ಬಳಿ ಕಲ್ಲಿನ ದೋಣಿಗಳನ್ನು ಸಹ ಕಾಣಬಹುದು.

ಈ ದೋಣಿಗಳು ಗಾತ್ರದಲ್ಲಿ ಒಂದೇ ಬಗೆಯಾಗಿರುವುದಿಲ್ಲ. ಸಾಮಾನ್ಯವಾಗಿ ಒಬ್ಬರು ಊಟ ಮಾಡಲು ಅನುಕೂಲಕರವಾಗಿರುವ ಗಾತ್ರಕ್ಕೆ ಇರುತ್ತವೆ. ಇದನ್ನು ಪರಿಶೀ ಬಟ್ಟಲು ಎಂದೂ ಸಹ ಕರೆಯುತ್ತಾರೆ. ಪರಶೀ ಎಂದರೆ ಶುದ್ಧವಾದ ಎಂದರ್ಥ. ಇದು ಅಷ್ಟೊಂದು ಪರಿಶುದ್ಧವಾದುದು ಎಂದು ಗೊರವರ ಅಭಿಪ್ರಾಯ. ಇದರಲ್ಲಿ ವಿಷವಿಕ್ಕಿದರೂ ಅದು

ಅಮೃತವಾಗುತ್ತದೆ ಎಂದು ಭಕ್ತರು, ಗೊರವರು ನಂಬುತ್ತಾರೆ. ಇದರಲ್ಲಿ ನೀಡಿದ ಆಹಾರ ಪದಾರ್ಥಗಳನ್ನು ಗೊರವರು ಉಣ್ಣಲೇ ಬೇಕು. ಆಹಾರ ಹೆಚ್ಚಾಯಿತೆಂದು ಅದನ್ನು ಬಿಡುವಂತಿಲ್ಲ ಅಥವಾ ಚೆಲ್ಲುವಂತಿಲ್ಲ. ಗೊರವರು ದೋಣಿ ತುಂಬಿಸಿದ ಭಕ್ತರಿಗೆ ಅದರಲ್ಲಿನ ಸ್ವಲ್ಪ ಭಾಗವನ್ನು ಪ್ರಸಾದದ ರೂಪದಲ್ಲಿ ಕೊಡುವರು.

ಡಾ|| ಎಂ. ಬಿ. ನೇಗಿನಹಾಳರು ಹೇಳುವಂತೆ – "ಕೆಲವರ ಅಭಿಪ್ರಾಯದಲ್ಲಿ ಈ ದೋಣಿ ಮಲ್ಲಾಸುರನ ಶಿರ. ಮಲ್ಲಾಸುರನನ್ನು ವಧಿಸಿದ ನಂತರ ದೇವರು ಅವನ ಶಿರಸ್ಸನ್ನು ದೋಣಿಯ ರೀತಿ ಬಳಸಿದನಂತೆ". (ಇದೇ ಕಲ್ಪನೆ ಬ್ರಹ್ಮನ ಐದನೆಯ ತಲೆಯನ್ನು ಕತ್ತರಿಸಿದ ಶಿವನನ್ನು ಕುರಿತು ಸಹ ಬರುತ್ತದೆ. ಅದನ್ನು ಬ್ರಹ್ಮ ಕಪಾಲವೆಂದೇ ಕರೆಯುವುದು ವಾಡಿಕೆ.) ದೋಣಿಯ ಹುಟ್ಟಿಗೆ ಕಾರಣವಾದ ಇನ್ನೊಂದು ಕಥೆ ಸಾಮಾನ್ಯವಾಗಿ ಪ್ರಚಲಿತ ದಲ್ಲಿದೆ. ಎಲ್ಲಕ್ಕೂ ಮುಂಚೆ ಈ ದೋಣಿಯನ್ನು ಸಿದ್ಧಪಡಿಸಿ ಕೊಟ್ಟವಳು ನರಗುಂದದ ಸಮೀಪದ ಬನ್ನೂರಿನ ರಡ್ಡೇರ ನೀಲವ್ವ ಎಂಬ ಶ್ರೀಮಂತ ಗೃಹಿಣಿಯಂತೆ. ಈ ಐತಿಹ್ಯ ಪ್ರಬಲವಾಗಿದ್ದರೂ ಖಚಿತವಾದ ಬನ್ನೂರು ಯಾವುದೆಂದು ಯಾರಿಗೂ ಗೊತ್ತಿಲ್ಲ.[13]

ಇನ್ನೊಂದು ಐತಿಹ್ಯದ ಪ್ರಕಾರ ಮಲ್ಲಯ್ಯ ಕುರುಬರ ಮಾಳವ್ವನಿಗಾಗಿ ಕುರಿಯ ದೊಡ್ಡಿಯಲ್ಲಿ ಆಳಾಗಿ ದುಡಿದ. ಆಗ ನಾಯಿಗಳು ತಿನ್ನುತ್ತಿದ್ದ ದೋಣಿಯಲ್ಲಿಯೇ ಅವನು ಊಟ ಮಾಡಿದ ಆ ಕಾರಣಕ್ಕಾಗಿ ಗೊರವರೂ ಅದರಲ್ಲಿ ಊಟ ಮಾಡುತ್ತಾರೆ ಎಂಬ ನಂಬಿಕೆಯೂ ಪ್ರಚಲಿತದಲ್ಲಿದೆ.

**ಭಂಡಾರ ಬಕ್ಸ :** ಭಂಡಾರವನ್ನು ಇಡುವ ಚೀಲವನ್ನು ಭಂಡಾರದ ಬಕ್ಸ ಎನ್ನುವರು. ಮೊದಲು ಇದನ್ನು ಹುಲಿಯ ಚರ್ಮದಿಂದಲೇ ಮಾಡುವುದು ಅನಿವಾರ್ಯವಾಗಿತ್ತು. ಆದರೆ ಈಗ ಹುಲಿಯ ಚರ್ಮದ ದುರ್ಲಭತೆಯಿಂದಾಗಿ ಜಿಂಕೆಯ ಚರ್ಮದಿಂದ ಮಾಡುವುದು ಕಂಡುಬರುತ್ತದೆ.

**ಜೋಳಿಗೆ :** ಗೊರವ, ಗೊರವಿಯರು ಕನಿಷ್ಠ ಐದಾರು ಮನೆಗಳಲ್ಲಿಯಾದರೂ ಭಿಕ್ಷೆಬೇಡುವುದು ಅನಿವಾರ್ಯ. ಆ ಭಿಕ್ಷೆಯನ್ನು ಅವರು ಜೋಳಿಗೆಗಳಲ್ಲಿ ಹಾಕಿಸಿಕೊಳ್ಳು ತ್ತಾರೆ. ಇದು ವೃತ್ತಿಗಾಗಿ ಅಲ್ಲವಾದರೂ ಸೇವೆಗಾಗಿ ಇರುವ ಜೋಳಿಗೆಯಾಗಿರುತ್ತದೆ.

ಇಲ್ಲಿ ಹೇಳಿದ ವಸ್ತುಗಳಲ್ಲದೇ ಗೊರವರು ಡಮರು, ಗಂಟೆ, ತ್ರಿಶೂಲ ಮೊದಲಾದ ವಸ್ತುಗಳನ್ನು ಹೊಂದಿರುತ್ತಾರೆ.

## ೫.೪ ಗೊರವಿಯರು

ಗೊರವ ಸಂಪ್ರದಾಯದಂತೆಯೇ ಗೊರವಿಯರಾಗುವ ಸಂಪ್ರದಾಯವೂ ಮೈಲಾರದಲ್ಲಿದೆ. ಮಹಾರಾಷ್ಟ್ರದಲ್ಲಿ ಇವರನ್ನು ಮುರಳಿಯರು ಎಂದು ಕರೆಯುತ್ತಾರೆ. ಗೊರವರಂತೆಯೇ ಇವರೂ ಕೂಡ ಕ್ರಮಬದ್ಧ ದೀಕ್ಷೆಗೆ ಒಳಪಟ್ಟು ದೇವರ ಸೇವೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳುತ್ತಾರೆ. ವೇಷ ಭೂಷಣಗಳಲ್ಲಿ ಗೊರವನಿಗೂ ಹಾಗೂ ಗೊರವಿಗೂ ವಿಶೇಷ ವ್ಯತ್ಯಾಸಗಳೇನೂ ಕಂಡು ಬರುವುದಿಲ್ಲ. ಗೊರವರು ತಲೆಗೆ ಹೆಚ್ಚಾಗಿ ಮುಂಡಾಸು ಧರಿಸುತ್ತಾರೆ. (ಕರಡಿ ಗೊರವರು ಕರಡಿಯ ಕೂದಲಿನಿಂದ ಕೂಡಿದ ಟೊಪ್ಪಿಗೆಯನ್ನು ಧರಿಸುತ್ತಾರೆ.) ಆದರೆ ಗೊರವಿಯರಲ್ಲಿ ಹೆಚ್ಚಿನವರು ಕಂಬಳಿಯ ಕುಲಾವಿ ಧರಿಸುತ್ತಾರೆ. ಉಳಿದಂತೆ ಇತರ ಗೊರವರ ಸಲಕರಣೆಗಳನ್ನು ಇವರು ಹೊಂದಿರುತ್ತಾರೆ. ಆದರೆ ಚವುರದ ಹಾಗೂ ಎಲಿ ಚೆಂಚಿ ಗೊರವಿಯರು ಸಾಮನ್ಯ ಸ್ತ್ರೀಯರಂತೆ ಇದ್ದು ಹಸಿರು ಸೀರೆ, ಹಸಿರು ರವಿಕೆ ಹಾಗೂ ಹಸಿರು ಬಳೆಗಳನ್ನು ಧರಿಸಿ ತಮ್ಮ ಸೇವೆಯ ಮುಖ್ಯ ಸಲಕರಣೆಗಳಾದ ಎಲಿ ಚೆಂಚಿ (ಚೀಲ) ಹಾಗೂ ಚವುರಗಳನ್ನು ಹಿಡಿದಿರುತ್ತಾರೆ. ಬಗಲಲ್ಲಿ ಯಾವಾಗಲೂ ಜೋಳಿಗೆ ಇದ್ದೇ ಇರುತ್ತದೆ. (ಚಿತ್ರ – ೨೪)

### ಗೊರವಿಯರ ದೀಕ್ಷೆ

ಸಾಮಾನ್ಯವಾಗಿ ಗೊರವರಿಗೆ ನೀಡುವ ದೀಕ್ಷೆಯಂತೆಯೇ ಗೊರವಿಯರಿಗೂ ದೀಕ್ಷೆ ನೀಡಲಾಗುತ್ತದೆ. ಗೊರವರು ದೀಕ್ಷೆಯ ನಂತರದಲ್ಲಿ ತಮ್ಮ ಸಲಕರಣೆಗಳೊಂದಿಗೆ ಸೇವೆಯನ್ನು ಆರಂಭಿಸುವಂತೆ ಗೊರವಿಯರೂ ಸಹ ದೀಕ್ಷೆಯ ನಂತರದಲ್ಲಿ ಚಾಮರ ಬೀಸಿ ಅಥವಾ ದೇವರಿಗೆ ವೀಳಯವನ್ನು ಸಲ್ಲಿಸಿದ ನಂತರ ತಮ್ಮ ಸೇವೆಯನ್ನು ಆರಂಭಿಸುವರು. ಇವರಿಗೆ ದೀಕ್ಷೆ ಕೊಡುವ ಸಂದರ್ಭದಲ್ಲಿ ಚಾಮರ ಹೂವಿನಿಂದ ಮಾಡಿದುದಾಗಿರುತ್ತದೆ. ನಂತರದಲ್ಲಿ ತಮ್ಮ ಮನೆತನದಲ್ಲಿ ಬಂದಿರುವ, ಹಳೆಯ ಚವರಿಯನ್ನೇ ಬಳಸುವರು. ಒಂದು ವೇಳೆ ಹೊಸದಾಗಿ ದೀಕ್ಷೆ ಪಡೆದ ಮನೆತನದವರಾಗಿದ್ದರೆ, ಬೇರೆ ಇನ್ನೊಂದು ಚವರವನ್ನು ಹೊಸದಾಗಿ ಮಾಡಿಸಿಕೊಳ್ಳುತ್ತಾರೆ.

ಪೂಜೆಯ ಸಂದರ್ಭದಲ್ಲಿ ಇತರ ಪ್ರತೀಕಗಳೊಂದಿಗೆ ಚವುರಗಳನ್ನು ಸಹ ಇಟ್ಟು ಪೂಜೆ ಸಲ್ಲಿಸುವರು.

ಕೆಲವೊಮ್ಮೆ ಚಾಮರ ಹೊತ್ತ ಗೊರವಿಯರು ಮುಳ್ಳಾವಿಗೆ[14] ಮೇಲೆ ನಿಂತು ಸೇವೆ ಸಲ್ಲಿಸುವುದಾಗಿ ಹರಕೆ ಹೊತ್ತಿದ್ದರೆ ಅಂತವರು ಒಂದು ಜೊತೆ ಮುಳ್ಳಿನ ಆವುಗೆ (ಪಾದುಕೆ)ಯನ್ನು ತಮ್ಮ ಜೊತೆಯಲ್ಲಿ ಇಟ್ಟುಕೊಂಡಿರುತ್ತಾರೆ. ಜಾತ್ರೆಯ ಸಂದರ್ಭದಲ್ಲಿ ದೇವರ ಪಕ್ಕದಲ್ಲಿ ಇವನ್ನು ಇಟ್ಟು ಅವುಗಳ ಮೇಲೆ ನಿಂತು ಚವುರ ಬೀಸಿ ತಮ್ಮ ಸೇವೆ ಪೂರೈಸುವರು. ಮುಂದೆ ಹೊರಗೆ ಹೋದಾಗಲೂ ಸಹ ಮುದ್ರೆಯೊಡನೆ ಮುಳ್ಳಾವಿಗೆಯನ್ನು ಸಹ ತಮ್ಮೊಡನೆ ಹೊತ್ತೊಯ್ಯುತ್ತಾರೆ.

ಎಲಿಚೆಂಚಿ ಗೊರವಿಯರು ಹಬ್ಬ ಉತ್ಸವಾದ ಸಂದರ್ಭಗಳಲ್ಲಿ ದೇವರಿಗೆ ವೀಳ್ಯ (ಎಲೆ-ಅಡಿಕೆ) ಅರ್ಪಿಸುವ ಸೇವೆ ನಡೆಸುವರು.[15] ದೇವರು ಪಲ್ಲಕ್ಕಿಯಲ್ಲಿ ಕುಳಿತು ದೇವಸ್ಥಾನಕ್ಕೆ ಹೋಗುವಾಗ ಅದರ ಜೊತೆಗೆ ಚಾಮರ ಬೀಸುತ್ತ ಇವರೂ ಹೋಗುತ್ತಾರೆ. ನಡು ನಡುವೆ ಕೊಬ್ಬರಿ, ಪತ್ರಿ, ಜಾಜಿಕಾಯಿ ಮೊದಲಾದವುಗಳೊಡನೆ ಸೇರಿಸಿದ ಎಲೆ ಅಡಿಕೆಗಳನ್ನು (ವೀಳ್ಯವನ್ನು) ದೇವರ ಪಲ್ಲಕ್ಕಿಯಲ್ಲಿಟ್ಟು ದೇವರಿಗೆ ಅರ್ಪಿಸುವರು.

ಕೆಲವು ಸಂದರ್ಭಗಳಲ್ಲಿ ದೇವರು ಗಂಗಿಮಾಳಮ್ಮನ ಶಯ್ಯಾ ಮಂಚ ಪ್ರವೇಶಿಸಿ ರಾತ್ರಿಯನ್ನು ಅಲ್ಲಿಯೇ ಕಳೆಯುತ್ತಾನೆ. ಆಗ ಎಲೆ ಚೆಂಚಿ ಗೊರವಿಯರು ಬೀಡಾಗಳಂತೆ ಎಲೆ, ಅಡಿಕೆ, ಪತ್ರಿ, ಜಾಜಿಕಾಯಿ, ಸುಣ್ಣ, ಕೊಬ್ಬರಿಗಳನ್ನು ಸೇರಿಸಿ ಸುರುಳಿ ಮಾಡಿ ತಟ್ಟೆಯಲ್ಲಿ ಇಟ್ಟು ಅಲಂಕರಿಸುತ್ತಾರೆ. ನಂತರ ಅವುಗಳ ಮೇಲೆ ಸ್ವಲ್ಪ ಸುಣ್ಣದ ನೀರನ್ನು ಚಿಮುಕಿಸುತ್ತಾರೆ. ಮರುದಿನ ಬೆಳಗ್ಗೆ ಬಂದು ನೋಡಿದಾಗ ಬೀಡಾಗಳು ಎಂಜಲಾಗಿರುತ್ತವೆ ಎಂದು ಹೇಳುತ್ತಾರೆ. ನಂತರ ಗೊರವಿಯರು ಉಳಿದ ಬೀಡಾಗಳನ್ನು ಪ್ರಸಾದವೆಂಬಂತೆ ಸ್ವೀಕರಿಸುವರು.

ಹೊರೆ ಹೊತ್ತ ಗೊರವಿಯರು ಸಾಮಾನ್ಯವಾಗಿ ಗೃಹಿಣಿಯರಾಗಿರುತ್ತಾರೆ. ಗಂಡಂದಿರು ತೀರಿಕೊಂಡರೆ ಇವರು ಮತ್ತೆ ಮದುವೆಯಾಗುವುದಿಲ್ಲ. ಅಲ್ಲಿಂದ ಮುಂದೆ ಮೈಲಾರಲಿಂಗಪ್ಪನೇ ತಮ್ಮ ಗಂಡನೆಂದು ತಿಳಿದು ಸೇವೆ ಸಲ್ಲಿಸುವರು. ಕೆಲವರು ತಮ್ಮ ಮೊದಲಿನ ತಾಳಿ ತೆಗೆದು ಶಿಬಾರದಾಳಿ ಕಟ್ಟಿಕೊಳ್ಳುವುದೂ ಉಂಟು.

## ೫.೫ ಶಿಬಾರದಾಳಿಯರು

ಇವರು ಗೊರವಮ್ಮ ಅಥವಾ ಗೊರವಿಯರಿಗಿಂತ ಪ್ರತ್ಯೇಕವಾಗಿದ್ದರೂ ಜನ ಇವರನ್ನು ಗೊರವಿಯರೆಂದೇ ಕರೆಯುತ್ತಾರೆ. ಇವರು ಹೆಚ್ಚಾಗಿ ಜನರ ಕಣ್ಣಿಗೆ ಕಾಣುವುದಿಲ್ಲವಾದ್ದರಿಂದ ಇವರಿಗೂ–ಗೊರವಿಯರಿಗೂ ಇರುವ ವ್ಯತ್ಯಾಸ ಗಮನಕ್ಕೆ ಬರುವುದಿಲ್ಲ. ಸಾಮಾನ್ಯ ಅರ್ಥದಲ್ಲಿ ಇವರನ್ನು ದೇವದಾಸಿಯರೆಂದೂ ಕರೆಯುವರು.

ಶಿಬಾರದಾಳಿ (ಶಿಬಾರದ ಆಕಾರದ ತಾಳಿ)ಯನ್ನು ಕಟ್ಟಿಕೊಳ್ಳಲು ಹಿಂದೆ ಹೇಳಿದಂತೆ ಗೃಹಿಣಿಯರಾಗಿದ್ದ ಗೊರವಿಯರು ಗಂಡನ ಮರಣದ ನಂತರ ಉಡಿಕೆ (ಮರು ಮದುವೆ) ಮಾಡಿಕೊಳ್ಳದೆ ಮೈಲಾರಲಿಂಗನನ್ನೇ ತಮ್ಮ ಗಂಡನೆಂದು ಭಾವಿಸಿ ಸೇವೆ ಮಾಡುತ್ತ ಶಿಬಾರದಾಳಿ ಕಟ್ಟಿಕೊಳ್ಳಬಹುದು. ಕೆಲಬಾರಿ ಮನೆತನದ ಪರಂಪರೆಯಿಂದ ಬಂದ ಚವುರಿ ಅಥವಾ ಎಲಿ ಚೆಂಚಿ ಹೊರೆಯನ್ನು ಮುಂದುವರಿಸಲು ಹೊರೆ ಹೊತ್ತಂತೆಯೇ ಶಿಬಾರದಾಳಿಯನ್ನು ಪರಂಪರೆ ಎಂದೇ ಭಾವಿಸುತ್ತಾರೆ. ಅಂಥವರು ದೇವರ ಹೆಸರಿನಲ್ಲಿ ಉಳಿದು ತಮ್ಮಲ್ಲಿ ನಡೆದು ಬಂದಿರುವ ಸೇವೆಯನ್ನು ಮಾಡಿಕೊಂಡಿರುತ್ತಾರೆ. ಬಹುಶಃ ಇದೇ ಕಾರಣದಿಂದಾಗಿಯೇ ಜನಸಾಮಾನ್ಯರು ಇವರನ್ನು ದೇವದಾಸಿಯರೆಂದು ಗುರುತಿಸುವರು. ಕೆಲಬಾರಿ ಹರಕೆಯ ರೂಪದಲ್ಲಿರೂ ಶಿಬಾರದಾಳಿ ಕಟ್ಟಿಕೊಳ್ಳುವ ಸಂಪ್ರದಾಯವೂ ಇದೆ. ಮಕ್ಕಳಾಗದವರು ಮಕ್ಕಳಾದರೆ, ರೋಗದಿಂದ ನರಳುವವರು ರೋಗದಿಂದ ಮುಕ್ತರಾದರೆ ಈ ರೀತಿಯ ಹರಕೆ ಹೊರುವುದುಂಟು. ಇನ್ನೂ ಕೆಲವೊಮ್ಮೆ ಬಡತನ, ಅನಾಥ ಪ್ರಜ್ಞೆ ಅಥವಾ ದೈಹಿಕ ಕುರೂಪಗಳಿಂದಾಗಿ ಮದುವೆಯಾಗದ ಸ್ತ್ರೀಯರು ಶಿಬಾರದಾಳಿಯರಾಗಿ ಸೇವೆ ಸಲ್ಲಿಸಲು ಮುಂದಾಗುತ್ತಾರೆ.

### ದೀಕ್ಷೆ

ಇತರ ಗೊರವ ಅಥವಾ ಗೊರವಿಯರಿಗಿರುವಂತೆ ಇವರಿಗೂ ಸಹ ದೀಕ್ಷೆ ಇರುತ್ತದೆ. ಸಾಮಾನ್ಯ ಪದ್ಧತಿಯಂತೆ ಮನೆಯನ್ನು ಸಾರಿಸಿ ಮಡಿ ಮಾಡಿ, ಹಸಿರು ಸೀರೆ, ಕುಪ್ಪಸ, ಹಸಿರು ಬಳೆಗಳನ್ನು ಧರಿಸಿಕೊಂಡು ಕೈಗೆ ಕಂಕಣ ಕಟ್ಟಿಕೊಂಡು ದೀಕ್ಷೆ ಹೊಂದಲು ದೇವಾಲಯಕ್ಕೆ ಬರುತ್ತಾರೆ. ಇಲ್ಲಿ ಒಡೆಯರು ಇವರಿಗೆ ಇತರ ಗೊರವರಿಗೆ ನೀಡುವಂತೆಯೇ

ದೀಕ್ಷಾ ಕಾರ್ಯಗಳನ್ನು ಪೂರೈಸುತ್ತಾರೆ. ನಂತರ ಒಡೆಯರೇ ಇವರಿಗೆ ಶಿಬಾರದ ಆಕಾರದ ತಾಳಿಯನ್ನು ಕಟ್ಟುತ್ತಾರೆ. ಸಾಮಾನ್ಯವಾಗಿ ಎಲ್ಲಮ್ಮನ ಜೋಗತಿಯರು, ದೇವದಾಸಿಯರು ಪಾದುಕೆಯ ಆಕಾರದ ತಾಳಿಯನ್ನು ಧರಿಸುತ್ತಾರೆ. ಅದರಂತೆಯೇ ಶಿಬಾರದಾಳಿಗಳು, ಶಿಬಾರದ ಆಕಾರದ ತಾಳಿಯನ್ನು ಧರಿಸುತ್ತಾರೆ. ಬಹುಶಃ ಈ ಸಂಪ್ರದಾಯ ಜೋಗತಿ ಸಂಪ್ರದಾಯದ ಭಾಗವಾಗಿರಬಹುದು. ಇದೇ ಕಾರಣದಿಂದ ಜನಸಾಮಾನ್ಯರು ಇವರನ್ನು ದೇವದಾಸಿಯರೆಂದು ಭಾವಿಸುವರು. ಇದಲ್ಲದೇ ಎಲ್ಲಮ್ಮ ಹಾಗೂ ಹುಲಿಗೆಮ್ಮನನ್ನು ಮೈಲಾರಲಿಂಗನ ತಂಗಿಯರೆಂದು ಭಾವಿಸುವುದುಂಟು. ಹೀಗಾಗಿ ಎಲ್ಲಮ್ಮ ಹಾಗೂ ಹುಲಿಗೆಮ್ಮನ ಸಂಪ್ರದಾಯಗಳು ಇಲ್ಲಿ ಕಂಡುಬರುವುದರಲ್ಲಿ ಆಶ್ಚರ್ಯವೇನೂ ಇಲ್ಲ.

ಶಿಬಾರದಾಳಿಯರು ಮೊದಲು ಶಿಬಾರದಾಳಿ ಧರಿಸಿದ್ದರೂ ನಂತರ ತಮಗೆ ಗಂಡು ದೊರೆತರೆ ಶಿಬಾರದಾಳಿಯನ್ನು ತೆಗೆದುಹಾಕಿ ಗೃಹಿಣಿಯರಾಗಿ ಜೀವನ ನಡೆಸುವುದೂ ಉಂಟು. ಆದರೆ ಈ ವ್ಯವಸ್ಥೆ ದೇವದಾಸಿಯರಲ್ಲಿ ಸಾಧ್ಯವಿಲ್ಲ. (ಆದರೆ ಈಗ ಸರ್ಕಾರದ ಸವಲತ್ತುಗಳಿಂದಾಗಿ ಈಗ ದೇವದಾಸಿಯರಿಗೂ ಮದುವೆ ಸಾಧ್ಯವಿದೆ) ಆದ್ದರಿಂದ ಶಿಬಾರದಾಳಿಯರನ್ನು ದೇವದಾಸಿಯರೆಂದು ಕರೆಯುವುದು ತಪ್ಪು ಭಾವನೆಯೇ ಹೊರತು ನಿಶ್ಚಿತ ಕಾರಣಗಳಿಂದಲ್ಲ. ಎಲ್ಲ ಜಾತಿ ಜನಾಂಗಗಳಲ್ಲಿ ಶಿಬಾರದಾಳಿ ಧರಿಸುವುದು ಕಂಡು ಬಂದರೂ ಬ್ರಾಹ್ಮಣರಲ್ಲಿ ಮಾತ್ರ ಕಂಡುಬರುವುದಿಲ್ಲ.

**ಗೊರವ ಗೊರವಿಯರ ಸೇವಾಕ್ರಮ :**

ಗೊರವ ಗೊರವಿಯರು ದೇವಸ್ಥಾನಕ್ಕೆ ಒಂದು ಕ್ರಮದಲ್ಲಿ ನಡೆದುಕೊಳ್ಳುತ್ತಾರೆ. ವರ್ಷದಲ್ಲಿ ಕನಿಷ್ಟ ಐದು ಹುಣ್ಣಿಮೆಗಳಿಗಾದರೂ ದೇವಸ್ಥಾನಗಳಿಗೆ ಹೋಗಿ ಬರುತ್ತಾರೆ. ಅಂತಹ ಸಂದರ್ಭಗಳಲ್ಲಿ ಜಾತ್ರೆ ಉತ್ಸವಾದಿಗಳು ನಡೆಯುತ್ತಿದ್ದರೆ ಆ ಕಾರ್ಯಕ್ರಮಗಳಲ್ಲಿ ತಮ್ಮನ್ನು ತಾವು ಸಂಪೂರ್ಣ ತೊಡಗಿಸಿಕೊಳ್ಳುತ್ತಾರೆ. ಭಕ್ತರು ಆಚರಣೆಗಳಿಗೆ ಕರೆದರೆ ಅದರಲ್ಲಿಯೂ ಭಾಗವಹಿಸುತ್ತಾರೆ. ವರ್ಷದ ಕೆಲವು ದಿನಗಳನ್ನಾದರೂ ದೇವಸ್ಥಾನದಲ್ಲಿ ಕಳೆದು ಬರುತ್ತಾರೆ. ಇದನ್ನು ಬಾಗಿಲು ಕಾಯುವುದು ಎಂದು ಕರೆಯುತ್ತಾರೆ. ಕಾರಣಿಕದ ಸಂದರ್ಭದಲ್ಲಿ ಒಬ್ಬೊಬ್ಬ ಗೊರವನೂ ಕಾಣಿಕೆಯ ರೂಪದಲ್ಲಿ ನೂರಾರು ರೂಪಾಯಿ ಸಂಪಾದಿಸುತ್ತಾರೆ. ದೇವಸ್ಥಾನಕ್ಕೆ ಹೋದಾಗ ಗೊರವರೂ ಸಹ ಒಡೆಯನ ಜಾಡಿಗೆ ತಮ್ಮ ಪಾಲಿನ ಕಾಣಿಕೆ ಸಲ್ಲಿಸಿ ಬರುತ್ತಾರೆ.

## ೫.೬ ಕಂಚಾವೀರರು

ಕಂಚಾವೀರರೂ ಮೈಲಾರನ ಭಕ್ತ ಪರಂಪರೆಯಲ್ಲಿ ಪ್ರಮುಖರಾದವರು. ಇವರನ್ನು ಕಂಚೀವೀರರು ಎಂದೂ ಸಹ ಕರೆಯುತ್ತಾರೆ. ಇವರೂ ಸಹ ಗೊರವರೇ ಆಗಿದ್ದರೂ ಗೊರವರು ಹಾಗೂ ಕಂಚಾವೀರರಲ್ಲಿ ಅನೇಕ ವ್ಯತ್ಯಾಸಗಳಿವೆ. ವೇಷಭೂಷಣಗಳಲ್ಲಿ ಮಾತ್ರವಲ್ಲ ಸೇವೆಯ ವಿಷಯದಲ್ಲಿಯೂ ಸಹ ಇವರು ಭಿನ್ನರಾಗಿ ಕಾಣುತ್ತಾರೆ. ಸಾತ್ವಿಕ ಆಚರಣೆಗಳನ್ನು ಗೊರವರು ಕೈಗೊಂಡರೆ ವೀರ ಪವಾಡಗಳಾದ ಸರಪಳಿ ಹರಿಯುವುದು, ಕಾಲಲ್ಲಿ ಬಗನಿ ಗೂಟ ಬಡಿದುಕೊಳ್ಳುವುದು, ಶಸ್ತ್ರ ಹಾಕಿಕೊಳ್ಳುವುದು ಮೊದಲಾದವನ್ನು ಇವರು ನೆರವೇರಿಸುತ್ತಾರೆ. ಈ ರೀತಿ ದೇಹದಂಡನಾ ವಿಧಿಗಳನ್ನು ದೇವರ ಪ್ರೀತಿಗಾಗಿ ನಡೆಸುವ ಭಕ್ತ ಸಮೂಹದ ಕಂಚಾವೀರರು ಹರಿಜನ ಜನಾಂಗಕ್ಕೆ ಸೇರಿದವರಾಗಿರುತ್ತಾರೆ. ಇದು ಗಮನಿಸಬೇಕಾದ ಅಂಶ. (ಚಿತ್ರ – ೨೦)

ಇವರನ್ನು ವೀರರು, ಈರರು, ಈರಯ್ಯಗಳು ಕಾಸೆಯ ವೀರರು ಹೀಗೆ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ. ಇವರು ಪವಾಡಗಳನ್ನು ಮಾಡುವುದಲ್ಲದೇ ದೇವರ ಹೆಸರಿನಲ್ಲಿ, ಒಡೆಯರ ಹೆಸರಿನಲ್ಲಿ ಖಡ್ಗಗಳನ್ನು ಹೇಳುತ್ತಾರೆ. ಒಂದು ಐತಿಹ್ಯದ ಪ್ರಕಾರ ಇವರು ವೀರಭದ್ರನ ಪ್ರತಿನಿಧಿಗಳು. ಬಳ್ಳಾರಿ ಸೀಮೆಯಲ್ಲಿ ಕಂಡುಬರುವ ವೀರಭದ್ರನ ಸಂಪ್ರದಾಯದ ವೀರಗಾಸೆ ಎಂಬ ಜನಪದ ಸಂಪ್ರದಾಯಕ್ಕೂ ಇವರು ಖಡ್ಗ ಹೇಳುವ ಕ್ರೀಯೆಗೂ ಹತ್ತಿರದ ಸಂಬಂಧವಿದೆ.

ಡಾ॥ ಎಂ. ಎಸ್. ವೆಂಕಟೇಶ ಅವರು ಸಂಗ್ರಹಿಸಿರುವ ಮಾಹಿತಿಯ ಪ್ರಕಾರ ಮೈಲಾರನು ಮಲ್ಲಾಸುರನ ಜೊತೆ ಯುದ್ಧ ಮಾಡಿ ಸುಸ್ತಾಗಿ ಇನ್ನೇನು ಸಂಪೂರ್ಣವಾಗಿ ಸೋತು ಹೋಗುವ ಪರಿಸ್ಥಿತಿ ಬಂದಿತು. ಆಗ ಹೆದರಿಕೊಂಡ ಮೈಲಾರನು ರಣಭೂಮಿಯಿಂದ ಓಡಿ ಹೋಗಿ ತುಂಗಭದ್ರಾನದಿಯಲ್ಲಿ ಮುಳುಗಿದನು. ಆಗ ಅವನ ಮಗ ವೀರಭದ್ರನು ಅದನ್ನು ನೋಡಿ ವೀರಾವೇಶದಿಂದ ಅಪ್ಪನ ಸಹಾಯಕ್ಕೆ ಹೋಗೋಣ ಎಂದು ರಪ್ಪನೆ ತನ್ನ ಜಟೆಯನ್ನು ನೆಲಕ್ಕೆ ಬಾರಿಸಿದಾಗ ಐದು ಜನ ವೀರರು (ಪಂಚವೀರರು) ಉತ್ಪತ್ತಿಯಾದರು. ಇವರನ್ನೇ ಈಗ ಕಂಚಾವೀರರೆಂದು ಕರೆಯುತ್ತಾರೆ. (ವೀರಭದ್ರನ ಉಗಮದ ಹಿಂದೆಯೂ ಇದೇ ರೀತಿಯ ಕಥೆಯೊಂದು ಪುರಾಣದಲ್ಲಿದೆ : ದಕ್ಷನ ಯಜ್ಞದಲ್ಲಿ ಅವಮಾನಿತನಾದ ಶಿವನು ಯಜ್ಞದ ನಾಶಕ್ಕೆಂದು ತನ್ನ ಜಟೆಯಿಂದ

ವೀರಭದ್ರನನ್ನು ಸೃಷ್ಟಿಸಿದನು.) ಈ ಐದು ಜನ ವೀರರು ಹೋಗಿ ನೀರಿನಲ್ಲಿ ಮುಳುಗಿದ್ದ ಮೈಲಾರನನ್ನು ತಲೆಗೂದಲು ಹಿಡಿದು ಎತ್ತಿ ನಿಲ್ಲಿಸಿದ್ದರು. ಇವರ ಭಯಂಕರ ರೂಪವನ್ನು ನೋಡಿದ ಮೈಲಾರ ನಡುಗಲು ಆರಂಭಿಸಿದನು. ಆಗ ಅವರು, ತಂದೆಯೇ, ನಾವು ವೀರಭದ್ರನ ಅಂಶದವರು. ನೀವೇನೂ ಹೆದರಬೇಡಿ ಎಂದು ಹೇಳಿ ಅವನಿಗೆ ಸಹಾಯ ಮಾಡಲು ಮುಂದಾದರು. ನಂತರ ಮಲ್ಲಾಸುರನ ಬಳಿ ಹೋಗಿ ಅವನೊಡನೆ ಯುದ್ಧ ಮಾದಿ ಅವನನ್ನು ಹೆಡಮುರಿಗೆ ಕಟ್ಟಿ ಎಳೆತಂದರು. ಅವರೇ ಅವನನ್ನು ಕೊಲ್ಲಬಹುದಿತ್ತು. ಆದರೆ ಮಣಿಕಾಸುರು ಹಾಗೂ ಮಲ್ಲಾಸುರರು ಪಡೆದ ವರದ ಪ್ರಭಾವದಿಂದ ಇದು ಸಾಧ್ಯವಾಗುತ್ತಿರಲಿಲ್ಲ. ಈ ಕಾರಣದಿಂದ ಶಿವನೇ ಅವರನ್ನು ಕೊಲ್ಲಬೇಕಾಯಿತು. ಆದ್ದರಿಂದ ಕಂಚಾವೀರರು ಮಲ್ಲಾಸುರನ ವಧೆಗೆ ಕಾರಣರಾದರು.[16]

ಡಾ॥ ಎಂ. ಬಿ. ನೇಗಿನಹಾಳ ಅವರು ಸಂಗ್ರಹಿಸಿದ ಮಾಹಿತಿಯಲ್ಲಿ ಇದೇ ಕಥೆ ಇನ್ನೊಂದು ರೂಪ ಪಡೆದುಕೊಳ್ಳುತ್ತದೆ. ಶಿವನು ರಾಕ್ಷಸರ ವಧೆಗಾಗಿ ಭೂಲೋಕದಲ್ಲಿ ಮೈಲಾರನಾಗಿ ಅವತರಿಸಿ ಅವರನ್ನು ಹುಡುಕುತ್ತ ತುಂಗಭದ್ರಾ ನದಿಯ ತೀರಕ್ಕೆ ಬಂದು ಗೊರವಪ್ಪನ ವೇಷ ಧರಿಸಿ ಅಲೆಯುತ್ತಿದ್ದನು. ಹೀಗೆ ಅವಿಶ್ರಾಂತನಾಗಿ ಅಲೆಯುತ್ತಿದ್ದಾಗ ಒಮ್ಮೆ ಅವನು ಮೈಲಾರದ ಬಳಿಯ ತುಂಗಭದ್ರಾ ನದಿಯ ದಂಡೆಯಲ್ಲಿ ತನ್ನ ಬೆವರನ್ನು ಒರೆಸಿ ನೆಲಕ್ಕೆಸೆದನು. ಅದರಿಂದ ಉದ್ಭವಗೊಂಡ ಐದು ಜನ ವೀರರು ನೀರಿನಲ್ಲಿ ಮುಳುಗು ಹಾಕಿ ಎದ್ದು ನಿಂತರು. ಈ ಐವರು ಉಗ್ರರೂಪಿಗಳನ್ನು ಕಂಡ ಮೈಲಾರಪ್ಪ ಹೆದರಿದನು. ಅವರು, ನಾವು ನಿನ್ನ ಮಕ್ಕಳು. ರಾಕ್ಷಸ ವಧೆಯಲ್ಲಿ ನಿನಗೆ ಸಹಾಯ ಮಾಡಲು ಹುಟ್ಟಿ ಈ ರೂಪ ಧರಿಸಿದ್ದೇವೆ. ಎಂದು ಹೇಳಿದರು. ಮೊದಲು ಮೈಲಾರಪ್ಪ ಈ ಮಾತನ್ನು ನಂಬಲಿಲ್ಲ. ನೀವು ನನ್ನ ಮಕ್ಕಳೇ ಆಗಿರುವುದು ನಿಜವಾದರೆ ನನ್ನ ಹೆಂಡತಿ ಗಂಗಿಮಾಳಿಯ ಎದೆಹಾಲು ನಿಮ್ಮ ಬಾಯಲ್ಲಿ ಬೀಳಲಿ ಎಂದು ಹೇಳಿ ಪರೀಕ್ಷೆ ಒಡ್ಡಿದನು. ಗಂಗಿಮಾಳಮ್ಮ ಹಾಗೂ ಈ ಐದು ಜನರ ನಡುವೆ ಏಳು ಪದರು ಬಟ್ಟೆಯನ್ನು ಕಟ್ಟಿದರು. ಅವಳ ಎದೆಹಾಲು ಬಟ್ಟೆಯನ್ನು ದಾಟಿಬಂದು ಇವರ ಬಾಯಲ್ಲಿ ಬಿದ್ದವು. ಹೀಗೆ ಅವರೆಲ್ಲ ತನ್ನ ಮಕ್ಕಳೇ ಎಂದು ಖಚಿತಪಡಿಸಿಗೊಂಡ ಮೈಲಾರ ಯುದ್ಧದಲ್ಲಿ ಇವರ ಸಹಾಯದಿಂದ ಮಣಿಕ–ಮಲ್ಲಾಸುರರ ಸಂಹಾರ ಮಾಡಿದ.[17]

ಜನಪದರ ಕಥೆಯಲ್ಲಿ ಬರುವ ಮೈಲಾರನ ಪ್ರೇಮಪ್ರಕರಣದಲ್ಲಿ (ಕುರುಬರು ಹಾಡುವ ಶೀಲವಂತರ ಕಥೆಯಲ್ಲಿ) ಮಲ್ಲನಗೌಡರ ಮನೆಯ ಹೆಣ್ಣು ಕೋಮಾಲಿಯನ್ನು ಗೊರವ ಮೈಲಾರ ಪ್ರೀತಿಸುತ್ತಾನೆ. ಈ ಕಾರಣದಿಂದ ಅವನಿಗೆ ಅನೇಕ ಕಷ್ಟಗಳು ಒದಗಿ ಬರುತ್ತವೆ. ಅವಳನ್ನು ಪಡೆಯಲು ಅವನು ಕುರಿ ಕಾಯುತ್ತಾನೆ, ಕುರಿಯ ಹಟ್ಟಿಯಲ್ಲಿ ಕೆಲಸ ಮಾಡುತ್ತಾನೆ. ಮೋಸದಿಂದ ಅವಳನ್ನು ಪಡೆಯುವ ಸಾಹಸಕ್ಕೆ ಕೈ ಹಾಕುತ್ತಾನೆ. ಇದರಿಂದ ಕೋಪಗೊಂಡ ಮಲ್ಲನಗೌಡ ಅವನನ್ನು ಹೊಡೆಯುತ್ತಾನೆ. ಕೊನೆಗೆ ಮೈಲಾರನ ಸಹಾಯಕ್ಕೆ ಅವನ ತಂಗಿ ಎಲ್ಲಮ್ಮ ಬರುತ್ತಾಳೆ. ಕೊನೆಗೆ ಮೈಲಾರ ಮಲ್ಲನ ಗೌಡನ ಸೊಕ್ಕು ಮುರಿದು, ಕೋಮಾಲಿಯನ್ನು ಕದ್ದು ತಂದು ತನ್ನ ಬಳಿ ಇರಿಸಿಕೊಳ್ಳುತ್ತಾನೆ. ಈ ಸಂದರ್ಭದಲ್ಲಿ ಕಂಚಾವೀರರು ಮಲ್ಲನಗೌಡನ ನಾಶಕ್ಕೆ ಸಹಾಯ ಮಾಡುತ್ತಾರೆ. ಇಂದಿಗೂ ಸಹ ಜಾತ್ರೆಯ ಸಂದರ್ಭದಲ್ಲಿ ಇದರ ಅಣಕು ಪ್ರದರ್ಶನವನ್ನು ನಾವು ನೋಡಬಹುದು. ಗುಪ್ತ ಮೌನ ಸವಾರಿಯ ನಂತರದಲ್ಲಿ ಮಲ್ಲಾಸುರನ ತಲೆ ತೆಗೆದಾದ ನಂತರ ಗೊರವ ಮೊದಲಾದವರು ಸಂಭ್ರಮಿಸಿ ಕುಣಿದಾಡುತ್ತಾರೆ. ಆದರೆ ತಮ್ಮವರ ತಪ್ಪಿನಿಂದ ಹತನಾದ ಮಲ್ಲನಗೌಡರ ಸಾವಿಗಾಗಿ ಹೊಲೆ ಮಾದಿಗರು ಎದೆ ಬಡಿದುಕೊಂಡು ಅಳುತ್ತಾರೆ. ಬುಡಕಟ್ಟುಗಳಲ್ಲಿ ಸಾಂಸ್ಕೃತಿಕ ಸಂಘರ್ಷಗಳಂತೆಯೇ ವರ್ಗಸಂಘರ್ಷಗಳು ಸಾಮಾನ್ಯ. ಇಲ್ಲಿ ನಡೆದ ಘಟನೆಯೂ ಸಹ ಎಂದೋ ನಡೆದಿರಬಹುದಾದ ವರ್ಗಸಂಘರ್ಷದ ದ್ಯೋತಕವಿರಬಹುದು. ಈ ಸಂಘರ್ಷಗಳಲ್ಲಿ ವಿಜಯಿಯಾದವನೇ ಕಾಲಾಂತರದಲ್ಲಿ ದೈವತ್ವಕ್ಕೇರಿರಬಹುದು.

ಕಂಚಾವೀರರು ದೇವಾಲಯದಲ್ಲಿ ಹಬ್ಬ ಹರಿದಿನಗಳು ನಡೆಯುವ ಸಂದರ್ಭದಲ್ಲಿ ಜಾತ್ರೆಯ ಕಾಲಕ್ಕೆ ಹಾಗೂ ರವಿವಾರಗಳಂದು ತಮ್ಮ ಮನೆಗಳನ್ನು ಪೂರ್ಣ ಸಾರಿಸಿ ಮಡಿ ಮಾಡುತ್ತಾರೆ. ಮಾಂಸಾಹಾರಿಗಳಾಗಿದ್ದರೂ ಈ ಸಂದರ್ಭದಲ್ಲಿ ಇದು ನಿಷಿದ್ಧ.

ಕಂಚಾವೀರರಲ್ಲಿ ಎರಡು ಪ್ರಕಾರದವರನ್ನು ಕಾಣಬಹುದು. ಒಂದು ವರ್ಗ ಸಾಮಾನ್ಯ ಕಂಚಾವೀರರು ಹಾಗೂ ಇನ್ನೊಂದು ವರ್ಗ ಕಾಸೆ ಅಥವಾ ವೀರಗಾಸೆಯವರು. ಸಾಮಾನ್ಯ ಕಂಚಾವೀರರು ಗೊರವಪ್ಪನಂತೆ ದೋತರ, ಅಂಗಿ ಧರಿಸಿ ತಲೆಯ ಮೇಲೊಂದು ಮುರಗಿ ಮುಂಡಾಸನ್ನು ಧರಿಸಿರುತ್ತಾರೆ. ಮೇಲೊಂದು ಗವುನು ಅಥವಾ ಶಾಲನ್ನು

ಹಾಕಿಕೊಂಡಿರುತ್ತಾರೆ. ಕೆಲವರು ಕೋಟನ್ನು ಹಾಕಿಕೊಳ್ಳುವರು. ಕೊರಳಲ್ಲಿ ರುದ್ರಾಕ್ಷಿಮಾಲೆ, ಕರಡಿಗೆಗಳನ್ನು ಹಾಕುವರು. ಬಗಲಿನಲ್ಲಿ ಯಾವಾಗಲೂ ಜೋಳಿಗೆ ಇರುತ್ತದೆ. ಮುಂಗೈಗೆ ಕಂಕಣಕಟ್ಟಿ, ಕೈಯಲ್ಲಿ ಖಡ್ಗ, ಬೆತ್ತ ಅಥವಾ ಶಸ್ತ್ರಗಳನ್ನು ಹಿಡಿದಿರುತ್ತಾರೆ. ಹಣೆಗೆ ಭಂಡಾರ, ವಿಭೂತಿ, ಗಂಧಗಳನ್ನು ಧರಿಸಿರುತ್ತಾರೆ. ಕಾಲಲ್ಲಿ ಚಪ್ಪಲಿಯನ್ನು ಮೆಟ್ಟುವುದಿಲ್ಲ.

ಇನ್ನೊಂದು ಬಗೆಯವರು ಕಾಸೆ ಅಥವಾ ವೀರಗಾಸೆಯವರು. ಇವರು ತಲೆಗೆ ಮುಂಡಾಸು ಹಾಕದೇ ಹಾಗೆಯೇ ಉದ್ದಕೂದಲು ಬಿಟ್ಟಿರುತ್ತಾರೆ. ತಮ್ಮ ಕೂದಲಿನ ಜೊತೆಗೆ ಕಾಡಾಕಳಿನ ಬಾಲದ ಕೂದಲನ್ನು ಸೇರಿಸಿ ಜಟೆ ಕಟ್ಟುವರು. ಅದರ ಮೇಲೆ ಗೆಜ್ಜೆ ಸಮೇತರಾದ ಪಟ್ಟಿಯನ್ನು ಬಿಗಿದುಕೊಳ್ಳುವರು. ಕೊರಳಲ್ಲಿ ರುದ್ರಾಕ್ಷಿ ಮಾಲೆ, ಲಿಂಗದ ಕರಡಿಗೆಯನ್ನು ಹಾಕಿಕೊಂಡು ಅದರ ಮೇಲೆ ಜಂಗನ್ನು ಇಳಿಬಿಟ್ಟುಕೊಳ್ಳುವರು. ದೋತರದ ಕಾಸೆಯನ್ನು ಎತ್ತಿಕಟ್ಟಿಕೊಳ್ಳುವರು. ಕೆಲವರು ಚಲ್ಲಣವನ್ನು ತೊಡುವುದುಂಟು. ನಡುವಿಗೆ ವೀರಮುಖದ ಪಟ್ಟಿಕೆ ಕಟ್ಟಿಕೊಳ್ಳುವರು. ಇದರಲ್ಲಿ ಹಿತ್ತಾಳೆಯ ಮೂರು ಮುಖಗಳಿರುವುವು. ಇವುಗಳ ಜೊತೆಗೆ ಸೊಂಟದ ಸುತ್ತಲೂ ಕೂದಲಿನ ಕುಚ್ಚುಗಳನ್ನು ಇಳಿಬಿಟ್ಟಿಕೊಂಡಿರುತ್ತಾರೆ. ಹಣೆಗೆ ಭಂಡಾರ, ಗಂಧ, ವಿಭೂತಿ ಧರಿಸಿ ಕೈಯಲ್ಲಿ ಯಾವಾಗಲೂ ಖಡ್ಗ ಅಥವಾ ಸಲಾಕೆಯನ್ನು ಹಿಡಿದಿರುತ್ತಾರೆ.

ಶಸ್ತ್ರ, ಬಗನಿಯ ಮರದಿಂದ ಮಾಡಿದ ಗೂಟ, ಚಿಗರಿ ಚರ್ಮದ ಮಿಣಿ, ಜಾಲಿ ಮುಳ್ಳಿನ ಕೊನೆ ಮುಂತಾದವುಗಳಿಂದ ಕಾಲು ಪವಾಡ ಹಾಗೂ ಕಕ್ಕಡಾರತಿಯಿಂದ ಕೈ ಪವಾಡ ಮಾಡುವುದು ಕಂಚಾವೀರರ ಮುಖ್ಯ ಸೇವೆ. ದೇವರ ಪಲ್ಲಕ್ಕಿ ಹೊರಗೆ ಹೊರಟಾಗಲೆಲ್ಲ ಅದರ ಜೊತೆ ಇವರು ಖಡ್ಗಧಾರಿಗಳಾಗಿ ಇದ್ದೇ ಇರುತ್ತಾರೆ. ಖಡ್ಗವನ್ನು ಝಳಪಿಸುತ್ತ, ದೇವರಿಗೆ ವಂದಿಸುತ್ತ ಇರುತ್ತಾರೆ. ನವರಾತ್ರಿಯ ಪ್ರತಿಪದೆಯಂದು ಕಲ್ಲತ್ತಿ ಮರಕ್ಕೆ ಹೋಗಿ ಬರುವಾಗ ಕಾರಣಿಕದ ದಿನ ಕಾರಣಿಕ ಹೇಳಿ ಬರುವಾಗ, ಕುದುರೆಯ ಹಬ್ಬದಂದು ಕುರುಬತ್ತೆವ್ವನ ಮನೆಗೆ ಹೋಗಿ ಬರುವಾಗ, ಭಾರತ ಹುಣ್ಣಿಮೆ ಯಂದು ರಾಕ್ಷಸ ಸಂಹಾರ ಮಾಡಿ ಬರುವಾಗ ಹಾಗೂ ಪ್ರತಿ ಸೋಮವಾರ ಬೆಳಗ್ಗೆ ಗಂಗಿ ಮಾಳವ್ವನ ಗುಡಿಯಿಂದ ತನ್ನ ದೇವಾಲಯಕ್ಕೆ ದೇವರು ಬರುವಾಗ ದೇವರ ಎದುರು ನಿಂತು ಖಡ್ಗ ಅಥವಾ ಒಡಬು ಹೇಳುವುದು ಇವರ ಇನ್ನೊಂದು ಕಾಯಕ.

ಕಲ್ಲತ್ತಿ ಮರ ಅಥವಾ ಡೆಂಕಣ ಮರಡಿಗೆ ಹೋಗಿ ಬರುವ ಸಂದರ್ಭದಲ್ಲಿ ಖಡ್ಗ ಹೇಳುವ ಸ್ಥಾನ ಹಾಗೂ ಸಂಖ್ಯೆಗಳು ಹೆಚ್ಚು ಕಡಿಮೆಯಾಗಬಹುದು. ಹೆಗ್ಗಪ್ಪನ ಗುಡಿಯ ಮುಂದೆ, ಗಂಗಿ ಮಾಳಮ್ಮನ ಗುಡಿಯ ಮುಂದೆ ಹಾಗೂ ಕೆಂಚಪ್ಪನ ಗುಡಿಯ ಮುಂದೆ ಖಡ್ಗ ಹೇಳುವ ಕಾರ್ಯಕ್ರಮ ನಡೆಯುತ್ತದೆ. ಕಾರಣಿಕಕ್ಕೆ ಹೋಗಿ ಬರುವಾಗ ಸುಮಾರು ಇಪ್ಪತ್ತು ಸಲ ಈ ಕಾರ್ಯಕ್ರಮ ನಡೆಯುವುದು. ಒಡಬು ಹೇಳುವಾಗ ಐದು ಜನ ಕಂಚಾವೀರರು ದೇವರ ಪಲ್ಲಕ್ಕಿಯ ಎದುರಿಗೆ ನಿಂತುಕೊಳ್ಳುವರು. ಅವರಲ್ಲೊಬ್ಬನು ಕೈಯ್ಯಲ್ಲಿ ಖಡ್ಗ ಹಿಡಿದು ಝಳಪಿಸುತ್ತ ಒಡಬು ಹೇಳುತ್ತ ಹೋದರೆ ಉಳಿದವರು "ಭಲೆ ಭಲೆ, ಹೌದು, ನಮಃ ಶಿವ, ಚಾಂಗಬಲೋ" ಎಂದು ಸೇರಿಸುತ್ತಾರೆ.

ಬಳ್ಳಾರಿ ಸೀಮೆಯಲ್ಲಿ ವೀರಭದ್ರನ ಒಕ್ಕಲಿನವರು ವೀರಗಾಸೆಯ ಸಂಪ್ರದಾಯವನ್ನು ಪಾಲಿಸುವುದನ್ನು ನಾವು ಕಾಣಬಹುದು. ಅದೇ ಮಾದರಿಯ ಒಡಪು ಹಾಗೂ ಖಡ್ಗ ಹೇಳುವ ಬಗೆಯನ್ನು ಮೈಲಾರದಲ್ಲಿ ಕಾಣಬಹುದು. ಸಾಮಾಜಿಕ ಹಾಗೂ ಸಾಂಸ್ಕೃತಿಕ ಕೊಡುಕೊಳುಗೆಗಳು ತಮ್ಮ ಮಹತ್ವವನ್ನು ಸಾರುವುದನ್ನು ನಾವಿಲ್ಲಿ ಗಮನಿಸಬಹುದು. ಕಂಚಾವೀರರು ಒಡಬು ಹೇಳುವಾಗ ವಾಲಗದವರೆಲ್ಲ ಸ್ಥಬ್ಧರಾಗಿದ್ದು ನಂತರದಲ್ಲಿ ಮತ್ತೆ ಉತ್ಸವ ಮುಂದುವರಿಯುತ್ತದೆ. ಒಡಬುಗಳು ಸಾಮಾನ್ಯವಾಗಿ ಮೈಲಾರನ ಅವತಾರಕ್ಕೆ ಸಂಬಂಧಿಸಿದಂತೆ, ಪವಾಡಗಳಿಗೆ ಸಂಬಂಧಿಸಿದಂತೆ ಇರುತ್ತವೆ.

ಇವರೆಲ್ಲದೇ ಭಾರತ ಹುಣ್ಣಿಮೆಯ ಕಡುಬಿನ ಕಾಳಗದ ಸಂದರ್ಭದಲ್ಲಿ ಮಲ್ಲಾಸುರನ ತಲೆಯನ್ನು ತರುವ ಕೆಲಸವನ್ನು ಸಹ ಕಂಚಾವೀರರೇ ಮಾಡುತ್ತಾರೆ.

## ೫.೭ ಇತರ ಭಕ್ತರು

ಮೈಲಾರಲಿಂಗನ ಒಕ್ಕಲಿನವರಲ್ಲದೇ ಇತರ ಅನೇಕ ರೀತಿಯ ಭಕ್ತರು ಮೈಲಾರನಿಗೆ ನಡೆದುಕೊಳ್ಳುವುದನ್ನು ನಾವು ಕಾಣಬಹುದು. ಒಕ್ಕಲಿದ್ದವರಿಗೆ ಹೊರೆಹೊತ್ತು (ದೀಕ್ಷೆ ಪಡೆದು) ಸೇವೆ ಸಲ್ಲಿಸುವ ಸಂಪ್ರದಾಯವಿದ್ದರೆ, ಇತರ ಭಕ್ತರಿಗೆ ಈ ನಿಯಮವಿಲ್ಲ. ಉಳಿದಂತೆ ಭಕ್ತಿ ಸಮರ್ಪಣೆಗೆ ಯಾವುದೇ ನಿರ್ಬಂಧವಿಲ್ಲ. ಭಕ್ತರು ತಂತಮ್ಮ ಇಷ್ಟಾರ್ಥ ಸಿದ್ಧಿಗಳಿಗೆ ಬೇರೆ ಬೇರೆ ದೈವಗಳಿಗೆ ಮೊರೆ ಹೋಗುವಂತೆ ಮೈಲಾರನನ್ನು ನಂಬುತ್ತಾರೆ. ತಮ್ಮ ಬಯಕೆ ಈಡೇರಿದಾಗ ಹರಸಿಕೊಂಡ ರೀತಿಯಲ್ಲಿ ತಮ್ಮ ಭಕ್ತಿಯನ್ನು ಸಲ್ಲಿಸುತ್ತಾರೆ.

ಜಾತ್ರೆ ಉತ್ಸವಾದಿ ಸಂದರ್ಭಗಳಲ್ಲಿ ಈ ಭಕ್ತರು ಮೈಲಾರನ ಒಕ್ಕಲಿನವರಷ್ಟೇ ಶ್ರದ್ಧಾ ಭಕ್ತಿಯಿಂದ ಭಾಗವಹಿಸುತ್ತಾರೆ.

ಮೈಲಾರನ ಒಕ್ಕಲಿನವರ ಹಾಗೆಯೇ ಈ ಭಕ್ತರೂ ದೋಣಿಗೆ ಹಣ್ಣುಪ್ಪ ನೀಡುವುದು, ಭಂಡಾರ ಪಡೆಯುವುದು, ಕಾರಣಿಕದಲ್ಲಿ ಭಾಗವಹಿಸುವುದು, ಹರಕೆ ಹೊರುವುದು ಮೊದಲಾದ ಕ್ರಿಯೆಗಳನ್ನು ಮಾಡುತ್ತಾರೆ. ದೇವರಿಗೆ ತಮ್ಮ ಕೈಲಾದಷ್ಟು ಕಾಣಿಕೆ ಸಲ್ಲಿಸಿ ಕೋರಿಕೆಗಳನ್ನು ಈಡೇರಿಸಿಕೊಳ್ಳುತ್ತಾರೆ.

ಮೈಲಾರನ ಭಕ್ತರಲ್ಲಿ ಕೇವಲ ಹಿಂದೂಗಳು ಮಾತ್ರವಲ್ಲ ಇಸ್ಲಾಮ್ ಧರ್ಮೀಯರೂ ಇರುವುದು ಒಂದು ವಿಶೇಷ. ಇವರು ಮಲ್ಲುಖಾನ್, ಅಮಜತಖಾನ್ ಎಂದು ಮೈಲಾರನನ್ನು ಭಕ್ತಿಯಿಂದ ಆರಾಧಿಸುತ್ತಾರೆ. ಉತ್ತರ ಕರ್ನಾಟಕದಲ್ಲಿ ಹಿಂದೂ ಮುಸ್ಲಿಂ ಭಾವೈಕ್ಯತೆಗೆ ಸಂಬಂಧಿಸಿದಂತೆ ಇಂತಹ ಅನೇಕ ಉದಾಹರಣೆಗಳನ್ನು ಕಾಣಬಹುದು.

## ಅಡಿಟಿಪ್ಪಣಿಗಳು :

1. ಪ್ರಸ್ತುತ ಶ್ರೀ ಶ್ರೀ ಗುರು ವೆಂಕಪ್ಪಯ್ಯ ಒಡೆಯರ್ ಅವರು ಒಡೆಯರಾಗಿದ್ದಾರೆ.
2. ಮೀನಗುಂದಿಯ ಗುಹೆಯೊಂದರಲ್ಲಿ ತಪಸ್ಸು ಮಾಡುತ್ತಿದ್ದ ಕಪಿಲ ಮುನಿಗಳಿಗೆ ಶಿವನು ಕನಸಿನಲ್ಲಿ ಬಂದು, ತಾನು ಹಿರೇಮೈಲಾರದಲ್ಲಿರುವ ಕರಿಯ ಆಲದ ಮರದ ಬುಡದಲ್ಲಿ ಲಿಂಗರೂಪದಲ್ಲಿ ಉದ್ಭವಿಸಿರುವುದಾಗಿ ಹೇಳಿದನು. ಕಪಿಲ ಮುನಿಗೆ ಆ ಜಾಗಕ್ಕೆ ಹೋಗಿ ಪೂಜೆ ಮಾಡಿಕೊಂದಿರಬೇಕೆಂದು ಆಜ್ಞೆ ಮಾಡಿದನು. ಅದೇ ರೀತಿ ಕಪಿಲ ಮುನಿಗಳು ಹಿರೇಮೈಲಾರಕ್ಕೆ ಬಂದು ಆಲದ ಮರದ ಬುಡದ ಹುತ್ತದಲ್ಲಿ ಅಡಗಿದ್ದ ಶಿವಲಿಂಗವನ್ನು ಹೊರಗೆ ತೆಗೆದು ಪೂಜೆ ಮಾಡಲು ತೊಡಗಿದರು. ಅವರ ತರುವಾಯು ಅವರ ತಮ್ಮ ಗೋಮುನಿ, ನಂತರದಲ್ಲಿ ಅವರ ಸಂತತಿಯವರು ಮೈಲಾರದ ದೇವಾಲಯದಲ್ಲಿ ಒಡೆಯರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.
3. ಶ್ರೀಕೃಷ್ಣಪ್ಪ; ಮೈಲಾರಲಿಂಗೇಶ್ವರ ದಿವ್ಯ ಚರಿತಾಮೃತ ಪುಟ – ೧೮೫
4. ಈಗ ಇರುವ ಪಂಚಲೋಹದ ಭಂಡಾರದ ಬಟ್ಟಲನ್ನು ಕ್ರಿ. ಶ. ೧೬೪೦ರಲ್ಲಿ ಚಿತ್ರದುರ್ಗದ ರಾಜಶ್ರೀ ಬಿಚ್ಚುಗತ್ತಿಯ ಭರಮಣ್ಣ ನಾಯಕರು ನೀಡಿದ್ದಾರೆಂದು ಒಡೆಯರು ಅವರು ಹೇಳಿದ್ದಾರೆ. ಈಗಲೂ ಸಹ ಇದನ್ನು ವಂಶಪಾರಂಪರ್ಯವಾಗಿ ಬಳಸಲಾಗುತ್ತಿದೆ. ಈ ಬಟ್ಟಲಿನ ಸುತ್ತಲೂ ದೇವತೆಗಳ ಚಿತ್ರಗಳನ್ನು ಕೆತ್ತಲಾಗಿದೆ. ಇದರಿಂದಲೇ ಶ್ರೀಗುರುಗಳು ಭಕ್ತರಿಗೆ ಭಂಡಾರವಿಟ್ಟು ಆಶೀರ್ವದಿಸುತ್ತಾರೆ.
5. ಮೈಲಾರದ ಗೊರವನಂತೆ ತಂತಮ್ಮನೆ ಬಡಿದುಕೊಳ್ವುಚ್ಚುಳಯಿಲಕುಮುಂ........; ಧರ್ಮಾಮೃತ; ನಯಸೇನ – ೧೧೧೨; ವಚನ ೩.೨೦೬

6. ಡಾ. ಎಂ. ಎನ್. ವೆಂಕಟೇಶ; ಮೈಲಾರದ ಜಾತ್ರೆಗಳು – ಒಂದು ಪ್ರದರ್ಶನ ಅಧ್ಯಯನ; ಪುಟ – ೪೭
7. ಡಾ. ಎಂ. ಎಂ. ಕಲಬುರ್ಗಿ; ಜಾನಪದ ಸಾಹಿತ್ಯ ದರ್ಶನ – ೬; ಪುಟ – ೪೦
8. ಅದೇ
9. ಗೊರವರು ಶಾಸ್ತ್ರ ಸಂದರ್ಭಗಳಲ್ಲಿ ಬಳಸುವ ಕಂಚಿನ ಅಥವಾ ಬೇರೆ ಲೋಹದಿಂದ ಮಾಡಿದ ಚೌಕಾಕಾರದ ಪಾತ್ರೆ.
10. ಇದು ಮೈಲಾರಲಿಂಗನಿಗೆ ಅತ್ಯಂತ ಪ್ರಿಯವೆಂದು ಹೇಳಲಾಗುತ್ತದೆ. ಬಾಳೆಹಣ್ಣು, ಸಕ್ಕರೆ ಅಥವಾ ಬೆಲ್ಲ, ಹಾಲು ಹಾಗೂ ತುಪ್ಪಗಳನ್ನು ಬೆರೆಸಿ ಇದನ್ನು ಸಿದ್ಧಪಡಿಸುತ್ತಾರೆ.
11. ತಗಡಿನಿಂದ ಮಾಡಿದ ಎರಡು ಮೂರು ಗಂಟೆಗಳನ್ನು ಒಂದು ಉದ್ದವಾದ ಹಲಗೆಯ ತುಂಡಿಗೆ ಸಾಲಾಗಿ ಕಟ್ಟಿ, ಒಂದು ಹಗ್ಗದಿಂದ ಬಿಗಿದು ಹೆಗಲ ಮೇಲಿನಿಂದ ಕೆಳಗೆ ಇಳಿಬಿಟ್ಟಿರುತ್ತಾರೆ. ಇದನ್ನು ಪಾರಿ ಎನ್ನುತ್ತಾರೆ.
12. ಈ ಕವಡೆಗಳು ಮಲ್ಲಾಸುರನ ಹಲ್ಲುಗಳ ಸಂಕೇತ ಎಂಬ ನಂಬಿಕೆಯಿದೆ.
13. ಡಾ. ಎಂ. ಬಿ. ನೇಗಿನಹಾಳ; ಮೈಲಾರಲಿಂಗ ಖಂಡೋಬಾ; ಪುಟ – ೨೬೬
14. ಕಟ್ಟಿಗೆಯ ಪಾದುಕೆಗಳ ಮೇಲೆ ಸಾಲಾಗಿ ಮೊಳೆಗಳನ್ನು ಹೊಡೆದು ಮಾಡಿದ ವಿಶಿಷ್ಟವಾದ ಪಾದುಕೆಗಳು
15. ಚಂಚಿ ಎಂದರೆ ಸಂಚಿ. ಇದು ಬಟ್ಟೆಯಿಂದ ಮಾಡಿದ ಎಲೆ ಅಡಿಕೆ ಇಡುವ ಚೀಲ.
16. ಡಾ. ಎಂ. ಎನ್. ವೆಂಕಟೇಶ; ಮೈಲಾರದ ಜಾತ್ರೆಗಳು – ಒಂದು ಪ್ರದರ್ಶನ ಅಧ್ಯಯನ ; ಪುಟ – ೫೨
17. ಡಾ. ಎಂ. ಬಿ. ನೇಗಿನಹಾಳ; ಮೈಲಾರಲಿಂಗ ಖಂಡೋಬಾ; ಪುಟ – ೨೬೬

* * *

# ಅಧ್ಯಾಯ ೬ : ಧಾರ್ಮಿಕ ಆಚರಣೆಗಳು
## (ಉತ್ಸವ ಹಾಗೂ ಜಾತ್ರೆಗಳು)

೧. **ಹಬ್ಬ ಹರಿದಿನಗಳು**

ಯುಗಾದಿ

ಕುದುರೆ ಹಬ್ಬ

ನವರಾತ್ರಿ

ದೀಪಾವಳಿ

ಭಂಡಾರ ಭಟ್ಟಿ

ಧನುರ್ಮಾಸ

ಬನದಹುಣ್ಣಿಮೆ

೨. **ಜಾತ್ರೆ, ಕಾರ್ಣಿಕ**

ರಥಸಪ್ತಮಿ

ಗುಗ್ಗರಿಹಬ್ಬ

ಕಿಚಡಿಹಬ್ಬ

ಭಾರತ ಹುಣ್ಣಿಮೆ

ಗುಪ್ತ ಮೌನಸವಾರಿ

ಕಾರಣಿಕೋತ್ಸವ

# ಅಧ್ಯಾಯ – ೬

# ಧಾರ್ಮಿಕ ಆಚರಣೆಗಳು

## (ಉತ್ಸವ ಹಾಗೂ ಜಾತ್ರೆಗಳು)

ಸಂಸ್ಕೃತ ಮೂಲದ ಪರ್ವ ಪದದ ತದ್ಭವರೂಪ ಹಬ್ಬ. ಇದು ಜನಾಂಗಿಕ ಜೀವನದ ನಿರ್ದಿಷ್ಟ ಕಾಲದ ಉತ್ಸವದ ಸಂಕೇತವಾಗಿದೆ. ಒಂದು ಕಾಲಾವಧಿಯಲ್ಲಿ ಕೈಗೊಳ್ಳುವ ಆಚರಣೆಗಳ ರೂಢಿ ಉತ್ಸವಗಳೇ ಹಬ್ಬ ಎನ್ನಬಹುದು. ಹಬ್ಬಗಳಿಗೆ ಸಂಪ್ರದಾಯ ಹಾಗೂ ಆಚರಣೆಗಳೇ ಮೂಲ ಪ್ರೇರಣೆ.

ಯಾವುದೇ ಜನಾಂಗದ ಸಾಂಸ್ಕೃತಿಕ ಬೆಳವಣಿಗೆಯನ್ನು ಗುರುತಿಸಲು ಸಿಗುವ ಮಹತ್ವಪೂರ್ಣ ಆಕರಗಳು ಆಯಾ ಜನಾಂಗದ ನಂಬಿಕೆ, ಶ್ರದ್ಧೆ ಹಾಗೂ ಕ್ರಿಯಾಚರಣೆಗಳು.

ಜನಪದರ ಬದುಕು ಪುರಾಣದ ಸೃಷ್ಟಿ ಹಾಗೂ ಆರಾಧನೆ, ಸ್ತುತಿ, ಆಚರಣೆ ಇವೆಲ್ಲ ಚಕ್ರಗತಿಯಲ್ಲಿ ರೂಪುಗೊಂಡು ಕಾಲಾಂತರದಲ್ಲಿ ನಿರ್ದಿಷ್ಟ ಕಾಲದ ಆಚರಣೆಗಳಾಗಿ, ಆ ಆಚರಣೆಗಳೇ ಹಬ್ಬಗಳ ಸ್ವರೂಪವಾಗಿ ಬದಲಾದವು.[1]

ಖ್ಯಾತ ಜಾನಪದ ತಜ್ಞರಾದ ಪ್ರೊ. ಡಿ. ಲಿಂಗಯ್ಯನವರು ಆಚರಣೆಗಳನ್ನು ಕುರಿತು ಹೀಗೆ ಹೇಳುತ್ತಾರೆ:

"ಆಚರಣೆಗಳು ಮಾನವನ ಬದುಕಿನ ಪ್ರತೀಕಗಳು, ಪ್ರತಿಬಿಂಬಗಳು, ಪ್ರತಿಮೆಗಳು ಇವು ಬದುಕಿನ ಕ್ರಿಯೆಗಳ ಸಾಂಕೇತಿಕ ರೂಪಗಳು, ಅನುಸರಣದ ಆಯಾಮಗಳು. ಮಾನವ ಬದುಕಿನ ಅಥವಾ ಪ್ರಕೃತಿ ಬದುಕಿನ ಛಾಯಾವರ್ತಿಗಳೇ ಆಚರಣೆಗಳು."[2]

ಧಾರ್ಮಿಕ ವಿಧಿ, ಫಲಾಪೇಕ್ಷೆ ಇವು ಆಚರಣೆಗಳ ಪ್ರಮುಖ ಆಶಯಗಳು. ಒಬ್ಬ ವ್ಯಕ್ತಿಗಿಂತ ಒಂದು ಜನಾಂಗದ ಜೀವನ ವಿಧಾನದ ಬೇಡಿಕೆಯ ಫಲವಾಗಿ ಆಚರಣೆಗಳು ಹುಟ್ಟುತ್ತವೆ. ಪ್ರಕೃತಿ ಹಾಗೂ ಮಾನವ ದೇಹ ಮನಸ್ಸುಗಳ ಬದಲಾವಣೆಗೂ ಆಚರಣೆಗಳಿಗೂ ನೇರ ಸಂಬಂಧವಿದೆ. ಸಸ್ಯ, ಪ್ರಾಣಿ, ದೇವರುಗಳೂ ಆಚರಣೆಯ

ಸೃಷ್ಟಿಗೆ ದಾರಿ ಮಾಡಿವೆ. ಮನುಷ್ಯನ ಚಟುವಟಿಕೆಗಳಿಗೂ ಆಚರಣೆಗಳ ಆಶಯಗಳಿಗೂ ನಿಕಟವಾದ ಸಂಬಂಧಗಳಿವೆ. ಮನುಷ್ಯ ಹಾಗೂ ಆಚರಣೆಗಳ ರಚನಾ ವಿನ್ಯಾಸವನ್ನು ಈ ಕೆಳಗಿನಂತೆ ಗುರುತಿಸಬಹುದು.




ಮಾನವನಿಗೆ ಹುಟ್ಟು, ಬೆಳವಣಿಗೆ, ಸಾವುಗಳಿರುವಂತೆ ಆಚರಣೆಗಳೂ ಆರಂಭಗೊಂಡು, ಬೆಳೆದು, ಬಳಿಕ ವಿಸರ್ಜನೆಗೊಳ್ಳುತ್ತವೆ. ಈ ಪ್ರಕ್ರಿಯೆ ಪ್ರತಿವರ್ಷವೂ ನಿರಂತರವಾಗಿ ನಡೆಯುತ್ತಲೇ ಇರುತ್ತದೆ. ಒಂದು ವರ್ಷವನ್ನು ಪ್ರಕೃತಿಯ ಉಗಮ, ಅಸ್ತಿತ್ವ ಹಾಗೂ ಅಂತ್ಯ ಎಂಬ ದೃಷ್ಟಿಯಲ್ಲಿ ನೋಡಿದಾಗ ಪ್ರತಿವರ್ಷವೂ ಬರುವ ಆಚರಣೆಗಳ ಮಹತ್ವದ ಅರಿವಾಗುತ್ತದೆ.[3]

ಜನಪದರ ಪ್ರಮುಖ ನಂಬಿಕೆಗಳು ಅವರ ಆಚರಣೆಗಳಿಂದ ವ್ಯಕ್ತವಾಗುತ್ತವೆ. ಸಾಮಾನ್ಯವಾಗಿ ತಮ್ಮ ನಿತ್ಯಜೀವನದ ಆಗುಹೋಗುಗಳಿಗೆ ಸಂಬಂಧಿಸಿದಂತೆ ಪ್ರತಿಯೊಂದಕ್ಕೂ ದೈವವೇ ಕಾರಣ ಎಂಬ ನಂಬಿಕೆಗಳಿರುತ್ತವೆ. ಹೀಗಾಗಿ ಅವರು ತಮ್ಮ ದೈವಕ್ಕೆ ಶ್ರದ್ಧಾಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಅವರ ಆಚರಣೆಗಳು ದೈವತ್ವ ಹಾಗೂ ವ್ಯವಸ್ಥೆ ಎರಡನ್ನೂ ಸಮೀಕರಿಸಿಕೊಂಡಿರುವುದನ್ನು ನಾವು ಕಾಣಲು ಸಾಧ್ಯವಿದೆ. ಯಾವುದೇ ಆಚರಣೆ ಇದ್ದರೂ ಅದಕ್ಕೆ ದೈವಿಕ ಕಾರಣ ಅಥವಾ ಪ್ರಾಕೃತಿಕ ಕಾರಣವಿರುತ್ತದೆ. ಈ ನಿಟ್ಟಿನಲ್ಲಿ ಮೈಲಾರ ಕ್ಷೇತ್ರದಲ್ಲಿ ವರ್ಷಪೂರ್ತಿ ನಡೆಯುವ ಆಚರಣೆಗಳಿಗೆ ಸಾಕಷ್ಟು ಮಹತ್ವ ನೀಡಿರುವುದನ್ನು ನಾವು ಕಾಣಬಹುದಾಗಿದೆ.

ಮೈಲಾರದ ಆಚರಣೆಗಳು ಯುಗಾದಿಯಿಂದ ಆರಂಭಿಸಿ ಭಾರತ ಹುಣ್ಣಿಮೆಯ ವರೆಗೆ ನಿರಂತರವಾಗಿ ಜರುಗುತ್ತಿರುತ್ತವೆ. ಇವುಗಳಲ್ಲಿ ಕೆಲವು ಉತ್ಸವಗಳಿಗಂತೂ ಜನ ಲಕ್ಷಾಂತರ ಸಂಖ್ಯೆಯಲ್ಲಿ ಬಂದು ಭಾಗವಹಿಸುತ್ತಾರೆ.

## ೬.೧ ಹಬ್ಬ ಹರಿದಿನಗಳು

### ಯುಗಾದಿ ಹಬ್ಬದ ಆಚರಣೆ :

ಯುಗಾದಿ ದೇಶದಾದ್ಯಂತ ವರ್ಷದ ಮೊದಲ ದಿನವಾಗಿ ಆಚರಣೆಯಾಗುತ್ತದೆ. ಅದೇ ರೀತಿ ಮೈಲಾರದಲ್ಲಿಯೂ ಸಹ ಉತ್ಸವಾಚರಣೆಗಳು ನಡೆಯುತ್ತವೆ. ಪ್ರತಿಪದೆಯಂದು ಮೈಲಾರಲಿಂಗನ ದೇವಸ್ಥಾನದಿಂದ ಹಡದಿ ಹೊರಡುವ ಕಾರ್ಯಕ್ರಮವಿರುತ್ತದೆ. ಇದರಲ್ಲಿ ಬೆಳಗ್ಗೆ ಅಭಿಷೇಕ ಪೂಜೆಗಳಾದ ನಂತರ ವಾಲಗ ಸಮೇತರಾಗಿ ಪೂಜಾರಿಗಳು, ಒಡೆಯರು, ಗೊರವರು ಹಾಗೂ ಇತರ ಸೇವಕರು ಹೊರಟು ಊರಿನ ಎಲ್ಲಾ ದೇವಾಲಯಗಳಲ್ಲಿ ಪೂಜೆಸಲ್ಲಿಸಿ ಬರುವರು. ಪೂಜೆಗೆ ಬೇಕಾದ ಎಲ್ಲಾ ಸಾಮಗ್ರಿಗಳ ಜೊತೆಗೆ ಬೆಲ್ಲದ ಪುಡಿ ಹಾಗೂ ನವಣೆ ಹಿಟ್ಟಿನಿಂದ ಮಾಡಿದ ಮಿಶ್ರಣವನ್ನು (ಇದನ್ನು ಸಕ್ಕರೆ ಎಂದು ಕರೆಯುವರು) ತೆಗೆದುಕೊಂಡು ಹೋಗುವರು. ಇರುವೆಯ ಹುತ್ತಕಂಡಲ್ಲೆಲ್ಲ ಈ ಮಿಶ್ರಣವನ್ನು ಹಾಕುತ್ತ ಹೋಗುವರು.[4]

ಊರಲ್ಲಿರುವ ಮಳೆ ಮಲ್ಲಪ್ಪನ ಗುಡಿ, ದುರ್ಗಾದೇವಿ ಗುಡಿ, ಲಕ್ಷೀನರಸಿಂಹನ ಗುಡಿ ಹೀಗೆ ಎಲ್ಲ ಗುಡಿಗಳಿಗೂ ಪೂಜೆ ಸಲ್ಲಿಸಿದ ಮೆರವಣಿಗೆ ಪುನಃ ಮುಖ್ಯ ದೇವಸ್ಥಾನಕ್ಕೆ ಬರುತ್ತದೆ. ಅಂದು ನಡೆಯುವ ಪಡ್ಡಲಗಿ (ಹಡದಿ) ಸೇವೆ ದೀಪಾವಳಿಯ ಪ್ರತಿಯದೆಯಂದು ಮತ್ತೊಮ್ಮೆ ನಡೆಯುತ್ತದೆ. ಇತ್ತೀಚೆಗೆ ಆಗಸ್ಟ್ ೧೫ರಂದೂ ಸಹ ಈ ಸೇವೆಯನ್ನು ನಡೆಸಲಾಗುತ್ತದೆ.

### ಅಗೀ ಹುಣ್ಣಿವೆ :

ಯುಗಾದಿಯ ನಂತರ ಬರುವ ಎರಡನೆಯ ಹುಣ್ಣಿವೆಯನ್ನು (ಚಿತ್ರಾ ಪೌರ್ಣಿಮೆಯನ್ನು) ಅಗಿ ಹುಣ್ಣಿಮೆ ಎಂದು ಕರೆಯುವರು. ಇದು ಭಾಗಶಃ ಮಳೆಗಾಲದ ಆರಂಭದ ಕಾಲ. ಇದಕ್ಕೂ ರೈತ ವರ್ಗಕ್ಕೂ ಅವಿನಾಭಾವ ಸಂಬಂಧವಿರುವುದನ್ನು ನಾವು ಕಾಣಬಹುದು. ಇದೇ ಸಂದರ್ಭದಲ್ಲಿಯೇ ಮೈಲಾರಲಿಂಗನ ವಿವಾಹ ಮಹೋತ್ಸವವೂ ಜರುಗುತ್ತದೆ. ಹೀಗೆ ಈ ಸಂದರ್ಭದಲ್ಲಿ ಎರಡು ಪ್ರತ್ಯೇಕ ಆಚರಣೆಯ ಸಂಪ್ರದಾಯವನ್ನಿಲ್ಲಿ ನಾವು ಕಾಣಬಹುದು.

**ಅಗಿ ಹೊಯ್ಯುವುದು :**

ಅಗಿ ಹೊಯ್ಯುವುದು ಎಂದರೆ ನಾಟಿ ಮಾಡಲು ಬೇಕಾದ ರೀತಿಯಲ್ಲಿ ಧಾನ್ಯಗಳನ್ನು ಬೆಳೆಸುವುದು ಎಂದರ್ಥ. ಸಾಮಾನ್ಯವಾಗಿ ರೈತರು ಬೆಳೆಯುವ ಧಾನ್ಯಗಳಾದ ಜೋಳ, ಬತ್ತ, ರಾಗಿ, ಹೆಸರು, ನವಣೆ, ಕಡಲೆ, ಗೋಧಿ, ಎಳ್ಳು ಹಾಗೂ ಉದ್ದು ಈ ರೀತಿಯ ಒಂಬತ್ತು ಬಗೆಯ ಧಾನ್ಯಗಳನ್ನು ಆಯ್ದುಕೊಳ್ಳುವರು. ಅಗಿ ಹುಣ್ಣಿಮೆಗೂ ಹದಿನೈದು ದಿನ ಮುಂಚೆಯೇ ವೈಶಾಖ ಶುದ್ಧ ಪ್ರತಿಪದೆಯಂದು ತುಂಗಭದ್ರಾನದಿಯ ದಡದ ಮಣ್ಣನ್ನು ತಂದು ಗೊಬ್ಬರದೊಡನೆ ಸೇರಿಸಿ ಒಂಬತ್ತು ಹೊಸ ಮಡಿಕೆಗಳಲ್ಲಿ ಮೇಲಿನ ಧಾನ್ಯಗಳನ್ನು ತುಂಬಿ ನೀರುಹಾಕುತ್ತ ಬರುವರು. ಹುಣ್ಣಿಮೆಯ ಹೊತ್ತಿಗೆ ಈ ಧಾನ್ಯಗಳು ಮೊಳಕೆಯೊಡೆದು ನಾಟಿಕೊಂಡಿರುತ್ತವೆ. ಲಗ್ನದ ಉತ್ಸವಕ್ಕೆ ಬಂದ ಭಕ್ತಾದಿಗಳು ಈ ಒಂಬತ್ತು ಧಾನ್ಯಗಳಲ್ಲಿ ಯಾವುದು ಚೆನ್ನಾಗಿ ನಾಟಿಕೊಂಡಿರುವುದೋ ಆ ಬೆಳೆ, ಆ ವರ್ಷದಲ್ಲಿ ಸಮೃದ್ಧವಾಗಿ ಬರುವುದೆಂದು ನಂಬುವರು. ಅಂತೆಯೇ ತಮ್ಮ ಹೊಲಗಳಲ್ಲಿ ಅದೇ ಧಾನ್ಯವನ್ನು ಬಿತ್ತುವರು.

**ಲಗ್ನದ ಕಾರ್ಯಕ್ರಮ :**

ಇದನ್ನು ಭಾಗಶಃ ಜನಸಾಮಾನ್ಯರ ಮದುವೆಯ ಕಾರ್ಯಕ್ರಮದಂತೆಯೇ ರೂಪಿಸಲಾಗುತ್ತದೆ. ಹುಡುಗಿಯ ಜೊತೆ ನಿಶ್ಚಿತಾರ್ಥದಿಂದ ಹಿಡಿದು ನಾಗೋಲಿಯ ವರೆಗೂ ಎಲ್ಲ ಕಾರ್ಯಕ್ರಮಕ್ಕಾಗಿಯೇ ಮೈಲಾರದಲ್ಲಿ ಪ್ರತ್ಯೇಕ ಮನೆಯೂ ಇದೆ. ಈ ಮದುವೆಯ ಸಂದರ್ಭದಲ್ಲಿ ಒಡೆಯರು ಗಂಡಿನ ಬೀಗರಾದರೆ, ಪೂಜಾರಿಗಳು ಹೆಣ್ಣಿನ ಬೀಗರಾಗಿ ಕಾರ್ಯನಿರ್ವಹಿಸುತ್ತಾರೆ.

**ಸುರಗಿಯ ಕಾರ್ಯಕ್ರಮ :**

ಮದುವೆಯ ಕಾರ್ಯ ಆರಂಭವಾಗುವುದು ವೈಶಾಖ ಶುದ್ಧ ನವಮಿಯ ದಿನದಂದು. ಅಂದು ವಧೂವರರಿಗೆ ಕಂಕಣಕಟ್ಟಿ ಸುರಗಿಯ ನೀರು ಎರೆಯುವರು.

**ಅಕ್ಷತಾರೋಪಣ :**

ವೈಶಾಖ ಶುದ್ಧ ದ್ವಾದಶಿಯಂದು ಮೈಲಾರಲಿಂಗ ಹಾಗೂ ಗಂಗಿಮಾಳಮ್ಮನಿಗೆ ಅಕ್ಷತಾರೋಪಣ ಕಾರ್ಯಕ್ರಮವಿರುತ್ತದೆ. ಅಂದು ಸಂಜೆ ಗೋಧೂಳಿ ಮುಹೂರ್ತದಲ್ಲಿ

ಅಕ್ಕಿಕಾಳುಹಾಕುವ ಸಮಾರಂಭವಿರುತ್ತದೆ. ಇದಾದ ನಂತರ ದೇವಸ್ಥಾನದಲ್ಲಿ ಬಂದ ಭಕ್ತರಿಗೆ ಹಾಗೂ ಇತರ ಕೆಲಸದವರಿಗೆ ಮದುವೆಯೂಟದ ಏರ್ಪಾಡಾಗಿರುತ್ತದೆ. ಭಕ್ತರೇ ತಂದಂತಹ ಸಾಮಗ್ರಿಗಳಿಂದ ಮದುವೆಯೂಟದ ವ್ಯವಸ್ಥೆ ಮಾಡಲಾಗುತ್ತದೆ.

ಈ ಸಂದರ್ಭದಲ್ಲಿ ಬೇರೆ ಬೇರೆ ಕಡೆಗಳಿಂದ ಬಂದ ಸುಮಾರು ಅರವತ್ತರಿಂದ ಎಪ್ಪತ್ತು ಜನ ಗೊರವರು ಊರಲ್ಲಿಯ ಎಲ್ಲ ದೇವಸ್ಥಾನಗಳ ಮುಂದೆ ನಿಂತು ಗಂಟೆ, ಡಮರು ಬಾರಿಸಿ ದೇವತೆಗಳಿಗೆ ವಂದನೆ ಸಲ್ಲಿಸುವರು. ಇದನ್ನು ಬಾಗಿಲು ಕಾಯುವ ಸೇವೆ ಎಂದೂ ಕರೆಯುವರು. ಈ ರೀತಿ ಹರಕೆಹಾಕುವ ಕೆಲಸ ವೈಶಾಖದ ಅಮಾವಾಸ್ಯೆಯವರೆಗೂ ನಡೆಯುವುದು. ಅಂದಿನವರೆಗೂ ಊರಿನ ಜನರೇ ಈ ಗೊರವರ ಊಟೋಪಚಾರವನ್ನು ನೋಡಿಕೊಳ್ಳುವರು.

**ಓಕುಳಿ ಕಾರ್ಯಕ್ರಮ :**

ವೈಶಾಖ ಶುದ್ಧ ತ್ರಯೋದಶಿಯಂದು ಓಕುಳಿ ಕಾರ್ಯಕ್ರಮವಿರುತ್ತದೆ. ದೇವಸ್ಥಾನದ ಮುಂದೆ ಇರುವ ಹೊಂಡದಲ್ಲಿ ಓಕುಳಿ ಕಾರ್ಯಕ್ರಮ ಜರುಗುವುದು. ದೇವರ ಉತ್ಸವ ಮೂರ್ತಿಯನ್ನು ಪಲ್ಲಕ್ಕಿಯಲ್ಲಿ ತಂದು ಓಕುಳಿ ಹೊಂಡದ ಕಟ್ಟೆಯ ಮೇಲೆ ಸ್ಥಾಪಿಸುವರು. ನಂತರ ಹೊಂಡದಲ್ಲಿನ ಜೀರಿಗೆ, ಅರಿಷಿಣ, ಕುಂಕುಮಗಳನ್ನು ಬೆರೆಸಿ ಓಕುಳಿ ಸಿದ್ಧಪಡಿಸುವರು. ಈ ಓಕುಳಿಯನ್ನು ದೇವರಿಗೆ ಸಿಂಪಡಿಸಿ, ನೆರೆದ ಜನರಿಗೂ ಹಾಕುವರು.

ಓಕುಳಿಯ ಕಾರ್ಯಕ್ರಮವಾದ ನಂತರ ದೇವರನ್ನು ದಕ್ಷಿಣ ಭಾಗದ ನದಿಗೆ ಸ್ನಾನಕ್ಕಾಗಿ ಕರೆದುಕೊಂಡು ಹೋಗುವರು. ಅಲ್ಲಿ ನದಿಯ ದಂಡೆಯ ಮೇಲೆ ಪಲ್ಲಕ್ಕಿಯನ್ನಿಟ್ಟು ನದೀ ನೀರಿನಿಂದ ಅಭಿಷೇಕಮಾಡುವರು. ನಂತರ ಕರಿಯಾಲಕ್ಕೆ ಬಂದು ಅಲ್ಲಿನ ಶಿಬಾರದ[5] ಬಳಿ ತಂದು ಕೂರಿಸುವರು. ಅಲ್ಲಿ ಮಂಗಳಾರತಿಯಾದ ನಂತರ ದೇವರನ್ನು ಉತ್ಸವದಲ್ಲಿ ದೇವಾಲಯಕ್ಕೆ ಕರೆತರುವರು.

**ಶಯ್ಯಾ ಪ್ರವೇಶ :**

ಅಂದಿನ ರಾತ್ರಿ ಸುಮಾರು ಒಂಬತ್ತು ಗಂಟೆಯ ಹೊತ್ತಿಗೆ ದೇವರ ಪಲ್ಲಕ್ಕಿ ಹೊರಟು ದೇವರ ವಿಗ್ರಹಗಳನ್ನು (ಉತ್ಸವ ಮೂರ್ತಿಗಳನ್ನು) ಮಂಚದ ಮೇಲೆ ಸ್ಥಾಪಿಸಿ ಬಾಗಿಲು ಹಾಕುವರು. ಇಲ್ಲಿಗೆ ಮದುವೆಯ ಕಾರ್ಯಕ್ರಮಗಳು ಸಮಾಪ್ತವಾಗುತ್ತವೆ.

**ನವರಾತ್ರಿ ಆಚರಣೆ :**

ನವರಾತ್ರಿಯ ಆಚರಣೆಯು ಮಹಾಲಯ ಅಮಾವಾಸ್ಯೆಯ ಮರುದಿನ, ಅಂದರೆ ಪ್ರತಿಪದೆಯಂದು ಆರಂಭವಾಗುತ್ತದೆ. ಅಂದು ಘಟಸ್ಥಾಪನೆಯ ಕಾರ್ಯಕ್ರಮವಿರುತ್ತದೆ. ಅಂದಿನಿಂದ ಮುಂದಿನ ಒಂಬತ್ತು ದಿನಗಳ ವರೆಗೆ ದೇವರಿಗೆ ಪಲ್ಲಕ್ಕಿಸೇವೆ ನೆರವೇರುತ್ತದೆ.

**ಖಂಡೇಪೂಜೆ :** ಖಡ್ಗದ ಪೂಜೆಯನ್ನು ಜನಪದರು ಖಂಡೇಪೂಜೆ ಎಂದು ಕರೆಯುವರು. ಈ ದಿನ ಉತ್ಸವ ಮೂರ್ತಿಯನ್ನು ನದೀ ಸ್ನಾನಕ್ಕೆ ಕರೆದೊಯ್ಯುವರು. ನಂತರದಲ್ಲಿ ಕರಿಯಾಲದಲ್ಲಿ ಮಂಗಳಾರತಿ ಕಾರ್ಯಕ್ರಮವಿರುತ್ತದೆ. ಅದೇ ರೀತಿ ಪಲ್ಲಕ್ಕಿ ಕಪಿಲಮುನಿ ಸಿಂಹಾಸನಕ್ಕೆ ಬರುತ್ತದೆ. ಅಲ್ಲಿಯೂ ಆರತಿ ಬೆಳಗುವ ಕಾರ್ಯಕ್ರಮ ಜರುಗುತ್ತದೆ.

**ವಿಜಯ ದಶಮಿ :** ವಿಜಯ ದಶಮಿಯಂದು ಬನ್ನಿ ಮುಡಿಯುವ ಕಾರ್ಯಕ್ರಮ ವಿರುತ್ತದೆ. ಇದಕ್ಕೆ ಉತ್ತರ ಕರ್ನಾಟಕದಲ್ಲಿ ವಿಶೇಷ ಮಹತ್ವವಿದೆ. ವಿಜಯದ ಸಂಕೇತವಾಗಿ ಬನ್ನಿ ಮರದ ಬಳಿ ಹೋಗಿ ಕಾಳಿಯನ್ನು ಪೂಜಿಸಿ ಬನ್ನಿಯನ್ನು ತರುವರು. ನಂತರ ಊರ ಹೊರಗಿನ ಶಿಬಾರಕ್ಕೆ ಹೋಗಿ ಬನ್ನಿ ಮುಡಿದು ಬರುವರು.

**ಕುದುರೆಯ ಹಬ್ಬ :**

ಶೀಗಿ ಹುಣ್ಣಿಮೆಯ ನಂತರದ ಏಳನೆಯ ದಿನ ಕುದುರೆಯ ಹಬ್ಬವನ್ನು ಆಚರಿಸುವರು. ಕುದುರೆಯ ಹಬ್ಬದ ಉತ್ಸವದ ಹಿಂದೆ ಪೌರಾಣಿಕ ಕಥೆಯಿದ್ದರೂ ಅದರ ಜೊತೆಗೆ ಜನಪದ ಕಥೆಯೊಂದು ಮೇಳೈಸಿ ವಿಶಿಷ್ಟ ಅರ್ಥ ನೀಡಿದೆ. ಮೈಲಾರಲಿಂಗನು ಅಂದು ಹುಲಿಯ ಬೇಟೆಗೆಂದು ಹೊರಟ ಸಂದರ್ಭವನ್ನು ಈ ಹಬ್ಬ ಹೇಳುವುದಾದರೂ ಅದರ ನಿಜವಾದ ಉದ್ದೇಶ ಕುರುಬತಿಯ ಮನೆಗೆ ಹೋಗುವುದು ಎಂಬುದು ಜನಪದರ ನಂಬಿಕೆ. ಹೀಗಾಗಿ ಎರಡೆರಡು ಅಂಶಗಳು ಮೇಳೈಸಿದ ಈ ಹಬ್ಬ ನಿಜಕ್ಕೂ ಸ್ವಾರಸ್ಯಕರ ಉತ್ಸವ.

ಈ ದಿನ ಹುಲಿ ಬೇಟೆಗೆಂದು ಸಿದ್ಧನಾದ ಮಲ್ಲಯ್ಯನ ಉತ್ಸವ ಮೂರ್ತಿಯನ್ನು ಕಟ್ಟಿಗೆಯ ಕುದುರೆಯೊಂದರ ಮೇಲೆ ಬಿಗಿದು ಕಟ್ಟಿ ಆ ಕುದುರೆಯನ್ನು ಚಿಕ್ಕ ಬಂಡಿಯ ಮೇಲೆ ಬಿಗಿಯಾಗಿ ಕಟ್ಟುವರು. ಈ ಬಂಡಿಯ ಹಿಂದೆಯೇ ಇನ್ನೊಂದು ಉತ್ಸವ ಮೂರ್ತಿಯನ್ನು ಇರಿಸಿದ ಪಲ್ಲಕ್ಕಿಯನ್ನು ತೆಗೆದುಕೊಂಡು ಹೋಗುವರು. ಕುದುರೆಯನ್ನು

ಕಟ್ಟಿದ ಬಂಡಿಯನ್ನು ಎಳೆಯುತ್ತ ಊರ ಹೊರಗಿನ ಶಿಬಾರಕ್ಕೆ ಹೋಗಿ ಅಲ್ಲಿಂದ ಕುರುಬತೆವ್ವನ ಸ್ಥಾನಕ್ಕೆ ಬಂಡಿಯನ್ನು ತೆಗೆದುಕೊಂಡು ಹೋಗುವರು. ಈ ಸಂದರ್ಭದಲ್ಲಿ ನೇರ ದಾರಿಯಲ್ಲಿ ಹೋಗದೇ ಬದಿಯ ಹೊಲಗಳಲ್ಲಿ ರಭಸದಿಂದ ಓಡಾಡುತ್ತ ಹೋಗುತ್ತದೆ. ಹೊಲಗಳಲ್ಲಿ ಬೆಳೆ ಬೆಳೆದು ನಿಂತಿದ್ದರೂ ಅದನ್ನು ಲೆಕ್ಕಿಸದೇ ನಿಯಂತ್ರಣವಿಲ್ಲದ ಕುದುರೆ ಓಡುವ ರೀತಿಯಲ್ಲಿಯೇ ಈ ಉತ್ಸವ ಓಡುತ್ತದೆ. ನಂತರ ಕುರುಬತ್ತೆವ್ವನ ಸ್ಥಾನದಲ್ಲಿ ದೇವರಿಗೆ ಮಂಗಳಾರತಿಯಾಗುತ್ತದೆ. ಇಲ್ಲಿ ಒಡೆಯರು ಮೂರು ಬಾಣಗಳನ್ನು ಬಿಡುತ್ತಾರೆ. ಇದನ್ನು ಹುಲಿ ಹೊಡೆಯುವುದು ಎಂದು ಹೇಳುತ್ತಾರೆ.

ಇದೇ ಸಂದರ್ಭದಲ್ಲಿ ಮೈಲಾರಕ್ಕೆ ಹತ್ತಿರವಿರುವ ಸೋಮಲಿಂಗನ ದೇವಸ್ಥಾನದ[5] ಪಲ್ಲಕ್ಕಿಯೂ ಇದೇ ಸ್ಥಾನಕ್ಕೆ ಬರುತ್ತದೆ. ಹಿಂದೆಯೂ ಇದೇ ರೀತಿ ಮಲ್ಲಯ್ಯ ಕುರುಬತ್ತೆವ್ವನ ಬಳಿ ಬಂದಾಗ ಅಲ್ಲಿಗೆ ಬಂದ ಸೋಮಲಿಂಗ ಇದನ್ನು ನೋಡುತ್ತಾನೆ. ಈ ವಿಷಯವನ್ನು ತನ್ನ ಪಟ್ಟದರಸಿ ಗಂಗಮ್ಮನಿಗೆ ಹೇಳಬಾರದೆಂದು ಮಲ್ಲಯ್ಯ ಅವನಿಗೆ ಸ್ವಲ್ಪ ಹಣ ಕೊಡುತ್ತಾನೆ. ಅದನ್ನು ಪಡೆದ ಸೋಮಲಿಂಗ ಅಲ್ಲಿಂದಲೇ ತನ್ನ ಸ್ಥಾನಕ್ಕೆ ಹೊರಟು ಹೋಗುತ್ತಾನೆ. ಆದರೆ ಅದು ಹೇಗೋ ಈ ವಿಚಾರ ಗಂಗಿಮಾಳವ್ವನಿಗೆ ಗೊತ್ತಾಗುತ್ತದೆ. ಅವಳು ಮೈಲಾರನನ್ನು ತನ್ನ ಬಳಿಗೆ ಬರಲು ಬಿಡುವುದಿಲ್ಲ. ಇದೇ ಘಟನೆಯ ನೆನಪಿಗಾಗಿ ಈಗಲೂ ಸಹ ಸೋಮಲಿಂಗನ ಪಲ್ಲಕ್ಕಿ ಕುರುಬತ್ತೆವ್ವನ ಗುಡಿಯ ಬಳಿ ಬರದೇ ಅಲ್ಲಿಂದಲೇ ದಕ್ಷಿಣೆ ಪಡೆದು, ದಾರಿಯಿಂದಲೇ ಹೊರಟುಹೋಗುತ್ತದೆ[6].

ಕುರುಬತ್ತೆವ್ವನ ದೇವಸ್ಥಾನದಿಂದ ಉತ್ಸವ ಮೈಲಾರಲಿಂಗನ ದೇವಸ್ಥಾನಕ್ಕೆ ಮರಳಿ ಬರುತ್ತದೆ. ಆದರೆ ಇದೇ ವೇಳೆಗೆ ಸೋಮಲಿಂಗ ಹೇಳದಿದ್ದರೂ ಅದು ಹೇಗೋ ಈ ವಿಷಯ ಗಂಗೆಗೆ ತಿಳಿದು ಬಿಡುತ್ತದೆ. ಸೋಮಲಿಂಗನೇ ಹೇಳಿದ್ದಾನೆಂದು ಮೈಲಾರ ಭಾವಿಸಿ ಅವನ ಮೇಲೆ ಕೋಪಗೊಳ್ಳುತ್ತಾನೆ. ಬಹುಶಃ ಈ ಕಾರಣದಿಂದಲೇ ಈಗಲೂ ಸೋಮಲಿಂಗನ ಸಂಪ್ರದಾಯವಿರುವವರು ಮೈಲಾರದ ಕಾರಣಿಕದಲ್ಲಿ ಭಾಗವಹಿಸುವುದಿಲ್ಲ.

ಅವಳು ತನ್ನ ಅರಮನೆಯ ಎಲ್ಲಾ ಏಳೂ ಬಾಗಿಲುಗಳನ್ನು ಮುಚ್ಚಿಬಿಡುವಳು. ಮೈಲಾರ ಎಷ್ಟು ವಿನಂತಿಸಿಕೊಂಡರೂ ಅವಳು ಬಾಗಿಲುತೆಗೆಯುವುದಿಲ್ಲ. ಬಾಗಿಲು ತೆರೆ

ಎಂದರೆ, ಅವಳು ಚಿಕ್ಕಯ್ಯ, ಜುಂಜಯ್ಯರು ತೊಡೆಯ ಮೇಲೆ ಮಲಗಿದ್ದಾರೆ ಎಂದು ಹೇಳುತ್ತಾಳೆ. ಜೊತೆಗೇ ತನ್ನ ಸವತಿಯ ಬಗ್ಗೆ ಕೋಪವನ್ನು ವ್ಯಕ್ತಪಡಿಸುತ್ತಾಳೆ. ಕೊನೆಗೆ ಕೀಳು ಕುಲದವಳ ಮನೆಗೆ ಹೋಗಿ ಬಂದಿದ್ದಾನೆ. ಅದಕ್ಕಾಗಿ ತಪ್ಪೊಪ್ಪಿಗೆ ಕೇಳಬೇಕು, ಅಂದರೆ ಮಾತ್ರ ಬಾಗಿಲು ತೆಗೆಯುತ್ತೇನೆ ಎಂದು ಹೇಳುತ್ತಾಳೆ.[7] ಆಗ ಮೈಲಾರನ ಜೊತೆ ಉತ್ಸವಕ್ಕೆ ಹೋದವರೆಲ್ಲ ದೇವಿಯ ಮೂರ್ತಿಯ ಮುಂದೆ ನಿಂತು ತಪ್ಪಾಯಿತು ಎಂದು ಹೇಳಿ ದೇವಿಗೆ ನಮಸ್ಕರಿಸುತ್ತಾರೆ. ಆಗ ದೇವರ ಉತ್ಸವಮೂರ್ತಿಗೆ ಒಳಗೆ ಹೋಗುವ ಅವಕಾಶ ನೀಡಲಾಗುತ್ತದೆ. ನಂತರ ಉತ್ಸವ ಮೂರ್ತಿಯನ್ನು ದೇವಸ್ಥಾನದಲ್ಲಿ ಪ್ರತಿಷ್ಠಾಪಿಸಿ ಮುಖ್ಯ ಸ್ವಯಂಭೂ ಲಿಂಗಕ್ಕೆ ಅಭಿಷೇಕಾದಿಗಳನ್ನು ನೆರವೇರಿಸುವರು.

ಈ ಸಂದರ್ಭದಲ್ಲಿ ಉತ್ಸವ ಮರುಳಿ ಬರುವಾಗ
ಬ್ಯಾಡೋ ಬ್ಯಾಡೋ ಕುರುಬತಿ ಸಂಗ
ಮೈಲಾರ ಲಿಂಗ......
ಬ್ಯಾಡೋ ಬ್ಯಾಡೋ ಶೀಲವತಿ ಸಂಗ

ಎಂದು ಹಾಡುವುದು ವಾಡಿಕೆ.

**ಭಂಡಾರ ಛಟ್ಟಿ :**

ಶಿವನು ಭೂಲೋಕದಲ್ಲಿ ಅವತರಿಸಿದ ದಿನವನ್ನು ಛಟ್ಟಿ ಹಬ್ಬ[8] ಎಂದು ಕರೆಯುವರು. ಇದನ್ನು ಭಂಡಾರ ಷಷ್ಠಿ ಎಂದೂ ಕರೆಯುವರು. ಆ ದಿನ ರವಿವಾರ. (ಆದ್ದರಿಂದಲೇ ಮೈಲಾರನ ಭಕ್ತರಿಗೆ ರವಿವಾರ ಪವಿತ್ರ ದಿನ) ಅಂದಿನ ರಾತ್ರಿ ಶತತಾರಾ ನಕ್ಷತ್ರದಲ್ಲಿ ಶಿವನ ಅವತರಿಸಿದನೆಂದು ಜನ ನಂಬುತ್ತಾರೆ. ಇದೇ ದಿನ ಅವನ ಜೊತೆಗೆ ಭಂಡಾರವೂ ಹುಟ್ಟಿತ್ತಂತೆ. ಆದ್ದರಿಂದ ಒಡೆಯರಿಂದ ಭಂಡಾರ ಪೂಜೆಯೂ ನಡೆಯುತ್ತದೆ. ಇದನ್ನು ಕಿರುದೀಪಾವಳಿ ಎಂದು ಕರೆಯುವುದೂ ವಾಡಿಕೆ.

ಷಷ್ಠಿಯಂದು ಐದು ಜನ ಮುತ್ತೈದೆಯರು ಉಪವಾಸಮಾಡುವರು. ನದೀ ಸ್ನಾನ ಮಾಡಿಕೊಂಡು ಬಂದು, ಅರಿಷಿನ ಕೊಂಬುಗಳನ್ನು ತೆಗೆದುಕೊಂಡು ಕುಟ್ಟುವರು. ಅದರಲ್ಲಿ ಕರಿಯೇಳಿ (ಕುರಿಯ ಉಣ್ಣೆ), ಬಂಗಾರ, ಬೆಳ್ಳಿ, ಮುತ್ತು, ವಜ್ರ, ಹವಳ ಮೊದಲಾದ ಪಂಚ ರತ್ನಗಳನ್ನು ಸೇರಿಸುವರು.

ಅರಿಷಿನ ಕೊಂಬುಗಳನ್ನು ಕುಟ್ಟುವ ಕಾರ್ಯದ ಹಿಂದೆ ಒಂದು ಪೌರಾಣಿಕ ಕಥೆಯಿದೆ. ಮಣಿಕ ಮಲ್ಲರ ಮರ್ದನಕ್ಕೆ ಶಿವನು ಮಾರ್ತಾಂಡ ಭೈರವನ ಅವತಾರ ತಾಳಿ ಸಿದ್ಧನಾದನು. ಅದಕ್ಕಾಗಿ ಮಾನಸಿಕ ಸಿದ್ಧತೆಯ ಅವಶ್ಯಕತೆಯಿದ್ದಿತು. ಆದ್ದರಿಂದ ಶಿವನು ತನ್ನ ವಾಹನವಾದ ಪರಮ ಪ್ರತಾಪಿ ನಂದಿಯ ಕೊಂಬುಗಳನ್ನು ಭಂಡಾರದಂತೆ ತೇಯ್ದು ತನಗೆ ಲೇಪಿಸುವಂತೆ ವಿಷ್ಣುವಿಗೆ ಅಪ್ಪಣೆಮಾಡಿದನು. ಶಿವನ ಆಜ್ಞೆಯಂತೆ ವಿಷ್ಣುವು ನಂದಿಯ ಕೊಂಬುಗಳನ್ನು ಮುರಿದು ಅಗ್ನಿಸೂಕ್ತದೊಡನೆ ತೇಯ್ದು ಶಿವನಿಗೆ ಲೇಪಿಸುತ್ತಾನೆ. ಆಗ ಶಿವನಲ್ಲಿ ಕೋಟಿ ಸೂರ್ಯರ ಶಕ್ತಿ ಬರುತ್ತದೆ. ಕ್ಷಣಾರ್ಧದಲ್ಲಿ ಬ್ರಹ್ಮಾಂಡವನ್ನೇ ಭಸ್ಮಮಾಡುವ ಶಕ್ತಿ ಲಭಿಸುತ್ತದೆ.[9]

ಈ ರೀತಿ ಅರಿಷಿನ ಕೊಂಬುಗಳನ್ನು ಕುಟ್ಟಿಯಾದ ಬಳಿಕ ಬೀಸುವ ಕಲ್ಲಿನಲ್ಲಿ ಅದನ್ನು ಸಣ್ಣಗೆ ಬೀಸುತ್ತಾರೆ. (ಚಿತ್ರ – ೪) ನಂತರ ಅದನ್ನು ಗುಂಡುಗಳಿಂದ ಅರೆದು ಇನ್ನೂ ಸಣ್ಣಗೆ ಪುಡಿ ಮಾಡುತ್ತಾರೆ. ನಂತರ ಈ ಪುಡಿಯನ್ನು ಒಂದು ತಟ್ಟೆಯಲ್ಲಿಟ್ಟು ಹೂಗಳಿಂದ ಅಲಂಕರಿಸುವರು. ಸಂಜೆ ಸುಮಾರು ಏಳು ಗಂಟೆಗೆ ವಾಲಗದವರೊಡನೆ ಕೂಡಿ ಸಕಲ ವೈಭವದೊಡನೆ ಭಕ್ತರೊಡಗೂಡಿ ಸಪತ್ನಿಕರಾಗಿ ಒಡೆಯರು ಮೈಲಾರಲಿಂಗನ ದೇವಸ್ಥಾನಕ್ಕೆ ಆಗಮಿಸುವರು. ಅಲ್ಲಿಗೆ ಬರುವಾಗ ಭಕ್ತರು ದಾರಿಗುಂಟ ಅವರಿಗೆ ಹಡದಿ (ಮಡಿಬಟ್ಟೆ) ಹಾಸುವರು. ಗೊರವರು ತಮ್ಮ ವಾದ್ಯಗಳಾದ ಪಾರಿ, ಗಂಟೆ, ಡಮರು ಮೊದಲಾದವನ್ನು ಬಾರಿಸುತ್ತ ಬರುವರು. ದೇವಸ್ಥಾನದಲ್ಲಿ ಕುದುರೆಪ್ಪನ ಮುಂದೆ ಭಂಡಾರದ ತಟ್ಟೆಯನ್ನಿಟ್ಟು ಹೂಗಳಿಂದ ಕುದುರೆ ಮೊದಲಾದವನ್ನು ಪೂಜಿಸುವರು. ಒಂದು ಬಟ್ಟಲಿನಲ್ಲಿ ಭಂಡಾರ ತೆಗೆದು ಮಂಟಪದಲ್ಲಿ ಅರ್ಪಿಸುವರು. ನಂತರದಲ್ಲಿ ಗಂಗಿಮಾಳವ್ವನ ಗುಡಿಗೆ ಬಂದು ದೇವಿಗೆ ನಮಸ್ಕರಿಸಿ ಮೈಲಾರನ ಗುಡಿಗೆ ಪ್ರದಕ್ಷಣೆಹಾಕುವರು. ನಂತರ ಅಲ್ಲಿನ ಮುಖ್ಯ ದೇವಾಲಯದಲ್ಲಿ ಪ್ರವೇಶಿಸಿ ಸ್ವಯಂಭೂಲಿಂಗಕ್ಕೆ ಭಂಡಾರದಿಂದ ಪೂಜಿಸುವರು. ಪೂಜಾರಿಗಳು ಮಲ್ಲಾರಿ ಸಹಸ್ರನಾಮ ಹೇಳುತ್ತ ಹೋದಂತೆ ಒಡೆಯರು ತಮ್ಮ ಪತ್ನಿಯೊಡನೆ ಸೇರಿ ಮುಷ್ಟಿ ಮುಷ್ಟಿ ಭಂಡಾರವನ್ನು ಲಿಂಗದ ಮೇಲೆ ಅರ್ಪಿಸುತ್ತಾರೆ. (ಚಿತ್ರ – ೫) ನಡುನಡುವೆ ಮೃಣ್ಮಯ ಮೂರ್ತಿಗೂ ಭಂಡಾರವನ್ನು ಅರ್ಪಿಸುವರು. ಸಹಸ್ರನಾಮ ಮುಗಿಯುವುದರಲ್ಲಿ ತಟ್ಟೆಯಲ್ಲಿನ ಭಂಡಾರ ಪೂರ್ಣ ಬರಿದಾಗಿರುತ್ತದೆ. ಆ ವೇಳೆಗೆ ಒಂದು ಸಾವಿರ ಹಿಡಿಯಷ್ಟು ಭಂಡಾರ ಶಿವನಿಗೆ

ಅರ್ಪಿತವಾಗಿರುತ್ತದೆ. ಈ ಸಂದರ್ಭದಲ್ಲಿ ಒಡೆಯರ ಜೊತೆಗೆ ಭಕ್ತರೂ ಸಹ ಭಂಡಾರ ಅರ್ಪಿಸುವರು. (ಚಿತ್ರ – ೬) ಭಂಡಾರ ಅರ್ಪಣೆಯಾದ ನಂತರದಲ್ಲಿ ಮಂಗಳಾರತಿ ಮಾಡಿ, ತೆಂಗಿನ ಕಾಯಿಗಳನ್ನು ಅರ್ಪಿಸುವರು. ದೇವರಿಗೆ ಹೂರಣದ ನೈವೇದ್ಯವಾಗುವುದು.

ನಂತರದಲ್ಲಿ ಕಪಿಲ ಮುನಿ ಸಿಂಹಾನವಿರುವ ಸ್ಥಳಕ್ಕೆ ಬರುತ್ತಾರೆ. ಅಲ್ಲಿ ಕರಿಯ ಕಂಬಳಿಯ ಗದ್ದಿಗೆ ಹಾಸಿ, ಅದರ ಮೇಲೆ ಭಂಡಾರದಿಂದ ತ್ರಿಶೂಲ ಬರೆದು ಭಂಡಾರ ಏರಿಸಿ ಆರತಿಮಾಡುವರು. ನಂತರ ಎಲ್ಲ ದೇವರುಗಳಿಗೆ ನೈವೇದ್ಯವಾಗುವುದು. ಈ ಎಲ್ಲ ಕಾರ್ಯಗಳಾದ ನಂತರ ಗರ್ಭಗುಡಿಗೆ ಬೀಗಹಾಕುವರು. ಅದನ್ನು ಬೆಳಗಿನವರೆಗೆ ಯಾರೂ ತೆಗೆಯುವಂತಿಲ್ಲ.

ಇದೆಲ್ಲ ಆದ ಬಳಿಕ ಒಡೆಯರು ತಮ್ಮ ಮನೆಗೆ ಹೊರಡುವರು. ದಾರಿಯಲ್ಲಿ ಕಂಚಾವೀರರು ಅವರಿಗೆ ಖಡ್ಗ ಹೇಳುವರು. ಅದರಲ್ಲಿ ಒಂದನ್ನು ಕಂಚಾವೀರರ ಸ್ಥಾನದಲ್ಲಿ ಹೇಳಿದರೆ ಇನ್ನೊಂದನ್ನು ಕಾರ್ತೀಕ ದೀಪ ಹಚ್ಚಿದ ನಂತರ ಹೇಳುವರು. ಮೈಲಾರದಲ್ಲಿ ಅಂದಿನದೇ ಕೊನೆಯ ಕಾರ್ತೀಕವಾಗಿರುತ್ತದೆ. ಕಾರ್ತೀಕ ದೀಪ ಹಚ್ಚಿದ ನಂತರ ಎಲ್ಲರೂ ಊಟಮಾಡಿ ಮಲಗುವರು.

ಮಾರನೆಯ ದಿನ ಸೂರ್ಯೋದಯವಾಗುವ ಮೊದಲು ಮತ್ತೆ ವಾಲಗ ಸಮೇತ ಒಡೆಯರು, ಭಕ್ತರು ಹಾಗೂ ಗೊರವರೆಲ್ಲ ಸೇರಿ ಗರ್ಭಗೃಹದ ಬೀಗವನ್ನು ತೆಗೆಯುವರು. ರಾತ್ರಿ ಒಟ್ಟಿದ ಭಂಡಾರದ ರಾಶಿ ಬೆಳಗಾಗುವಷ್ಟರಲ್ಲಿ ಎರಡು ಭಾಗವಾಗಿ ಸೀಳಿರುತ್ತದೆ. ಇದನ್ನೇ ಭಂಡಾರ ಒಡೆಯುವುದು ಎಂದು ಹೇಳುತ್ತಾರೆ. ದೇವರು ಈ ರೀತಿಯ ಪೂಜೆ ಯಿಂದ ಸಂತೃಪ್ತನಾಗಿದ್ದಾನೆಂದು ಜನ ಭಾವಿಸುತ್ತಾರೆ. ಕೆಲವು ಬಾರಿ ಈ ಭಂಡಾರದ ರಾಶಿಯ ಮೇಲೆ ಹಸ್ತ, ಪಾದ, ಕುದುರೆಯ ಹೆಜ್ಜೆ ಮೊದಲಾದವು ಮೂಡಿರುತ್ತವೆ ಎಂದು ಸ್ಥಳೀಯರು ಹೇಳುತ್ತಾರೆ.

ನಂತರದಲ್ಲಿ ಭಂಡಾರದ ರಾಶಿಗೆ ಪೂಜೆಮಾಡಿ ಕಾಯಿಒಡೆದು ನೈವೇದ್ಯ ಮಾಡುತ್ತಾರೆ. ಆಮೇಲೆ ಭಂಡಾರವನ್ನು ತಟ್ಟೆಯಲ್ಲಿ ತುಂಬಿಕೊಂಡು, ಕಪಿಲ ಮುನಿ ಸಿಂಹಾಸನಕ್ಕೆ ತೆಗೆದುಕೊಂಡು ಬರುತ್ತಾರೆ. ಅಲ್ಲಿ ಸಿಂಹಾಸನ ಪೂಜೆಮಾಡಿ, ಒಡೆಯರು ಅದರ ಮೇಲೆ ಕುಳಿತುಕೊಳ್ಳುತ್ತಾರೆ. ಆಮೇಲೆ ದೇವಸ್ಥಾನದ ಬಾಬುದಾರರಿಗೆ ಹಾಗೂ

ಪ್ರಮುಖ ಭಕ್ತರಿಗೆ ಭಂಡಾರವನ್ನು ಪ್ರತ್ಯೇಕವಾಗಿ ತೆಗೆದಿಟ್ಟು, ಉಳಿದ ಭಂಡಾರವನ್ನು ಭಕ್ತರಿಗೆ ಹಂಚುವರು. ಇದೇ ಭಂಡಾರವನ್ನು ಮುಂದಿನ ಛಟ್ಟಿಯವರೆಗೂ ಬಳಸುವುದು ವಾಡಿಕೆ. ಈ ಮೊದಲು ಊರವರು ವಾಲಗ ಸಮೇತರಾಗಿ ಒಡೆಯರನ್ನು ತಮ್ಮ ಮನೆಗಳಿಗೆ ಕರೆದುಕೊಂಡು ಹೋಗಿ ಭಂಡಾರವನ್ನು ಪಡೆಯುತ್ತಿದ್ದರಂತೆ. ಆದರೆ ಈಗ ಈ ವ್ಯವಸ್ಥೆ ಅಲ್ಲಿ ಕಂಡುಬರುವುದಿಲ್ಲ.

ಭಂಡಾರ ಷಷ್ಠಿಯಲ್ಲಿ ಮೈಲಾರಕ್ಕೆ ಬರಲಾಗದ ಭಕ್ತರು ತಮ್ಮ ಮನೆಗಳಲ್ಲಿಯೇ ಭಂಡಾರದ ಪೂಜೆಮಾಡಿ, ಅದನ್ನು ದೇವರಿಗೆ ಅರ್ಪಿಸಿ, ನಂತರ ತಾವು ಬಳಸುವರು.

**ಧನುರ್ಮಾಸ :**

ಕರ್ನಾಟಕದಲ್ಲಿ ಧನುರ್ಮಾಸಕ್ಕೆ ವಿಶೇಷ ಸ್ಥಾನವಿದೆ. ಈ ಸಂದರ್ಭದಲ್ಲಿ ಬೆಳಗಿನ ಜಾವದಲ್ಲಿಯೇ ಪೂಜೆ, ಪುನಸ್ಕಾರಗಳು ನೆರವೇರುವುವು. ಮೈಲಾರದಲ್ಲಿಯೂ ಇದೇ ರೀತಿ ಧನುರ್ಮಾಸದಲ್ಲಿ ಪ್ರತಿದಿನ ಬೆಳಗಿನ ಜಾವದಲ್ಲಿಯೇ ಮೈಲಾರಲಿಂಗನಿಗೆ ಅಭಿಷೇಕ, ಮಂಗಳಾರತಿ, ನೈವೇದ್ಯಗಳನ್ನು ಸಮರ್ಪಿಸಿ, ಎಲ್ಲರೂ ಊಟಮಾಡುತ್ತಾರೆ. ಈ ಸಂದರ್ಭದಲ್ಲಿ ನವಣೆಯ ಅಕ್ಕಿ ಹಾಗೂ ಹೆಸರು ಬೇಳೆಯನ್ನು ಕೂಡಿಸಿ ಕುದಿಸಿದ ಹುಗ್ಗಿ ಎಂಬ ವಿಶೇಷ ಪ್ರಸಾದವನ್ನು ನೈವೇದ್ಯ ಮಾಡುತ್ತಾರೆ. ಧನುರ್ಮಾಸದಲ್ಲಿ ಹೊನ್ನವರೆಯ ಹೂವಿನಿಂದ ಮಾತ್ರ ದೇವರ ಪೂಜೆಮಾಡುವುದು ಇಲ್ಲಿನ ಇನ್ನೊಂದು ವಿಶೇಷ.

**ಬನದ ಹುಣ್ಣಿಮೆ :**

ಈ ಹುಣ್ಣಿಮೆಯನ್ನು ಮುದ್ದಿ ಹುಣ್ಣಿಮೆ ಎಂದು ಕರೆಯುವುದೂ ವಾಡಿಕೆ. ಹೊಸದಾಗಿ ಬೆಳೆದ ಕಾಳುಗಳಿಂದ ಮುದ್ದೆ, ಸಾರು ಮಾಡಿ ದೇವರಿಗೆ ನೈವೇದ್ಯ ಮಾಡುವರು. ಜೋಳದ ಹಿಟ್ಟಿನಿಂದ ಮುದ್ದೆ ಮಾಡಿ, ಅದಕ್ಕೆ ವಿವಿಧ ರೀತಿಯ ಕಾಳುಗಳಿಂದ ಸಾರನ್ನು ಮಾಡಿ ದೇವರಿಗೆ ಅರ್ಪಿಸುತ್ತಾರೆ. ನಂತರ ಬಂದ ಭಕ್ತರಿಗೆಲ್ಲ ಅದನ್ನು ಹಂಚುವರು. ಇದನ್ನು ಕುರುಡ-ಕುಂಟರಿಗೆ ಅನ್ನಹಾಕುವುದು ಎಂದೂ ಕರೆಯುತ್ತಾರೆ. ಈ ಸಂದರ್ಭದಲ್ಲಿ ಮೈಲಾರಕ್ಕೆ ಬಂದ ಭಕ್ತರೂ ಸಹ ಮುದ್ದೆ ಸಾರಿನ ಎಡೆ ಮಾಡಿ ಗೊರವರಿಗೆ ದೋಣಿ ತುಂಬಿಸಿ, ದಕ್ಷಿಣೆ ಕೊಡುತ್ತಾರೆ. ಬಳಿಕ ದೋಣಿಗೆ ಹಾಕಿದ ಮುದ್ದೆಯಲ್ಲಿ ಸ್ವಲ್ಪ ಭಾಗವನ್ನು ಭಕ್ತರು ಹಿಂದಕ್ಕೆ ಪಡೆಯುತ್ತಾರೆ. (ಎಲ್ಲ ಸಂಪ್ರದಾಯದವರೂ ಇದನ್ನು ಮಾಡುವರು)

ಇದನ್ನು ಹುಲುಸು ಎಂದು ಕರೆಯುವರು. ನಂತರದಲ್ಲಿ ಈ ಹುಲುಸು ಹಾಗೂ ದೇವಸ್ಥಾನದ ಭಂಡಾರ ಎರಡನ್ನೂ ಸೇರಿಸಿ ಬಿತ್ತುವ ಸಂದರ್ಭದ ವರೆಗೆ ಕಾದಿಟ್ಟುಕೊಂಡು, ಬಿತ್ತುವ ಮುನ್ನ ಅದನ್ನು ಪುಡಿಮಾಡಿ ಬೀಜಗಳ ಜೊತೆಗೆ ಸೇರಿಸಿ ಬಿತ್ತುವರು. ಹೊಲಗದ್ದೆ ಇಲ್ಲದವರು ದೇವರ ಕೋಣೆ ಅಥವಾ ಎತ್ತುಗಳನ್ನು ಕಟ್ಟುವ ಜಾಗಗಳಲ್ಲಿ ಹುಗಿಯುತ್ತಾರೆ. ಈ ಸಂದರ್ಭದಲ್ಲಿ ಅವರು ದೇವರನ್ನು ಹೀಗೆ ಬೇಡಿಕೊಳ್ಳುವರು.

ಬುದ್ದಿ ಕೊಡೋ ಬುದ್ದ್ಯುಳ್ಳ ಮೈಲಾರದೇವಾ
ಮುದ್ದಿಯ ಮ್ಯಾಲೆ ಶಿವ ದ್ಯಾನ – ಕೊಟ್ಟರೆ
ಮುದ್ದಿಯ ಹುಣ್ಣೀಮೆಗೆ ನಡೆದೇವ....

ಬಾನಾವ ಕೊಡು ನೀನು ಗ್ಯಾನುಳ್ಳ ಮೈಲಾರಲಿಂಗ
ಬಾನಾದ ಮ್ಯಾಲೆ ಶಿವದ್ಯಾನ – ಕೊಟ್ಟರ
ಭಾರತದ ಹುಣ್ಣಿಮೆಗೆ ಬರತೇನ

ಅನ್ನವ ಕೊಡು ನೀನು ಪುಣ್ಣ್ಯುಳ್ಳ ಮೈಲಾರಲಿಂಗ
ಅನ್ನದ ಮ್ಯಾಲ ಶಿವದ್ಯಾನ – ಕೊಟ್ಟರ
ಹನ್ನೊಂದು ಹುಣ್ಣಿವಿ ನಡಿತೀನಿ

ಅಂಬಲಿ ಕೊಡು ನೀನು ಕಂಬಳಿ ಗೊರವಯ್ಯ
ಅಂಬಲಿ ಮ್ಯಾಲೆ ಶಿವದ್ಯಾನ – ಕೊಟ್ಟು
ತಿಂಗಳ ಹುಣ್ಣಿಮೆಗೆ ಬರತೀವಿ

## ೬.೨ ಜಾತ್ರೆ, ಕಾರ್ಣಿಕ

**ರಥ ಸಪ್ತಮಿ :**

ಮೈಲಾರ ಲಿಂಗನ ಪ್ರಸಿದ್ಧ ಕಾರಣಿಕ ನಡೆಯುವ ಕಾರ್ಯಕ್ರಮ ಆರಂಭವಾಗುವುದೇ ರಥಸಪ್ತಮಿಯಿಂದ.[10] ಇಂದಿನ ದಿನ ಹಾಲಿನ ಪಾತ್ರೆಯೊಂದನ್ನು ಇಟ್ಟು ಅದರಲ್ಲಿ ಹಾಲನ್ನು ತುಂಬಿಸುತ್ತಾರೆ. ಊರ ಜನರೂ ಆ ಪಾತ್ರೆಗೆ ಹಾಲನ್ನು ತಂದು ಹಾಕುವರು. ನಂತರ ಕಾಕುಳ್ಳುಗಳನ್ನು[11] ಒಟ್ಟಿ ಬೆಂಕಿ ಮಾಡಿ ಅದರ ಮೇಲೆ ಹಾಲಿನ ಪಾತ್ರೆಯನ್ನು

ಇಡುವರು. ಹಾಲು ಕಾಯ್ದು ಉಕ್ಕುವವರೆಗೂ ಬೆಂಕಿ ಆರದಂತೆ ನೋಡಿಕೊಳ್ಳುತ್ತಾರೆ. ಹಾಲು ಕಾಯ್ದು ಮೇಲಕ್ಕೆ ಉಕ್ಕುವುದು. ಈ ರೀತಿ ಮೂರು ಸಾರಿ ಉಕ್ಕಬೇಕು. ಅದು ಯಾವ ದಿಕ್ಕಿನ ಕಡೆ ಉಕ್ಕಿ ಬರುವುದೋ ಆ ದಿಕ್ಕಿನಲ್ಲಿ ಬೆಳೆ ಚೆನ್ನಾಗಿ ಬರುತ್ತದೆಂದು ಜನ ನಂಬುತ್ತಾರೆ. ಉಳಿದ ಹಾಲಿನಲ್ಲಿ ಅಕ್ಕಿ ಬೆಲ್ಲ ಹಾಕಿ ಪಾಯಸಮಾಡುತ್ತಾರೆ. ನಂತರ ಪೂಜಾರಿಯು ಅದನ್ನು ಜನರಿಗೆಲ್ಲ ಪ್ರಸಾದ ರೂಪದಲ್ಲಿ ಹಂಚುತ್ತಾರೆ.

ಹಿಂದೆಯೇ ಹೇಳಿದಂತೆ ಕಾರಣಿಕೋತ್ಸವದ ಕಾರ್ಯಕ್ರಮಗಳ ಆರಂಭ ರಥಸಪ್ತಮಿಯಿಂದಲೇ ಆಗುತ್ತದೆ. ಬಹುಶಃ ಮಲ್ಲಾಸುರ ಹಾಗೂ ಮಣಿಕಾಸುರರ ಜೊತೆ ನಡೆದ ಯುದ್ಧದ ಸಂಪೂರ್ಣ ಕಾರ್ಯಗಳ ಪುನರಾವರ್ತನೆಯಂತೆ ಈ ಕಾರ್ಯಗಳು ನಡೆಯುತ್ತವೆ. ಹೀಗಾಗಿ ರಥಸಪ್ತಮಿಯಿಂದ ಕಾರಣಿಕದ ದಿನದವರೆಗೆ (ಭಾರತ ಹುಣ್ಣಿಮೆಯವರೆಗೆ ಸತತ ಹನ್ನೊಂದು ದಿನಗಳ ಕಾಲ) ಪ್ರತಿದಿನವೂ ಒಂದಿಲ್ಲೊಂದು ಆಚರಣೆಗಳು ನಡೆಯುತ್ತಲೇ ಇರುತ್ತವೆ. ಈ ಸಂದರ್ಭದಲ್ಲಿ ಹನ್ನೊಂದು ದಿನವೂ ದೇವಾಲಯದಲ್ಲಿ ಗಂಟೆ, ವಾದ್ಯಗಳನ್ನು ಬಾರಿಸದೇ ಮೌನವಾಗಿರುತ್ತಾರೆ. ಗೊತ್ತಿಲ್ಲದವರು ಗಂಟೆ ಬಾರಿಸಬಹುದೆಂಬ ಶಂಕೆಯಿಂದ ಗಂಟೆಯೊಳಗಿನ ನಾಲಿಗೆಯನ್ನು ಕಟ್ಟಿಬಿಡುತ್ತಾರೆ.

ಹಾಲು ಉಕ್ಕಿಸುವ ಕಾರ್ಯಕ್ರಮದ ನಂತರದಲ್ಲಿ ದೇವರ ಉತ್ಸವವನ್ನು ತೆಗೆದುಕೊಂಡು ಡೆಂಕಣಮರಡಿಗೆ ಹೋಗುತ್ತಾರೆ. ಜೊತೆಯಲ್ಲಿ ಪೂಜಾರಿಗಳು ಒಡೆಯರು ಇರುತ್ತಾರೆ. ಉತ್ಸವದಲ್ಲಿ ಮೈಲಾರಲಿಂಗ, ಗಂಗಿಮಾಳಮ್ಮ ಹಾಗೂ ಹೆಗ್ಗಪ್ಪನ (ಹೆಗ್ಗಪ್ಪ > ಹೆಗ್ಗಡೆ > ವಿಷ್ಣು) ಮೂರ್ತಿಯನ್ನು ಸಹ ತೆಗೆದುಕೊಂಡು ಹೋಗುತ್ತಾರೆ. ಆದರೆ ಉತ್ಸವದಲ್ಲಿಯೂ ಸಹ ಯಾವುದೇ ವಾದ್ಯವೈಭವ ಇರುವುದಿಲ್ಲ. ಮಲ್ಲಾಸುರನ ವಧೆಗೆ ನಡೆದಿರುವ ದೇವರ ನಡೆ ಅವನಿಗೆ ತಿಳಿಯಬಾರದು ಎಂಬ ನಿಟ್ಟಿನಲ್ಲಿ ಈ ಮೌನ ಸವಾರಿ ನಡೆಯುವುದು.

ಈ ರೀತಿ ಮೌನಮೆರವಣಿಗೆ ಹೋದ ಮೇಲೆ ದೇವರ ಪಲ್ಲಕ್ಕಿಗೆ ಒಂದು ಬಟ್ಟೆಯನ್ನು ಸುತ್ತಿಕೊಂಡು ಮರೆಮಾಡಿ ದೇವಾಲಯಕ್ಕೆ ತರುತ್ತಾರೆ. ಡೆಂಕಣ ಮರಡಿಯಲ್ಲಿ ದೇವಸ್ಥಾನದ ನಿಶಾನೆಯನ್ನು ನೆಟ್ಟು ಅದನ್ನು ಹನ್ನೊಂದು ದಿನಗಳ ಕಾಲ ಗೊರವ ಗೊರವಿಯರು ಕಾಯುತ್ತಾರೆ. ಕಾರಣಿಕ ಹೇಳುವ ಗೊರವನೂ ಸಹ ಅಲ್ಲಿಯೇ ಇರಬೇಕು

ಎಂಬುದು ಇಲ್ಲಿನ ನಿಯಮವಾಗಿದೆ. ಇಲ್ಲಿ ಸಹ ಪುರಾಣದ ಕಥೆಯ ಪುನರಾವರ್ತನೆ ಬಿಂಬಿತವಾಗುವುದು ಇಲ್ಲಿನ ವಿಶೇಷ.

ರಥ ಸಪ್ತಮಿಯಂದೇ ಸಂಜೆ ಕಡುಬಿನ ಕಾಳಗ ನಡೆಯುತ್ತದೆ. ಬೆಲ್ಲದ ಪಾಕ ಮಾಡಿ, ಅದರಲ್ಲಿ ಸಜ್ಜೆಯ ಹಿಟ್ಟನ್ನು ಬೆರೆಸಿ, ಮುಷ್ಟಿಯಲ್ಲಿ ಉಂಡಿಗಳನ್ನು (ಮುಟಿಗಿ) ಮಾಡುವರು. ಇದನ್ನು ಕಡುಬು ಎನ್ನುವರು. ಇದರೊಂದಿಗೆ ಹೆಸರು ಬೇಳೆಯ ಪಾಯಸ ಸಹ ಮಾಡುವರು. ಇವೆರಡನ್ನೂ ದೇವರಿಗೆ ಅರ್ಪಿಸುವರು. ಬಳಿಕ ಇವೇ ಕಡುಬುಗಳನ್ನು ತೆಗೆದುಕೊಂಡು ಹೊಡೆದಾಡುವರು. ಈ ಹೋರಾಟ ಡೆಂಕಣ ಮರಡಿಯುವರೆಗೂ ನಡೆಯುವುದು. ಕೊನೆಗೆ ಉಳಿಯುವ ಕಡುಬುಗಳನ್ನು ಪ್ರಸಾದದ ರೂಪದಲ್ಲಿ ನೆರೆದ ಭಕ್ತರಿಗೆಲ್ಲ ಹಂಚುವರು.

ಇದೇ ರೀತಿಯ ಪರಂಪರೆಯನ್ನು ಹಲವಾರು ಕ್ಷೇತ್ರಗಳಲ್ಲಿ ನಾವು ಕಾಣಬಹುದಾಗಿದೆ. ಭಕ್ತರಲ್ಲಿ ಎರಡು ಪಂಗಡಗಳಾಗಿ ಪರಸ್ಪರ ಕೋಲು, ದೊಣ್ಣೆಗಳಿಂದ ಹೊಡೆದಾಡುವ ಆಚರಣೆಯೊಂದರ ಬಗ್ಗೆ ಇತ್ತೀಚೆಗೆ ಈ ಟಿ. ವಿ. ಕನ್ನಡ ವಾಹಿನಿಯಲ್ಲಿ ಸವಿಸ್ತಾರವಾಗಿ ತೋರಿಸಲಾಯಿತು. ಈ ರೀತಿಯ ಆಚರಣೆಗಳು ಹಿಂದೆಂದೋ ಆದ ಸಾಂಸ್ಕೃತಿಕ ಸಂಘರ್ಷದ ಪ್ರತೀಕಗಳಾಗಿ ಇಂದೂ ಸಹ ಆಚರಣೆಯಲ್ಲಿವೆ ಎಂದು ಹೇಳಬಹುದಾಗಿದೆ. ಇದೇ ವಿಷಯದಲ್ಲಿ ಮೈಲಾರದ ಹಿರಿಯರು ಹೇಳುವಂತೆ ಇಲ್ಲಿಯೂ ಸಹ ಹಿಂದೆ ಅಣಕು ಯುದ್ಧ ಜಾರಿಯಲ್ಲಿತ್ತಂತೆ. ಆದರೆ ಕೆಲ ಸಂದರ್ಭಗಳಲ್ಲಿ ವೈಯಕ್ತಿಕ ವೈಷಮ್ಯದ ಕಾರಣಗಳಿಂದ ಈ ಯುದ್ಧ ನಿಜವಾದ ಯುದ್ಧವೇ ಆಗಿ ಪರಿವರ್ತನೆಯಾಗುತ್ತಿತ್ತಂತೆ. ಆ ಕಾರಣಗಳಿಂದ ಕೋಲು ಬಡಿಗೆಗಳ ಅಣಕು ಯುದ್ಧವನ್ನು ನಿಷೇಧಿಸಲಾಯಿತಂತೆ.

### ಗುಗ್ಗರಿ ಹಬ್ಬ :

ಹುಣ್ಣಿಮೆಗೆ ಎರಡು ದಿನ ಮುಂಚೆ ಗುಗ್ಗರಿ ಹಬ್ಬವನ್ನು ಆಚರಿಸುತ್ತಾರೆ. ಮೈಲಾರನ ಭಕ್ತರಲ್ಲಿ ಈ ಹಬ್ಬವನ್ನು ಎಲ್ಲರೂ ಆಚರಿಸುವರು. ಗುಗ್ಗರಿ ಕುದುರೆಗೆ ತುಂಬ ಪ್ರಿಯವಾದ ಆಹಾರವಂತೆ. ಆದ್ದರಿಂದ ದೇವರ ಕುದುರೆಗೆ ಅರ್ಪಿಸಲು ಹುರುಳಿ, ಅವರೆ, ಹೆಸರು, ಮಡಿಕೆ, ಅಲಸಂದಿ ಮೊದಲಾದ ಕಾಳುಗಳನ್ನು ಸೇರಿಸಿ ಕುದಿಸುವರು. ಇದನ್ನು ಗುಗ್ಗರಿ ಎನ್ನುವರು. ಕುದುರೆಗೆ ಹುರುಳಿ ಎಂದರೆ ತುಂಬ ಇಷ್ಟ. ಆದ್ದರಿಂದ ಈ ಗುಗ್ಗರಿಯಲ್ಲಿ

ಹುರುಳಿ ಇರಲೇಬೇಕು. ಅದೇ ರೀತಿ ಕೆಲವೊಮ್ಮೆ ಕಡಲೆಯನ್ನು ಸೇರಿಸುವರು. ಮೊದಲು ಈ ಗುಗ್ಗರಿಯನ್ನು ಕುದುರೆಪ್ಪನಿಗೆ ಅರ್ಪಿಸುವರು. ತದನಂತರದಲ್ಲಿ ದೋಣಿಗೆ ನೀಡುವರು.

ಡಾ|| ವೆಂಕಟೇಶ ಅವರ ಅಭಿಪ್ರಾಯದಲ್ಲಿ ಗುಗ್ಗರಿ ಸೇವೆ ದೈತ್ಯ ಪೂಜೆಯ ಒಂದು ಅಂಶವಾಗಿ ಬಂದಿದೆ. ಈ ಪೂಜೆ ನಡೆಯುವುದು ಡೆಂಕನ ಮರಡಿಯಲ್ಲಿ. ಇದು ಮಲ್ಲಾಸುರ ಹಾಗೂ ಭೈರವರು ಕಾದಾಡಿದ ಯುದ್ಧ ಭೂಮಿ. ಕಥೆಯಲ್ಲಿ ಮೈಲಾರಲಿಂಗನೇ ಮಲ್ಲಾಸುರನ ಸೈನ್ಯವಿರುವ ಕಡೆ ಕತ್ತಲೆಯಲ್ಲಿ ಸಾಗಿ ಆಕ್ರಮಣಮಾಡುವ ಪ್ರಸ್ತಾವನೆಯಿದೆ. ಅಂದರೆ ಡೆಂಕಣ ಮರಡಿ ರಾಕ್ಷಸರ ವಾಸಸ್ಥಾನ. ಅದಲ್ಲದೇ ಮೊದಲು ಶಿವನಿಂದ ಹತನಾದ ಮಣಿಕನೆಂಬ ದೈತ್ಯನು ತನ್ನನ್ನು ಕುದುರೆಯ ರೂಪದಲ್ಲಿ ಸ್ವೀಕರಿಸುವಂತೆ ಕೇಳಿದಾಗ ಮೈಲಾರ ಅದಕ್ಕೆ ಒಪ್ಪಿಕೊಳ್ಳುತ್ತಾನೆ. ಹೀಗಾಗಿ ಕುದುರೆಗೆ ಗುಗ್ಗರಿ ಅರ್ಪಿಸಿ ಪೂಜಿಸುವ ರೂಪದಲ್ಲಿ ದೈತ್ಯ ಪೂಜೆಯೇ ಗುಗ್ಗರಿ ಪೂಜೆಯ ವಿಶೇಷವೆನ್ನಬಹುದು. ಆದರೆ ಜನಪದರ ನಂಬಿಕೆಯಂತೆ ಮೈಲಾರನೇ ದೇವಾಲಯವನ್ನು ಬಿಟ್ಟು ಡೆಂಕಣ ಮರಡಿಗೆ ಬಂದಿರುತ್ತಾನೆ. ಹಾಗಾಗಿ ಅವನಿಗೆ ದೇವಾಲಯದಲ್ಲಿ ಪೂಜೆ ಸಲ್ಲುವುದಿಲ್ಲ. ಅದಕ್ಕೆ ಬದಲಾಗಿ ಮರಡಿಯಲ್ಲಿಯೇ ವಿವಿಧ ಆಚರಣೆಗಳೊಂದಿಗೆ ಪೂಜೆ ನಡೆಯುತ್ತದೆ. ಅವುಗಳಲ್ಲಿ ಒಂದು ಈ ಗುಗ್ಗರಿ ಪೂಜೆ. ಇದು ದೈತ್ಯ ಪೂಜೆಯ ನಿರಾಕರಣೆಯನ್ನು ಸೂಚಿಸಲು ಬಳಸುವ ವಿವರಣೆಯಾಗಿ ಕಾಣುತ್ತದೆ.[12]

**ಕಿಚಡಿ ಹಬ್ಬ :**

ಈ ದಿನದಂದು ಜೋಳದ ಕಿಚಡಿಯನ್ನು ತಯಾರಿಸಿ ಮೊಸರು ಅಥವಾ ಮಜ್ಜಿಗೆಯನ್ನು ಜೊತೆಗೆ ಉಪ್ಪನ್ನ ಸೇರಿಸಿ ದೇವರಿಗೆ ನೈವೇದ್ಯ ಮಾಡುವರು. ನಂತರ ಗೊರವರ ದೋಣಿಗಳಿಗೆ ಅರ್ಪಿಸಿ, ತಾವೂ ಪ್ರಸಾದದ ರೂಪದಲ್ಲಿ ಸೇವಿಸುವರು. ಇದು ಸಾಮಾನ್ಯವಾಗಿ ಮರಡಿಯಲ್ಲಿ ನಡೆಯುವುದು. ಆದ್ದರಿಂದ ಇದನ್ನು ಮರಡಿ ಕಿಚಡಿ ಎಂದೂ ಕರೆಯುವರು.

**ಭಾರತ ಹುಣ್ಣಿಮೆ :**

ಮೈಲಾರದಲ್ಲಿ ಈ ಹುಣ್ಣಿಮೆಗೆ ಯಾವುದೇ ವಿಶೇಷ ಅರ್ಥವನ್ನು ಕಲ್ಪಿಸಲಾಗಿಲ್ಲ. ಈ ಹುಣ್ಣಿಮೆಯ ನಂತರದ ದಿನಗಳು ಪ್ರಮುಖವಾದುವು. ಈ ಕಾರಣದಿಂದ ಯುದ್ಧ

ಆರಂಭದ ಸೂಚನೆಯೆಂಬಂತೆ ಧ್ವಜಾರೋಹಣ ಹಾಗೂ ತ್ರಿಶೂಲ ಪೂಜೆಯಂತಹ ಸಾಮಾನ್ಯ ಆಚರಣೆಯನ್ನು ಬಿಟ್ಟರೆ ವಿಶೇಷ ಆಚರಣೆಗಳಾವುವೂ ಕಂಡುಬರುವುದಿಲ್ಲ.

**ಗುಪ್ತ ಮೌನ ಸವಾರಿ :**

ಹುಣ್ಣಿಮೆಯಾದ ಮೂರು ದಿನಗಳ ನಂತರ, ಅಂದರೆ ರಥ ಸಪ್ತಮಿಯಾದ ನಂತರದ ೧೧ನೆಯ ದಿನ ಮುಖ್ಯ ಕಾರಣಿಕೋತ್ಸವ ನಡೆಯುತ್ತದೆ. ಇದನ್ನು ಮಲ್ಲಾಸುರನ ವಧೆಯ ದಿನವೆಂದೇ ಭಾವಿಸಲಾಗುತ್ತದೆ. ಬೆಳಗಿನ ಜಾವ ಸುಮಾರು ನಾಲ್ಕು ಗಂಟೆಯ ಸುಮಾರಿಗೆ ದೇವರ ರಥ ಸಿದ್ಧವಾಗುತ್ತದೆ. ಅದರಲ್ಲಿ ಮೈಲಾರಲಿಂಗ, ಗಂಗಿಮಾಳಮ್ಮ, ಹೆಗ್ಗಡೆ, ಪ್ರಧಾನಿಯ ಮೂರ್ತಿಗಳನ್ನು ಕೂರಿಸಿ ಅಲಂಕರಿಸಲಾಗುತ್ತದೆ. ಇದೇ ರೀತಿ ಕುದುರೆಗೂ (ಕಟ್ಟಿಗೆಯ ಕುದುರೆ) ಅಲಂಕಾರ ಮಾಡಿರುತ್ತಾರೆ. ಅದರ ಕೆಳಗೆ ಮಲ್ಲಾಸುರನ ಮುಖವಾಡವನ್ನು ಬಣ್ಣ ಬಳಿದು ಉಗ್ರವಾಗಿ ಕಾಣುವಂತೆ ಮಾಡಿ ಇಟ್ಟಿರುತ್ತಾರೆ. ಇಷ್ಟೆಲ್ಲ ಸಿದ್ಧತೆಗಳು ನಡೆದಾದ ನಂತರ ಸಂಪೂರ್ಣ ರಥವನ್ನು ದೊಡ್ಡದೊಂದು ಬಟ್ಟೆಯಿಂದ ಮುಚ್ಚಲಾಗುತ್ತದೆ. ಕಾಯಿ ಕೋಲು ದೀವಟಿಗೆಯವರೂ ಸೇರಿದಂತೆ ಗೊರವ, ಗೊರವಿಯರು ಹೀಗೆ ಎಲ್ಲರೂ ಸೇರಿರುತ್ತಾರೆ. ಜಾತ್ರೆಗೆ ಬಂದ ಸಾವಿರಾರು ಜನರೂ ಅಲ್ಲಿ ಬಂದು ಸೇರುತ್ತಾರೆ. ಸುಮಾರು ಐದು ಗಂಟೆ ಹೊತ್ತಿಗೆ ಒಡೆಯರು ಅಲ್ಲಿಗೆ ಬರುತ್ತಾರೆ. ಅವರನ್ನು ಕುದುರೆಯ ಮೇಲೆ ಕೂರಿಸಿ ಮೆರವಣಿಗೆಯಲ್ಲಿ ಕರೆದೊಯ್ಯುತ್ತಿರುತ್ತಾರೆ. ಸುತ್ತಲೂ ಪಂಜಿನ ದೀಪ ಹಿಡಿದು ಸಾವಿರಾರು ಜನ ಡೆಂಕಣ ಮರಡಿಯ ಕಡೆಗೆ ಸಾಗುತ್ತಿರುತ್ತಾರೆ. ಆದರೆ ಒಂದೇ ಒಂದು ಶಬ್ದವೂ ಇರುವುದಿಲ್ಲ! ಈ ರೀತಿಯ ಮೌನದ ಕಾರಣದಿಂದಲೇ ಈ ಆಚರಣೆಗೆ ಮೌನ ಸವಾರಿ ಎಂಬ ಹೆಸರು ಬಂದಿದೆ ಎಂದು ಹೇಳಬಹುದು. ಹಿಂದೆ ಮೈಲಾರನು ರಾಕ್ಷಸ ಸಂಹಾರಕ್ಕೆ ಬಂದಿದ್ದಾಗ ತನ್ನ ಸೈನ್ಯದೊಡನೆ ಮೌನವಾಗಿ ನುಗ್ಗಿ ಅವರನ್ನು ಸಂಹರಿಸಿದ ಘಟನೆಯ ಸ್ವರೂಪವೇ ಈ ಗುಪ್ತ ಮೌನ ಸವಾರಿಯಲ್ಲಿ ಕಂಡು ಬರುತ್ತದೆ.(ಚಿತ್ರ – ೭)

ನಂತರ ಒಡೆಯರು ಸಾಂಕೇತಿಕವಾಗಿ ಮೂರು ಬಾರಿ ಬಂದೂಕಿನಿಂದ ಗುಂಡು ಹಾರಿಸುತ್ತಾರೆ. ಮೊದಲು ಇಲ್ಲಿ ಬಿಲ್ಲು ಬಾಣಗಳನ್ನು ಬಳಸುತ್ತಿದ್ದರಂತೆ. ಆದರೆ ಈಗ ಬಿಲ್ಲು ಬಾಣಗಳ ಸ್ಥಾನವನ್ನು ಬಂದೂಕು ಗುಂಡುಗಳು ಆಕ್ರಮಿಸಿಕೊಂಡಿವೆ. ಇದು ಒಂದು ರೀತಿಯಲ್ಲಿ ಸಂಸ್ಕೃತಿಯಲ್ಲಿನ ಸಾಮಾಜಿಕ ಹೊಂದಾಣಿಕೆ ಎನ್ನಬಹುದು.

ಬಂದೂಕಿನ ಗುಂಡು ಹಾರಿದ ತಕ್ಷಣ ಒಡೆಯರು ಮುಸುಕು ತೆಗೆಯಲು ಆಜ್ಞಾಪಿಸುತ್ತಾರೆ. ರಾಕ್ಷಸನ ಮುಖ ಭೀಕರವಾಗಿದ್ದು ಇಡೀ ಗುಂಪಿನಲ್ಲಿ ಕಾಣುತ್ತಿರುತ್ತದೆ. (ಚಿತ್ರ – ೮) ಅದನ್ನು ತೆಗೆದ ತಕ್ಷಣ ಜನರೆಲ್ಲ ಉತ್ಸಾಹದಿಂದ ರಾಕ್ಷಸ ಸಂಹಾರವಾಯಿತೆಂದು ತಿಳಿದು ಏಳು ಕೋಟಿ, ಏಳು ಕೋಟಿ, ಚಾಂಗಬಲೋ, ಎಂದು ಕೂಗುತ್ತ ಒಡೆಯರ್ ಅವರನ್ನು ಒಳಗೊಂಡಂತೆ ಎಲ್ಲರೂ ಡೆಂಕಣಮರಡಿಯಲ್ಲಿರುವ ಶಿಬಾರದತ್ತ ಓಡುತ್ತಾರೆ. ಜೊತೆಗೆ ದೇವರ ಮೂರ್ತಿಯನ್ನು ಸಹ ಶಿಬಾರದ ಸುತ್ತ ಮೂರು ಸುತ್ತು ಹೊತ್ತೊಯ್ಯುತ್ತಾರೆ. ಇದೇ ಸಂದರ್ಭದಲ್ಲಿ ಕಂಚಾವೀರರು ಒಡಬು ಹೇಳುವ ಕಾರ್ಯಕ್ರಮವೂ ಇರುತ್ತದೆ.

ನಂತರದಲ್ಲಿ ಯುದ್ಧದಲ್ಲಿ ಗೆದ್ದು ಬಂದ ದೇವರಿಗೆ ನಿವಾಳಿತೆಗೆಯುವರು. ನಂತರ ಹಣ್ಣು ಕಾಯಿ ಕರ್ಪೂರಗಳೊಂದಿಗೆ ಆರತಿ, ನೈವೇದ್ಯ ನಡೆಯುವುದು. ದೇವರನ್ನು ಸಂತುಷ್ಟಗೊಳಿಸಲು ಡಮರು, ಗಂಟೆ, ಕೊಳಲು, ಪಾರಿ ಮೊದಲಾದ ವಾದ್ಯಗಳನ್ನು ನುಡಿಸುವರು. ಗೊರವ, ಗೊರವಿಯರು ದೇವರ ಮಹಿಮೆಯನ್ನು ಹೇಳುವ ಹಾಡುಗಳನ್ನು ಹಾಡುವರು. ಕುದುರೆಕಾರುರು ಕುದುರೆ ನರ್ತನ ಮಾಡುವರು. ಹೀಗೆ ಸಕಲ ಮನರಂಜನೆಗಳಾದ ನಂತರ ಒಡೆಯರ ನೇತೃತ್ವದಲ್ಲಿ ಎಲ್ಲರೂ ಮತ್ತೆ ದೇವಸ್ಥಾನಕ್ಕೆ ಹೊರಡುತ್ತಾರೆ.

ಇದೇ ಸಂದರ್ಭದಲ್ಲಿ ಗಂಗಿ ಮಾಳಮ್ಮನ ಉತ್ಸವ ಮೂರ್ತಿಯನ್ನು ತಂದು ಡೆಂಕಣ ಮರಡಿಯ ಕಾರಣಿಕದ ಬಯಲಿನ ಸಮೀಪದ ಬಸರೀಗಿಡದ ಕೆಳಗೆ ಸ್ಥಾಪಿಸುತ್ತಾರೆ. ಯುದ್ಧದ ವಿವರಗಳನ್ನು ತಿಳಿದು ಕೊಳ್ಳಲು ಬಂದ ದೇವಿಯ ಪ್ರತೀಕವಾಗಿ ಈ ಆಚರಣೆ ನಡೆಯುತ್ತದೆ.

ನಂತರ ಬರುವ ಭಕ್ತರು ಡೆಂಕಣಮರಡಿಯವರೆಗೆ ಬಂದು ತಮ್ಮ ಮನೆತನದ ಸಂಪ್ರದಾಯದಂತೆ ಕಾಯಿಕೋಲು – ದೀವಟಿಗೆ ಸೇವೆ ಮಾಡುವರು (ದೀವಟಿಗೆ ಉರಿಸುವರು) ಚೌರಿ ಸೇವೆಯವರು ಚಾಮರ ಬೀಸುವರು. ಕುದುರೆಕಾರರು ಕುದುರೆಯಂತೆ ಕುಣಿಯುತ್ತ ಚಾವಟಿಯಿಂದ ತಮ್ಮನ್ನೇ ತಾವು ಬಡಿದುಕೊಳ್ಳುವರು. ಈ ರೀತಿಯ ಆಚರಣೆಗಳು ಸಂಜೆಯವರೆಗೂ ನಡೆಯುತ್ತಲೇ ಇರುತ್ತವೆ.

ದೇವರ ಶಿಬಾರದ ಬಳಿ ಒಡೆಯರ ಪ್ರತಿನಿಧಿಗಳು ಜಾಡಿ (ಡಬ್ಬಿ)ಯನ್ನು ಇಟ್ಟುಕೊಂಡು ಕುಳಿತುಕೊಳ್ಳುತ್ತಾರೆ. ಗೊರವರು, ಭಕ್ತರು ಇದರಲ್ಲಿ ತಮ್ಮ ಕಾಣಿಕೆಯನ್ನು ಸಮರ್ಪಿಸುವರು. ಇದೇ ಸಂದರ್ಭದಲ್ಲಿ ಕೊಡೆ ಹಿಡಿಯುವವರು, ಆಪ್ತಾಗಿರಿ ಹಿಡಿಯುವವರು, ತಮ್ಮ ಸೇವೆಯನ್ನು ಸಲ್ಲಿಸುತ್ತಿರುತ್ತಾರೆ.

**ಕಾರಣಿಕೋತ್ಸವ :**

ಗುಪ್ತಮೌನಸವಾರಿಯು ಕಾರ್ಯಕ್ರಮವಾದ ನಂತರ ಸಂಜೆಯವರೆಗೂ ದೇವಾಲಯದಲ್ಲಿ ಸಾಮಾನ್ಯ ಪೂಜೆ, ಪುನಸ್ಕಾರಗಳು, ಭಕ್ತಾದಿಗಳಿಂದ ವಿವಿಧ ಸೇವೆಗಳು ನಡೆಯುತ್ತಿರುತ್ತವೆ. ಸಂಜೆ ಸುಮಾರು ಐದು ಗಂಟೆಗೆ ದೇವಾಲಯದಿಂದ ಒಡೆಯರು ಕುದುರೆಯ ಮೇಲೆ ಕುಳಿತು ರಾಜ ವೈಭವದಿಂದ ದೇವರನ್ನು ಕರೆತರಲು ಹೊರಡುತ್ತಾರೆ. ಇವರ ಜೊತೆ ದಂಡಧಾರಿಗಳು, ಚಾಮರ ಸೇವೆಯವರು, ಆಪ್ತಾಗಿರಿಧಾರಿಗಳು, ಕೊಡೆ ಹಿಡಿಯುವವರು, ಹೀಗೆ ವಿವಿಧ ಸೇವೆಗಳವರು ವಾಲಗ ಸಮೇತರಾಗಿ ಡೆಂಕಣ ಮರಡಿಗೆ ಬರುತ್ತಾರೆ. (ಚಿತ್ರ – ೯)

ಈ ಮೊದಲೇ ಡೆಂಕಣ ಮರಡಿಯಲ್ಲಿ ಜನಸಾಗರವೇ ಸೇರಿರುತ್ತದೆ. ಕಾರಣಿಕದ ಬಯಲಿನಲ್ಲಿ ಗದ್ದಲವಾಗುವುದನ್ನು ತಪ್ಪಿಸಲು ಕಾರಣಿದದ ಬಿಲ್ಲು[13] (ಚಿತ್ರ – ೧೧) ಏರುವ ಸ್ಥಳದಲ್ಲಿ ಸುತ್ತಲೂ ಬೇಲಿ ಹಾಕಿ ರಕ್ಷಣೆ ನೀಡುತ್ತಾರೆ. ಪೋಲಿಸ್ ಅಧಿಕಾರಿಗಳು ಸ್ಥಳದಲ್ಲಿಯೇ ಇದ್ದು ಜನರನ್ನು ನಿಯಂತ್ರಿಸುವ ಕೆಲಸ ಮಾಡುತ್ತಿರುತ್ತಾರೆ. ಕಾರಣಿಕದ ಬೇಲಿಯಲ್ಲಿ ಕೇವಲ ಪ್ರಮುಖರಿಗೆ ಮಾತ್ರ ಅವಕಾಶವಿದ್ದು ದೇವಸ್ಥಾನದ ಅಧಿಕಾರಿಗಳು, ರಾಜಕಾರಣಿಗಳು, ಮುಖ್ಯ ಗೊರವರು ಮಾತ್ರ ಒಳ ಪ್ರವೇಶ ಮಾಡುತ್ತಾರೆ. ಉಳಿದಂತೆ ಬೇಲಿಯ ಹೊರಗಿನಿಂದ ಸಕಲವನ್ನು ನೋಡಲು, ಕೇಳಲು ಮುಕ್ತ ಅವಕಾಶವಿರುವುದು. ಹೀಗಾಗಿ ಬೇಲಿಯ ಒಳಗಡೆಗಿಂತ ಹೊರಗಡೆಯಿಂದಲೇ ಕಾರ್ಯಕ್ರಮವನ್ನು ವೀಕ್ಷಿಸಲು ಅನುಕೂಲಕರವಾಗಿರುತ್ತದೆ. ಆದರೂ ಜನರಲ್ಲಿ ಏನೋ ಒಂದು ರೀತಿಯ ಆವೇಶ, ಉತ್ಸಾಹ, ಆಕರ್ಷಣೆಗಳಿರುವುದರಿಂದ ಕಾರಣಿಕದ ಬೇಲಿಯೊಳಗೆ ನುಗ್ಗಲು ಹರಸಾಹಸ ನಡೆದೇ ಇರುತ್ತದೆ.

ಒಡೆಯರು ಡೆಂಕಣ ಮರಡಿಗೆ ಬಂದ ನಂತರ ದೇವರಿಗೆ ಪೂಜೆ ಆರತಿಗಳಾಗುತ್ತವೆ. ನಂತರ ಉತ್ಸವ ಮೂರ್ತಿಯನ್ನು ಶಿಬಾರದಿಂದ ಹೊರಡಿಸುತ್ತಾರೆ. ಈ ಸಂದರ್ಭದಲ್ಲಿ

ನೂರಾರು ಜನ ಗೊರವಿಯರು ಚಾಮರ ಬೀಸುತ್ತಿರುತ್ತಾರೆ. ಗೊರವರು ಕಿನ್ನರಿ, ಗಂಟೆ, ಡಮರು, ಪಾರಿ ಮೊದಲಾದ ವಾದ್ಯಗಳನ್ನು ಬಾರಿಸುತ್ತ ದೇವರನ್ನು ಹಿಂಬಾಲಿಸುವರು. ಇದೇ ವೇಳೆಗೆ ಕಾರಣಿಕದ ಗೊರವಪ್ಪ (ಇವನು ಹನ್ನೊಂದು ದಿನಗಳಿಂದ [ರಥಸಪ್ತಮಿಯಿಂದ] ಡೆಂಕಣ ಮರಡಿಯಲ್ಲಿಯೇ ಇರುತ್ತಾನೆ) ತನ್ನ ಬಿಲ್ಲಿನೊಂದಿಗೆ ಸಾಗಿ ಬರುತ್ತಾನೆ. ಜನ ಸಮೂಹದ ನಡುವೆ ದಾರಿ ಮಾಡಿಕೊಂಡು ಬರುವ ಗೊರವಪ್ಪನ ಹಿಂದೆ ಏಳುಕೋಟಿ ಏಳು ಕೋಟಿ ಎಂದು ಉದ್ಘೋಷ ಮಾಡುತ್ತ ಜನಮೂಹ ಓಡಿ ಬರುತ್ತದೆ. ಪೋಲಿಸರು ಹಾಗೂ ಭಕ್ತರ ನಡುವೆ ಝಟಾಪಟಿ ನಡೆದೇ ಇರುತ್ತದೆ. ಕಾರಣಿಕದ ಗೊರವಪ್ಪ ಕಾರಣಿಕದ ಬಯಲಿನ ಬೇಲಿಯೊಳಗೆ ಹೋದ ತಕ್ಷಣ ಜನರಲ್ಲಿ ವಿಪರೀತ ಉತ್ಸಾಹ ಮನೆ ಮಾಡುತ್ತದೆ.

ಕಾರಣಿಕದ ಗೊರವಪ್ಪ ಹಾಗೂ ಒಡೆಯರು ದೇವರ ಮೂರ್ತಿಯೊಂದಿಗೆ ಬಂದ ನಂತರದಲ್ಲಿ ಕಾರಣಿಕದ ಬಿಲ್ಲನ್ನು[13] ನಿಲ್ಲಿಸುವರು ದೇವರ ಎದುರಿನಲ್ಲಿಯೇ ಒಡೆಯರು ಗೊರವಪ್ಪನಿಗೆ ಆಶೀರ್ವಾದ ಮಾಡುವರು. ನಂತರ ತಮ್ಮ ಭಂಡಾರದ ಬಟ್ಟಲಿನಿಂದ ಭಂಡಾರವನ್ನು ತೆಗೆದು ಗೊರವನಿಗೆ ಹಚ್ಚುವರು. ತಕ್ಷಣ ಆವೇಶಭರಿತನಾದ ಗೊರವನು ಸುಮಾರು ಆರು ಮೀಟರ್ ಎತ್ತರವಿರುವ ಕಾರಣಿಕದ ಬಿಲ್ಲನ್ನೇರಿ ಒಮ್ಮೆಲೆ ಜೋರಾಗಿ ಸದ್ದಲೇsss ಎಂದು ಕೂಗುವನು. (ಚಿತ್ರ – ೧೨) ಲಕ್ಷಾಂತರ ಜನ ಸೇರಿದ ಇಡೀ ಡೆಂಕನ ಮರಡಿ ಒಮ್ಮಿಂದೊಮ್ಮೆಲೆ ನಿಶ್ಯಬ್ದವಾಗುವುದು! ಈಗ ಗೊರವನು ಆಕಾಶದ ಕಡೆ ನೋಡುತ್ತ ಒಗಟಿನ ರೂಪದಲ್ಲಿ ಒಂದು ನುಡಿಯನ್ನು ಹೇಳುವನು. (ಇತ್ತೀಚೆಗೆ ಇದನ್ನು ಎಲ್ಲರೂ ಕೇಳಿಸಿಕೊಳ್ಳಲು ಸಾಧ್ಯವಾಗುವಂತೆ ಮೈಕ್ ವ್ಯವಸ್ಥೆಯನ್ನು ಮಾಡಿದ್ದಾರೆ.) ಇದನ್ನು ಕಾರಣಿಕದ ನುಡಿ ಎನ್ನುತ್ತಾರೆ. ಇದನ್ನು ಜನರು ತಮ್ಮ ಮನೋಭಾವನೆಗಳಿಗೆ ಅನುಗುಣವಾಗಿ ಅರ್ಥೈಸುವರು.

ಕಾರಣಿಕದ ನುಡಿ ಹೇಳಿದ ನಂತರ ಗೊರವಪ್ಪ ಬಿಲ್ಲಿನ ಮೇಲಿನಿಂದ ಒಮ್ಮೆಲೆ ಕೆಳಗೆ ಬಿದ್ದುಬಿಡುವನು. ಜನರು ಅವನು ನೆಲಕ್ಕೆ ಬೀಳದಂತೆ ಹಿಡಿದುಕೊಳ್ಳುವರು. ಕಾರಣಿಕದ ನುಡಿ ಕೇಳಿದ ತಕ್ಷಣ ಜನರು ಸುತ್ತ ಮುತ್ತಲಿನ ಬಯಲಿನಲ್ಲಿ ಮಣ್ಣನ್ನು ಗುಡ್ಡೆಯಂತೆ ಮಾಡಿ ಕಡ್ಡಿಗಳಿಂದ ಚಪ್ಪರದಂತೆ, ಮನೆಗಳಂತೆ ಆಕಾರಗಳನ್ನು ಮಾಡುವರು.

ಹಿಂದೆ ಇದಕ್ಕೆ ನಿಶ್ಚಿತ ಕಾರಣಗಳು ಇದ್ದರೂ ಈಚೆಗೆ ಇದೊಂದು ಆಚರಣೆಯಂತೆ ಕಂಡು ಬರುತ್ತದೆ. ನನ್ನ ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಕಂಡು ಬಂದ ಕೆಲ ಭಕ್ತರನ್ನು ಕೇಳಿದಾಗ ನಮ್ಮ ಹರಕೆಗಳಿಗೆ ಅನುಗುಣವಾಗಿ ಹೀಗೆ ಮಾಡುತ್ತೇವೆ ಎಂದು ಹೇಳಿದರು. ಉದಾಹರಣೆಗೆ – ಮಗಳಿಗೆ ಮದುವೆಯಾಗಿ ಅವಳ ಮನೆ ನಿಂತರೆ ಮನೆ ಮಾಡುತ್ತೇನೆ ಎಂದು ಹರಸಿ ಕೊಂಡಿರುತ್ತೇವೆ, ಅದಕ್ಕೆ ಹೀಗೆ ಮಾಡುತ್ತೇವೆ ಎಂದು ಒಬ್ಬರು ಹೇಳಿದರೆ, ಮಗನಿಗೆ ಕೆಲಸ ದೊರೆತರೆ ಹೀಗೆ ಮಾಡುತ್ತೇವೆ ಎಂದು ಹರಕೆ ಕಟ್ಟಿಕೊಂಡಿದ್ದೇವೆ ಎಂದು ಇನ್ನೊಬ್ಬರು ಹೇಳಿದರು. ಕಾರಣಿಕದ ನುಡಿ ಕೇಳಿದ ನಂತರ ಜನ ಸಾಮಾನ್ಯವಾಗಿ ಮೈಲಾರದಲ್ಲಿ ಇರುವುದಿಲ್ಲ. ಕೂಡಲೇ ತಂತಮ್ಮ ಊರುಗಳಿಗೆ ಹೊರಡುವರು. ಆದರೆ ಅಂದು ರವಿವಾರವಾಗಿದ್ದರೆ ಮಾತ್ರ ಊರನ್ನು ಬಿಟ್ಟುಹೋಗುವುದಿಲ್ಲ.

ಕಾರಣಿಕ ಮುಗಿದ ನಂತರದಲ್ಲಿ ಡೆಂಕಣ ಮರಡಿಯ ಉತ್ತರದಲ್ಲಿರುವ ಬಸರೀ ಮರದ ಹತ್ತಿರ ಗದ್ದುಗೆಯ ಎದುರಿಗೆ ಕಂಚಾವೀರರು ಕೈಪವಾಡ (ಕೈಗೆ ಕಕ್ಕಡಾರತಿಯನ್ನು ಚುಚ್ಚಿ ಕೊಂಡು ಆರತಿ ಬೆಳಗುವರು) ಕಾಲುಪವಾಡ ಮೊದಲಾದವನ್ನು ಮಾಡುವರು. ಆಮೇಲೆ ದೇವರ ಹೆಚ್ಚಳವನ್ನು ಹೇಳುವ ಖಡ್ಗವನ್ನು ಹೇಳುವರು. ನಂತರದಲ್ಲಿ ಗಂಗಿಮಾಳವ್ವನ ಪಲ್ಲಕ್ಕಿಯೊಂದಿಗೆ ದೇವಾಲಯಕ್ಕೆ ಹೊರಡುವರು. ಆದರೆ ಈ ಬಾರಿ ಪಲ್ಲಕ್ಕಿ ಹೊರಡುವ ದಾರಿ ಬದಲಾಗಿರುತ್ತದೆ. ದೇವಾಲಯದ ಬಳಿ ಬಂದ ನಂತರ ಐದು ತೆಂಗಿನ ಕಾಯಿಗಳನ್ನು ನಿವಾಳಿಸಿ ಒಡೆಯುತ್ತಾರೆ. ಮೊದಲು ಅನ್ನದ ನಿವಾಳಿ, ಮರಿಯ ನಿವಾಳಿ (ಕುರಿಮರಿಯನ್ನು ಕತ್ತರಿಸಿ ನಿವಾಳಿಸುವುದು) ಕ್ರಮವಿದ್ದಿತಾದರೂ ಈಗ ಈ ಸಂಪ್ರದಾಯ ಕಂಡುಬರುವುದಿಲ್ಲ.

ನಂತರದಲ್ಲಿ ದೇವರನ್ನು ಗುಡಿತುಂಬಿಸಿ, ಅಭಿಷೇಕ ನೈವೇದ್ಯ ಮಾಡಿ ಆರತಿಗಳನ್ನು ಮಾಡುತ್ತಾರೆ. ತದನಂತರ ಬೆಳಗಿನಿಂದ ಉಪವಾಸವಿದ್ದವರೆಲ್ಲ ಊಟಮಾಡುವರು. ಹನ್ನೊಂದು ದಿನಗಳಿಂದ ಉಪವಾಸವಿದ್ದ ಕಾರಣಿಕದ ಗೊರವಪ್ಪನೂ ಸಹ ಒಡೆಯರ ಮನೆಯಲ್ಲಿ ಊಟಮಾಡಿ ಉಪವಾಸಮುರಿಯುವನು.

ಇದೇ ಸಂದರ್ಭದಲ್ಲಿ ಅನೇಕ ಜನ ಕುದುರೆ ಗೊರವರು ಕುಣಿಯುತ್ತ ತಮ್ಮನ್ನು ತಾವು ಚಾಟಿಯಿಂದ ಹೊಡೆದುಕೊಳ್ಳುತ್ತ ಸೇವೆ ಸಲ್ಲಿಸುವರು. ದೀವಟಿಗೆಯವರು ದೀವಟಿಗೆ

ಗಳನ್ನು ಹಿಡಿದುಕೊಂಡು ಸೇವೆಸಲ್ಲಿಸುವರು. ಚವುರದ ಗೊರವಿಯರು ಚಾಮರ ಬೀಸುತ್ತ ಸೇವೆ ಸಲ್ಲಿಸುವರು. ಭಕ್ತರು ಗೊರವರ ದೋಣಿಗಳಿಗೆ ಹಣ್ಣುಪ್ಪ ಅರ್ಪಿಸುವರು. ಈ ಸಂದರ್ಭದಲ್ಲಿ ನಾಯಿಗೊರವರು ನಾಯಿಯಂತೆ ಅರಚುತ್ತ ಆ ದೋಣಿಯ ಸುತ್ತ ಓಡಾಡುತ್ತ ತಮ್ಮ ತಮ್ಮಲ್ಲಿ ಕಚ್ಚಾಡುತ್ತ ಕೊನೆಗೆ ದೋಣಿಯಲ್ಲಿರುವ ಆಹಾರವನ್ನು ತಿನ್ನುವರು.

೨೦೦೮ರ ಕಾರಣಿಕೋತ್ಸವದ ಸಂದರ್ಭದಲ್ಲಿ ನಾನು ಕ್ಷೇತ್ರ ಕಾರ್ಯಕ್ಕೆ ಹೋಗಿದ್ದಾಗ ಬಂದ ಕಾರಣಿಕದ ನುಡಿ **ಹುಟ್ಟಿದ ಕಂದ ಕಷ್ಟಪಟ್ಟಿತಲೇ ಪರಾಕ್** ಎಂಬುದು. ಸ್ಥಳೀಯರಲ್ಲಿ ಕೆಲವರು ಈ ವರ್ಷ ಚುನಾವಣಾ ವರ್ಷವಾದ್ದರಿಂದ ಅದನ್ನು ಮುಂದೆ ಬರುವ ಸರ್ಕಾರಕ್ಕೆ ಅನೇಕ ಕಷ್ಟಗಳು ಬರುವುವು ಎಂದು ಅರ್ಥೈಸಿದ್ದರು. ಕಾಕತಾಳೀಯ ವೆಂಬಂತೆ ೧೧೩ರ ಮಾಯಾಸಂಖ್ಯೆಯನ್ನು ಕಾಪಾಡಿಕೊಳ್ಳಲು ನಡೆದ ನಾಟಕಗಳನ್ನು ಕಾಣಬಹುದು. ಇದಲ್ಲದೇ ಬೆಂಗಳೂರಿನಲ್ಲಿ ನಡೆದ ಬಾಂಬ್ ದಾಳಿ ಮೊದಲಾದವನ್ನು ಈ ನಿಟ್ಟಿನಲ್ಲಿ ಉದಾಹರಿಸಬಹುದು. ವಿಶೇಷವಾಗಿ ಹಾವೇರಿ ಜಿಲ್ಲೆಯಲ್ಲಿ ನಡೆದ ಗೋಲಿಬಾರ್ ಪ್ರಸಂಗವನ್ನು ಇಲ್ಲಿ ನೋಡಬಹುದು.

ಕಾರಣಿಕದ ನುಡಿ ಒಂದು ಕಾಲಕ್ಕೆ ಕೇವಲ ಒಂದು ಪ್ರದೇಶಕ್ಕೆ ಮೀಸಲಾಗಿದ್ದರೂ ಸಮಾಜದ ವ್ಯವಸ್ಥೆ ಬೆಳೆದಂತೆ ಕಾರಣಿಕದ ನುಡಿಯು ಅರ್ಥೈಸುವಿಕೆಯೂ ಬದಲಾಗುವುದನ್ನು ಕಾಣಬಹುದು. ಉದಾಹರಣೆಗೆ ಸ್ವಾತಂತ್ರ್ಯ ಪೂರ್ವದಲ್ಲಿ ಕೇವಲ ಒಂದು ಸಂಸ್ಥಾನಕ್ಕೆ ಮೀಸಲಾದ ಕಾರಣಿಕದ ನುಡಿಯ ಅರ್ಥಗಳು ಸ್ವಾತಂತ್ರ್ಯಾನಂತರ ರಾಜ್ಯಕ್ಕೆ, ದೇಶಕ್ಕೆ ಅನ್ವಯಿಸಿರುವುದನ್ನು ಕಾಣಬಹುದು. ಇತ್ತೀಚೆಗಂತೂ ಅಂತರರಾಷ್ಟ್ರೀಯ ಮಟ್ಟದಲ್ಲೂ ಕಾರಣಿಕದ ಅರ್ಥೈಸುವಿಕೆಯನ್ನು ನಾವು ಕಾಣಬಹುದು.

* ೧೯೦೦ರಿಂದ ಈವರೆಗೂ ನಡೆದ ಕಾರಣಿಕಗಳ ನುಡಿಗಳನ್ನು ಮೈಲಾರದ ಒಡೆಯರು ಸಂಗ್ರಹಿಸಿಟ್ಟಿದ್ದಾರೆ. ಅವರ ಸಂಗ್ರಹದಿಂದ ಪಡೆದ ಕಾರಣಿಕದ ನುಡಿಗಳನ್ನು ಈ ಮಹಾಪ್ರಬಂಧದ ಅನುಬಂಧ – ೧ (ಪುಟ – ೨೦೫ – ೨೦೯)ರಲ್ಲಿ ನೀಡಲಾಗಿದೆ.

## ಅಡಿಟಿಪ್ಪಣಿಗಳು :

1. ದೇವೇಂದ್ರ ಕುಮಾರ ಹಕಾರಿ; ಜಾನಪದ ಸಾಹಿತ್ಯ ದರ್ಶನ – ೧೦; ಪುಟ – ೧೭
2. ಪ್ರೊ. ಡಿ. ಲಿಂಗಯ್ಯ; ಜಾನಪದ ಶೋಧನ; ಪುಟ – ೫೭
3. ಅದೇ ಪುಟ
4. ಮೈಲಾರಲಿಂಗ ಉದ್ಭವವಾದ ಸ್ಥಾನ ಹುತ್ತವಾದ್ದರಿಂದ, ಈ ರೀತಿ ಹುತ್ತ ಕಂಡಲ್ಲೆಲ್ಲ ಸಕ್ಕರೆ ಹಾಕುವರೆಂದು ಸ್ಥಳೀಯರು ಹೇಳುತ್ತಾರೆ.
5. ಚೌಕನೆಯ ಕಟ್ಟೆಯ ಮೇಲೆ ಕಲ್ಲಿನ ಪಟ್ಟಿಗಳನ್ನು ನಿಲ್ಲಿಸಿ, ಅದರ ಮೇಲೆ ನಿಲ್ಲಿಸಿದ ತ್ರಿಶುಲಾಕಾರದ ಕಲ್ಲು. ಇದನ್ನು ಮೈಲಾರ ದೇವರ ಪ್ರತೀಕವೆಂದು ಭಕ್ತರು ನಂಬುತ್ತಾರೆ.
6. ಸೋಮಲಿಂಗನ ಪಂಥ ಮೈಲಾರಕ್ಕೆ ತುಂಬ ಹತ್ತಿರವಾದುದು. ಮೈಲಾರನ ಆಚರಣೆಗಳ ಹಲವಾರು ರೂಪಗಳನ್ನು ಇಲ್ಲಿ ನೋಡಬಹುದು. ಈ ದೇವರ ಹೊರೆ ಹೊರುವವರನ್ನು ಬಿಂಗೇರು ಎನ್ನುತ್ತಾರೆ. ಮೈಲಾರದಲ್ಲಿ ಜಾತ್ರೆ ನಡೆಯುವ ಸಂದರ್ಭದಲ್ಲಿಯೇ ಸೋಮಲಿಂಗನ ಜಾತ್ರೆಯೂ ನಡೆಯುತ್ತದೆ. ವಿಚಿತ್ರವೆಂದರೆ ಸೋಮಲಿಂಗನ ಭಕ್ತರು ಮೈಲಾರಕ್ಕೂ, ಮೈಲಾರನ ಭಕ್ತರು ಸೋಮಲಿಂಗನ ಜಾತ್ರೆಗೂ ಬರುವುದಿಲ್ಲ. – ಪ್ರೊ. ಎಸ್. ಎಸ್. ಹಿರೇಮಠ; ಜನಪದ ಸಮಾಜ ಸಂಸ್ಕೃತಿ; ಪುಟ – ೮
7. ಇದೇ ರೀತಿಯ ವೈಷ್ಣವ ಸಂಪ್ರದಾಯವೊಂದು ಕೊಪ್ಪಳ ಜಿಲ್ಲೆಯ ನಿಲೋಗಲ್‌ನಲ್ಲಿ ನಡೆಯುತ್ತದೆ. ಅಲ್ಲಿ ಕುದುರೆಕಾರನಾದವನು ವಿಷ್ಣುವಿನ ಹತ್ತಾವತಾರಗಳನ್ನು ಹೇಳಿದರೂ ಬಾಗಿಲು ತೆಗೆಯದ ದೇವಿ, ನಾನು ನಿನ್ನ ವಿಷ್ಣುಮೂರ್ತಿ ಬಂದಿದ್ದೇನೆ ಎಂದ ತಕ್ಷಣ ಬಾಗಿಲು ತೆಗೆಯುತ್ತಾಳೆ. ಭಾಗಶಃ ಮೈಲಾರನ ಆಚರಣೆಗಳ ಪ್ರಭಾವವನ್ನು ಇಲ್ಲಿ ಕಾಣಬಹುದು.
8. ಮೈಲಾರನಿಗೆ ಸಂಬಂಧಿಸಿದ ಐತಿಹ್ಯ ಹಾಗೂ ಪುರಾಣಗಳ ಪ್ರಕಾರ ಇವನು ಅವತಾರ ಎತ್ತಿದ್ದು ಹಾಗೂ ಲಿಂಗ ಉದ್ಭವಿಸಿದ್ದು ಮಾರ್ಗಶಿರ ಶುದ್ಧ ಷಷ್ಠಿಯಂದು.
9. ಶ್ರೀಮೈಲಾರಲಿಂಗೇಶ್ವರ ದಿವ್ಯ ಚರಿತಾಮೃತ – ಶ್ರೀ ಕೃಷ್ಣಪ್ಪ. ಪು. ಸಂ. ೨೧೫
10. ಮಾಘ ಶುದ್ಧ ಸಪ್ತಮಿ
11. ಹೊಲಗದ್ದೆಗಳಲ್ಲಿ ದನ ಕರುಗಳು ಹಾಕಿದ ಸೆಗಣಿಯನ್ನು ತೆಗೆಯದೇ ಹಾಗೆಯೇ ಬಿಟ್ಟರೆ ಅದು ಒಣಗಿ ಬೆರಣಿಗಳ (ಕುಳ್ಳು) ರೂಪ ತಾಳುತ್ತದೆ. ಈ ರೀತಿ ಒಣಗಿದ ಬೆರಣಿ(ಕುಳ್ಳು)ಗಳನ್ನು ಕಾಕುಳ್ಳು ಎನ್ನುವರು.
12. ಡಾ ॥ ಎಂ. ಎನ್. ವೆಂಕಟೇಶ, ಮೈಲಾರದ ಜಾತ್ರೆಗಳು. ಪುಟ – ೧೧೧–೧೧೨
13. ಜಿಲ್ಲಿನಾಕರದ ಸಾಕಷ್ಟು ಎತ್ತರವಾದ ಕಂಬ. ಕಾರಣಿಕದ ಗೊರವ ಇದರ ಮೇಲೇರಿ ಕಾರಣಿಕವನ್ನು ಹೇಳುತ್ತಾನೆ.

* * *

# ಅಧ್ಯಾಯ ೭ : ಇತರ ಆಚರಣೆಗಳು

## (ನಂಬಿಕೆ, ವಿಧಿ ಇತ್ಯಾದಿ)

೧. ನಂಬಿಕೆಗಳು
೨. ವಿಧಿಗಳು
೩. ನಿಷೇಧಗಳು
೪. ಹರಕೆಗಳು
೫. ಪವಾಡಗಳು
೬. ಆಚರಣೆಗಳು

# ಅಧ್ಯಾಯ : ೭

# ಇತರ ಆಚರಣೆಗಳು

## (ನಂಬಿಕೆ, ವಿಧಿ ಇತ್ಯಾದಿ)

### ೭.೧ ನಂಬಿಕೆಗಳು

ಮಾನವನ ಬದುಕು ನಂಬಿಕೆಗಳನ್ನು ಆಧರಿಸಿಯೇ ರೂಪುಗೊಂಡಿದೆ. ವ್ಯಕ್ತಿಯಿಂದ ವ್ಯಕ್ತಿಗೆ, ಜನಾಂಗದಿಂದ ಜನಾಂಗಕ್ಕೆ, ಕಾರ್ಯಮಾಡುವ ಕ್ರಮ, ಗ್ರಹಿಕೆ, ಕಲ್ಪನಾಶಕ್ತಿ ಮೊದಲಾದವುಗಳ ಆಧಾರದಲ್ಲಿ ವಿಭಿನ್ನ ನಂಬಿಕೆಗಳು ಆಚರಣೆಯಲ್ಲಿರುತ್ತವೆ. ಒಂದು ಜನಾಂಗವು ಹಲವಾರು ವಿಧಾನಗಳ ಮೂಲಕ ತನ್ನಲ್ಲಿರುವ ನಂಬಿಕೆಗಳನ್ನು ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ವರ್ಗಾಯಿಸುತ್ತ, ಅದರ ಪಾಲನೆಗೆ ಒತ್ತಡವನ್ನು ಹೇರುತ್ತದೆ. ಮಾನವನ ಆಸೆ, ಆಕಾಂಕ್ಷೆ, ಭೀತಿ ಮೊದಲಾದವು ನಂಬಿಕೆಗಳ ಉಗಮ ಹಾಗೂ ಬೆಳವಣಿಗೆಗೆ ಕಾರಣವೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

ಮಾರಿಯಾ ಲೀಚ್ ಅವರು – "ಪುನರಾವರ್ತನೆಯಾಗುವ, ಸಾಮೂಹಿಕ ವೀಕ್ಷಣೆಯ ಫಲವಾಗಿ ಮೂಡುವ ಭೂತ, ವರ್ತಮಾನ ಹಾಗೂ ಭವಿಷತ್ತುಗಳೊಂದಿಗೆ ಕಾರ್ಯ ಕಾರಣ ಸಂಬಂಧವನ್ನು ಹೊಂದಿರುವ ಸಾಂಪ್ರದಾಯಿಕ ಸ್ವೀಕೃತ ಪರಿಕಲ್ಪನೆಯೇ ಜನಪದ ನಂಬಿಕೆ" ಎಂದು ಹೇಳಿದ್ದಾರೆ.

ಪ್ರೊ. ದೇ. ಜ. ಗೌ ಅವರು ನಂಬಿಕೆಯನ್ನು ಕುರಿತು – "ದೇಶ ಕಾಲಗಳ ಹಿನ್ನೆಲೆಯಲ್ಲಿ ಪರಂಪರಾನುಗತ ಜ್ಞಾನ, ದೀರ್ಘಾನುಭವ, ಕಾಲ್ಪನಿಕ ಆಲೋಚನೆ ಹಾಗೂ ಅತೀಂದ್ರಿಯ ವ್ಯಾಪಾರದ ಫಲವಾಗಿ ಮೂಡಿದ ಶ್ರದ್ಧೆಯೇ ನಂಬಿಕೆ" ಎಂದಿದ್ದಾರೆ[1].

ಬದುಕಿನಲ್ಲಿ ಆಕಸ್ಮಿಕವಾದ ಒಂದು ಘಟನೆ ಅಥವಾ ವಸ್ತು ಸಂಗಾತಿ ಪುನಃ ಪುನಃ ಪರಿವರ್ತನೆಗೊಂಡಾಗ ಅದು ನಂಬಿಕೆಯಾಗುತ್ತದೆ. ಮೂಲತಃ ಕಾಲ್ಪನಿಕ ಆಲೋಚನೆಯೊಂದು ವೈಯುಕ್ತಿಕ ನೆಲೆಯಲ್ಲಿ ಹುಟ್ಟಿಕೊಂಡು ಸಮೂಹದಲ್ಲಿ ಸಾಮುಹಿಕ ಮಾನ್ಯತೆಯನ್ನು ಪಡೆದುಕೊಂಡಾಗ ಅದು ನಂಬಿಕೆಯಾಗುತ್ತದೆ[2].

ಜನಪದರ ಕೆಲಸ ಆಲೋಚನೆ, ರೂಢಿ, ಜೀವನಕ್ರಮ, ಸಂಪ್ರದಾಯ, ಆಚರಣೆಗಳೆಲ್ಲವೂ ಮೂಲಭೂತವಾಗಿ ನಂಬಿಕೆಗಳಿಂದ ಪ್ರೇರಿತವಾದವು. ನಂಬಿಕೆಯು ಸಂಪ್ರದಾಯ ಹಾಗೂ ಆಚರಣೆಗಳೊಂದಿಗೆ ಅಂತರ್ ಸಂಬಂಧವನ್ನು ಹೊಂದಿದ್ದು ಆ ಮೂಲಕ ಅದು ಕ್ರಿಯಾರೂಪವನ್ನು ತಾಳುತ್ತದೆ. ಜಾನಪದದ ಪ್ರಕಾರಗಳಾದ ಗಾದೆ, ವೈದ್ಯ, ಕಥೆ, ಐತಿಹ್ಯ, ಪುರಾಣ, ಮಂತ್ರವಿದ್ಯೆ, ಧರ್ಮ ಮೊದಲಾದವುಗಳೊಂದಿಗೆ ನಂಬಿಕೆಗಳು ಒಳ ಸಂಬಂಧವನ್ನು ಹೊಂದಿರುತ್ತವೆ.

ಮೈಲಾರಲಿಂಗನ ಭಕ್ತರಲ್ಲಿಯೂ ಮೈಲಾರನನ್ನು ಕುರಿತು ಅನೇಕ ನಂಬಿಕೆಗಳಿವೆ. ಅವನ್ನು ನಾವು ಧಾರ್ಮಿಕ ನಂಬಿಕೆಗಳು ಹಾಗೂ ಸಾಮಾನ್ಯ ನಂಬಿಕೆಗಳು ಎಂದು ಎರಡು ಬಗೆಯಲ್ಲಿ ನೋಡಬಹುದು.

**ಧಾರ್ಮಿಕ ನಂಬಿಕೆಗಳು :**

೧. ಮಣಿಕಾಸುರನೇ ದೇವರ ಕುದುರೆ, ಅವನ ಮೇಲೆ ದೇವರು ಸವಾರಿ ಮಾಡುತ್ತಾನೆ ಎಂಬ ನಂಬಿಕೆಯನ್ನು ಮೈಲಾರನ ಭಕ್ತರಲ್ಲಿ ನೋಡಬಹುದು. ಮಣಿಕ ಮಲ್ಲರನ್ನು ಮರ್ಧಿಸಲು ಶಿವನು ಭೈರವನ ರೂಪತಾಳಿ ಬಂದಾಗ ಮೊದಲು ಮಣಿಕನನ್ನು ನಾಶ ಮಾಡಲು ಮುಂದಾಗುತ್ತಾನೆ. ಆಗ ಶಿವನ ಸ್ಪರ್ಶದಿಂದ ಜ್ಞಾನೋದಯವಾದ ಮಣಿಕನು ತನ್ನನ್ನು ಕುದುರೆಯ ರೂಪದಲ್ಲಿ ವಾಹನವಾಗಿ ಸ್ವೀಕರಿಸುವಂತೆ ಕೋರಿಕೊಂಡನು. ಶಿವನು ಹಾಗೆಯೇ ಆಗಲೆಂದು ಒಪ್ಪಿ, ಮಣಿಕನನ್ನು ತನ್ನ ವಾಹನವಾಗಿಸಿಕೊಳ್ಳುತ್ತಾನೆ ಎಂದು ಜನ ಸಾಮಾನ್ಯರ ನಂಬಿಕೆ. ಬಹುಶಃ ಇದೇ ಕಾರಣಕ್ಕೆ ಕುದುರೆ ಹಬ್ಬ ಹಾಗೂ ಗುಗ್ಗರಿ ಪೂಜೆಗೆ ಮೈಲಾರದ ಆಚರಣೆಗಳಲ್ಲಿ ಮಹತ್ವ ಬಂದಿದೆ ಎನ್ನಬಹುದು.

೨. ರವಿವಾರ ಮೈಲಾರನ ಭಕ್ತರಿಗೆ ಪವಿತ್ರ ದಿನ : ಮೈಲಾರನ ಅವತಾರವಾಗಿರುವುದು ಮಣಿಕ ಹಾಗೂ ಮಲ್ಲಾಸುರರ ಸಂಹಾರಕ್ಕಾಗಿ. ಅವನು ಅವತಾರ ತಾಳಿದ್ದು ಮಾರ್ಗಶಿರ ಶುದ್ಧ ಷಷ್ಠಿ[3], ರವಿವಾರದಂದು. ಆದ್ದರಿಂದ ಮೈಲಾರನ ಅವತಾರದ ದಿನವೆಂದು ಮೈಲಾರನ ಭಕ್ತರು ರವಿವಾರವನ್ನು ಪವಿತ್ರ ದಿನವೆಂದು ಭಾವಿಸುತ್ತಾರೆ. ಈ ಕಾರಣದಿಂದ ಏನೇ ವಿಶೇಷ ಕಾರ್ಯಗಳನ್ನು ಮಾಡುವುದಿದ್ದರೂ ರವಿವಾರ

ಮಾಡುವುದು ವಾಡಿಕೆ. ದೋಣಿತುಂಬುವುದು, ಉಪವಾಸವಿರುವುದು, ದೇವಸ್ಥಾನಕ್ಕೆ ಹೋಗುವುದು, ಹೊಸ ಬಟ್ಟೆ, ಪಾತ್ರೆ ತರುವುದು ಮೊದಲಾದವನ್ನು ಅವರು ರವಿವಾರವೇ ಮಾಡುವರು. ಇದೇ ರೀತಿಯ ನಂಬಿಕೆಗಳನ್ನು ನಾವು ವಿಭಿನ್ನ ಸಂಪ್ರದಾಯಗಳಲ್ಲಿ ಕಾಣಬಹುದು. ಉದಾಹರಣೆಗೆ ಮಂಗಳವಾರ ಹಾಗೂ ಶುಕ್ರವಾರ ಹೆಣ್ಣುದೇವತೆಗಳ ಹೆಸರಿನಲ್ಲಿ, ಗುರುವಾರ ಸಾಯಿಬಾಬಾ, ರಾಘವೇಂದ್ರರ ವಾರ, ಸೋಮವಾರ ಬಸವಣ್ಣನ ವಾರ ಎಂಬ ಭಾವನೆ ಜನರಲ್ಲಿರುವುದನ್ನು ನಾವು ನೋಡಬಹುದಾಗಿದೆ.

೩. ಶಿವನು ಲಿಂಗರೂಪದಲ್ಲಿ ಮೊದಲು ಕಾಣಿಸಿಕೊಂಡದ್ದು ಕರಿಯಾಲದ ಬುಡದಲ್ಲಿ ಎಂಬ ನಂಬಿಕೆಯನ್ನು ಮೈಲಾರನ ಭಕ್ತರು ಹೊಂದಿದ್ದಾರೆ. ಮೈಲಾರದ ಒಡೆಯರು ಹೇಳುವಂತೆ ಶಿವನು ಕರಿಯಾಲದ ಬುಡದ ಹುತ್ತದಲ್ಲಿ ಲಿಂಗರೂಪದಲ್ಲಿ ಮೊದಲು ಕಾಣಿಸಿಕೊಂಡನಂತೆ. ಇದೇ ಸಂದರ್ಭದಲ್ಲಿ ಮೀನಗುಂದಿ[4]ಯಲ್ಲಿ ತಪಸ್ಸು ಮಾಡುತ್ತಿದ್ದ ಕಪಿಲಮುನಿಗಳಿಗೆ ಶಿವನು ಕನಸಿನಲ್ಲಿ ಬಂದು ತಾನು ಮೈಲಾರದ ಬಳಿಯಿರುವ ಹುತ್ತದಲ್ಲಿ ಇರುವುದಾಗಿ ತಿಳಿಸಿದನಂತೆ. ಬಳಿಕ ಅಲ್ಲಿಗೆ ಬಂದ ಕಪಿಲ ಮುನಿಗಳು ಹುತ್ತವನ್ನು ತೆಗೆಸಿ ನೋಡಿದಾಗ ಅಲ್ಲಿ ಶಿವಲಿಂಗವನ್ನು ಕಂಡು ಆನಂದದಿಂದ ಪೂಜೆ ಸಲ್ಲಿಸಿದರಂತೆ. ಅನಂತರ ಅದೇ ಹುತ್ತದ ಮಣ್ಣಿನಿಂದಲೇ ಮೈಲಾರದಲ್ಲಿ ಈಗಿರುವ ಮೂರ್ತಿಯನ್ನು ಮಾಡಿದರೆಂಬ ನಂಬಿಕೆ ಮೈಲಾರನ ಭಕ್ತವರ್ಗದಲ್ಲಿದೆ. ಈ ಅಂಶವನ್ನು ಜನಪದರು ಹಾಡುವ ಹಾಡುಗಳಲ್ಲಿಯೂ ಗಮನಿಸಬಹುದು.

ಅಟ್ಟ ಬೆಟ್ಟವ ಸೇರಿ ಸುತ್ತ ಬ್ಯಾಟಿಯನಾಡಿ
ಹುತ್ತದೊಳಗೆ ಒಡಮಾಡೋ । ನೀಲಕಂಠ
ಏಳಯ್ಯ ಬೆಳಗಾದವೋ ।
ಮೈಲಾರಲಿಂಗ ಎದ್ದು ಜಳಕವ ಮಾಡೋ..........

ಈ ನಂಬಿಕೆ ಕೇವಲ ಮೈಲಾರಕ್ಕೆ ಮಾತ್ರ ಸೀಮಿತವಾಗಿಲ್ಲ. ತಿರುಪತಿಯ ವೆಂಕಟೇಶ್ವರ, ಎಡೆಯೂರು ಸಿದ್ಧಲಿಂಗೇಶ್ವರ, ನಂಬಿಯಣ್ಣ, ಕುಕ್ಕೆ ಸುಬ್ರಹ್ಮಣ್ಯ,

ಜುಂಜಪ್ಪ ಮೊದಲಾದ ದೇವರುಗಳ ಅವತಾರದ ಹಿಂದೆಯೂ ಇವರು ಮೊದಲು ಕಂಡದ್ದು ಹುತ್ತದಲ್ಲಿ ಎಂಬ ಕಲ್ಪನೆಯಿದೆ.

೪. ದೇವರು ಕರಿಯಾಲದಲ್ಲಿ ವಾಸಿಸುತ್ತಾನೆ. ಆದ್ದರಿಂದ ಅದು ಪವಿತ್ರ ಎಂಬ ನಂಬಿಕೆ ಮೈಲಾರನ ಭಕ್ತರದು. ಇದೇ ಕಾರಣದಿಂದ ಮೈಲಾರನನ್ನು ಕರಿಯಾಲದಯ್ಯ ಎಂದು ಹೇಳಿದ್ದಾರೆ. ಸಂಸ್ಕೃತ ಪುರಾಣವಾದ ಮಲ್ಲಾರಿ ಮಹಾತ್ಮೆಯಲ್ಲಿ ಶಿವನು ಭೂಲೋಕದಲ್ಲಿ ಲಿಂಗರೂಪದಲ್ಲಿ ಅವತರಿಸಿದ್ದು ಆಲದ ಮರದ ಬುಡದಲ್ಲಿ ಎಂದು ಹೇಳಲಾಗಿದೆ. ಇದೇ ಅಂಶವನ್ನು ಜನಪದ ಗೀತೆಗಳಲ್ಲಿ ಸಹ ನೋಡಬಹುದಾಗಿದೆ.

ಬೇಡಿದ ಭಾಗ್ಯವ ಈಡ್ಯಾಡಿ ಕೊಡುವಂತ
ಧೀರರ‍್ಯೆದಾರೋ ಕರಿಯಾಲ ।
ದೇವರ ದೇವ್ರೋ.............

ಉದಿಯ ಕಾಲದಲ್ಲೆದ್ದಾನ ಸ್ವಾಮಿ ।
ಪ್ರಾತಕಾಲದಲ್ ಹೊರಟಾನ ಸ್ವಾಮಿ ।

ಕರಿಯಾಲಕ ಹೋಗಿ ಮೂರುತವಾಗಿ ।
ಗನ ಪಣಿಯಲಿ ಚಂದ್ರನ ಸೂಡಿ ।
ಕರಿಯಾಲ ಪುರಕಿನ್ನ ಬಂದಾನ ನಮ ಶಿವ ।
ಅಲ್ಲಿ ನಮ ಶಿವ ನೆಲಿಗೊಂಡ ॥

೫. ದೇವರು ಎಕ್ಕೆಯಗಿಡದಲ್ಲಿ ವಾಸಿಸುತ್ತಾನೆ ಎಂಬ ನಂಬಿಕೆಯೂ ಮೈಲಾರನ ಭಕ್ತರಲ್ಲಿದೆ. ಎಕ್ಕೆಯ ಗಿಡವನ್ನು ಸೂರ್ಯನಿಗೆ ಸಂಬಂಧಿಸಿದ ಅನೇಕ ಆಚರಣೆಗಳಲ್ಲಿ ಕಾಣಬಹುದು. ಮೈಲಾರನನ್ನು ಮೈಲಾರ ಮಾರ್ತಾಂಡ (ಸೂರ್ಯ) ಎಂದು ಹೇಳಿರುವುದರ ಹಿನ್ನೆಲೆಯಲ್ಲಿ ಬಹುಶಃ ಈ ನಂಬಿಕೆ ಬಂದಿರಬಹುದು.

೬. ಮೈಲಾರದೇವರ ಸಂಬಂಧವಾಗಿ ಭಂಡಾರ[5] ಕುರಿತು ಅನೇಕ ನಂಬಿಕೆಗಳಿವೆ. ಮೈಲಾರ ದೇವರು ಖಂಡುಗ ಭಂಡಾರದವನು, ಮೈಲಾರನಿಗಿಂತ ಮೊದಲು

ಭಂಡಾರ ಹುಟ್ಟಿದ್ದು ಎಂಬ ನಂಬಿಕೆಗಳು ಭಕ್ತರಲ್ಲಿವೆ. ಮೈಲಾರದ ಸಂಪ್ರದಾಯದಲ್ಲಿ ಭಂಡಾರಕ್ಕೆ ಹೆಚ್ಚಿನ ಆದ್ಯತೆ ಕೊಡುವರು. ಶಿವನು ಲಿಂಗರೂಪದಲ್ಲಿ ಅವತರಿಸಿದಾಗ ಅವನ ಜೊತೆಗೇ ಭಂಡಾರವೂ ಹುಟ್ಟಿತೆಂದು ಹೇಳುತ್ತಾರೆ. ಇನ್ನೊಂದು ನಂಬಿಕೆಯ ಪ್ರಕಾರ ಭಂಡಾರವನ್ನು ಶಿವನ ಆದೇಶವನ್ನು ಅನುಸರಿಸಿ ವಿಷ್ಣುವು ನಂದಿಯ ಕೊಂಬುಗಳಿಂದ ಸಿದ್ಧಪಡಿಸಿದನು ಎನ್ನಲಾಗುತ್ತದೆ. ಹೀಗಾಗಿ ಭಂಡಾರಕ್ಕೆ ಇನ್ನೂ ಹೆಚ್ಚಿನ ಮಹತ್ವ ಬಂದಿದೆ. ಭಕ್ತರು ಖಂಡುಗ ಭಂಡಾರದೊಡೆಯ ಎಂದು ಇವನನ್ನು ವರ್ಣಿಸುತ್ತಾರೆ.

ಮೈಲಾರ ಸಂಪ್ರದಾಯದಲ್ಲಿ ಭಂಡಾರ ತಯಾರಿಸುವ ವಿಶಿಷ್ಟ ಪದ್ಧತಿಯಿದೆ. ಅರಿಷಿಣ ಕೊಂಬು, ಕರಿಯೆಳಿ, ನೆಗ್ಗಲಿ ಮುಳ್ಳು ಮೊದಲಾದ ವಸ್ತುಗಳನ್ನು ಸೇರಿಸಿ ಚೆನ್ನಾಗಿ ಅರೆದು ಪುಡಿಮಾಡಿ, ಮೈಲಾರನ ಅವತಾರದ ದಿನವೆಂದು ನಂಬುವ ಚಂಪಾಷಷ್ಠಿಯಂದು ದೇವರಿಗೆ ಸಮರ್ಪಿಸುತ್ತಾರೆ. ಮರುದಿನ ಒಡೆಯರ ಮೂಲಕ ಇದೇ ಭಂಡಾರವನ್ನು ಪಡೆದ ಗೊರವ – ಗೊರವಿಯರು ಹಾಗೂ ಭಕ್ತರು ವರ್ಷಪೂರ್ತಿ ಬೇರೆ ಭಂಡಾರದೊಡನೆ ಬೆರೆಸಿ, ಬಳಸುತ್ತಾರೆ.

ಮಾರ್ತಾಂಡ ವಿಜಯದಲ್ಲಿ ಬರುವ ಒಂದು ಕಥೆಯೂ ಸಹ ಈ ನಂಬಿಕೆಗೆ ಪುಷ್ಟಿ ಕೊಡುತ್ತದೆ. ಕೈಲಾಸದಲ್ಲಿ ಭಂಡಾರ ರಜನಿ ಎಂಬುವವಳು ಶಿವನ ಪರಿಚಾರಿಕೆಯಾಗಿದ್ದಳು. ಅವಳ ಬಯಕೆಯಂತೆ ಶಿವನ ವರಪ್ರಸಾದದಿಂದ ಅವಳು ಭೂಲೋಕಕ್ಕೆ ಬಂದು ಕುಮಾರ ಪರ್ವತದಲ್ಲಿ ಹಳದಿ ಸಸ್ಯವಾಗಿ ಉದಿಸಿದಳು. (ಆದ್ದರಿಂದಲೇ ಅವಳಿಗೆ ಕುಮಾರ ನಾಭಿಜೆ ಎಂಬ ಹೆಸರೂ ಇದೆ.) ಭಕ್ತರು ಈ ಸಸ್ಯವನ್ನು ಹುಡುಕಿ ತಂದು ಸಂಸ್ಕರಿಸಿ ಮೈಲಾರನಿಗೆ ಅರ್ಪಿಸಿದರು. ಅಂದಿನಿಂದ ಭಂಡಾರ ಸಕಲ ಲೋಕಗಳನ್ನು ಪರಿಹರಿಸುವ ಸಾಮರ್ಥ್ಯವನ್ನು ಪಡೆಯಿತು. ಈ ವಿಷಯಕ್ಕೆ ಸಂಬಂಧಿಸಿದ ಶ್ಲೋಕವೊಂದು ಮಾರ್ತಾಂಡ ವಿಜಯದಲ್ಲಿ ಕಂಡುಬರುತ್ತದೆ.

ಸ್ಕಂದನಾಭಿ ಸಮುದ್ಭೂತೋ ಶ್ರೀ ಮೈರಾಲ ಪ್ರಿಯಂಕರೀ ।
ಗೌರಿ ಪ್ರಿಯೋ ತಡಿದ್‌ಗೌರಿ ಲಕ್ಷ್ಮಿ ಸುತೇ ನಮೋಸ್ತುತೇ ॥

ಪವಾಡಗಳ ಸಂದರ್ಭಗಳಲ್ಲಿ ಆಗಬಹುದಾದ ಗಾಯಗಳಿಗೂ ಇದೇ ಭಂಡಾರವನ್ನು ಹಚ್ಚುವುದು ವಾಡಿಕೆ. ವೈಜ್ಞಾನಿಕವಾಗಿ ಹೇಳುವುದಾದರೆ ಅರಿಷಿಣಕ್ಕೆ ನಂಜುನಿವಾರಿಸುವ ಶಕ್ತಿಯಿದೆ. ಮೈಲಾರನ ಭಕ್ತರು ನಂಬುವಂತೆ ಬೀರದೇವರು ಮೈಲಾರನ ಮಗ, ಎಲ್ಲಮ್ಮ ಮತ್ತು ಗುತ್ತೆಮ್ಮರು ಮೈಲಾರನ ತಂಗಿಯರು. ಇವರಿಬ್ಬರೂ ತಮ್ಮ ಅಣ್ಣನ ಮನೆಯಿಂದ ಭಂಡಾರವನ್ನು ಕದ್ದೊಯ್ದರು.

೯. ದೇವರ ಕುದುರೆಯ ಬಣ್ಣ ಬಿಳಿ ಎಂಬ ನಂಬಿಕೆ ಮೈಲಾರನ ಭಕ್ತರಲ್ಲಿ ಮನೆ ಮಾಡಿದೆ. ದೇವರ ಕುದುರೆಗೆ ಸಂಬಂಧಿಸಿದಂತೆ ಇರುವ ಧ್ಯಾನ ಶ್ಲೋಕವೊಂದು ಹೀಗಿದೆ[6]

ಧ್ಯಾಯೋನ್ಮಲ್ಲಾರಿದೇವಂ ಕನಕಗಿರಿ ನಿಭಂ ಮ್ಹಾಲಸಾ ಭೂಷಿತಂಕಂ
ಶ್ವೇತಾಶ್ವಂ ಖಡ್ಗ ಹಸ್ತಂ ವಿವಿಧ ಬುಧಗಣೈಃ ಸೇವ್ಯವಾನಂಕೃತಾರ್ಥ್ಯೈಃ ।
ಯುಕ್ತಾಘ್ರಿಂ ದೈತ್ಯ ಮೂರ್ಧ್ನೀ ಡಮರು ವಿಲಸಿತಂ ನೈಶಚೂರ್ಣಾಭಿರಾಮಂ
ನಿತ್ಯ ಭಕ್ತೇಷು ತುಷ್ಟಂ ಶ್ವಗಣ ಪರಿವೃತಂ ಶಂಭುಂಮೊಂಕಾರಗಮ್ಯಂ ॥

೧೦. ಈ ನಂಬಿಕೆಯಂತೆ ದೇವರ ಕುದುರೆ ಬಿಳಿ ಬಣ್ಣದ್ದಾಗಿದೆ. ಆದರೆ ದೇವರ ಕುದುರೆ ನೀಲಿ ಬಣ್ಣದ್ದೆಂದು ಹೇಳುವ ಸಂತ ರಾಮದಾಸರ ಪದ್ಯವೊಂದಿದೆ ಅದರಲ್ಲಿ

**ದೇವ ಶಿವಾಚಾ ಅವತಾರ ಜಾಲುನಿಬಸಲಾ ಗಡಾವರ**
**ಏಕನೀಳ್ಯಾ ಘೋಡ್ಯಾವರ । ಏಕ ಧವಳ್ಯಾ ನಂದೀವರ ॥**[7]

**ಸಾಮಾನ್ಯ ನಂಬಿಕೆಗಳು :**

೧. ದೇವರಗುಡ್ಡದಲ್ಲಿರುವವನು ತಮ್ಮ, ಮೈಲಾರದಲ್ಲಿರುವವನು ಅಣ್ಣ. ಆದ್ದರಿಂದ ಮೊದಲು ತಮ್ಮನ ಭೇಟಿಮಾಡಿದ ನಂತರ ಮೈಲಾರಕ್ಕೆ ಬರಬೇಕು.

೨. ಏಳು ಕೋಟಿ ಮೈಲಾರಲಿಂಗನ ಗಿರಿಗಳಿರುವುದು ಒಟ್ಟು ಎಪ್ಪತ್ತೇಳು ಎಂಬುದು ಭಕ್ತರ ನಂಬಿಕೆ. ಕರ್ನಾಟಕ, ಆಂಧ್ರಪ್ರದೇಶ ಹಾಗೂ ಮಹಾರಾಷ್ಟ್ರಗಳಲ್ಲಿ ಸ್ವಯಂಭೂ ಲಿಂಗಗಳಿರುವ ಕ್ಷೇತ್ರಗಳು ಎಪ್ಪತ್ತೇಳು ಹಾಗೂ ಇವೆಲ್ಲವೂ ಜಾಗೃತ ಕೇಂದ್ರಗಳು. ಭಾರತಹುಣ್ಣಿಮೆಯ ಕಾರಣಿಕೋತ್ಸವಕ್ಕೆ ಈ ಎಲ್ಲ ಎಪ್ಪತ್ತೇಳು ಗಿರಿಗಳಿಂದಲೂ ಕಪ್ಪಕಾಣಿಕೆ ಬಂದು ಸೇರುತ್ತದೆ.

೩. ಅಗಿ ಹುಣ್ಣಿಮೆಯಂದು ಮೈಲಾರನ ಮದುವೆಯ ಸಂದರ್ಭದಲ್ಲಿ ಹಾಲು ಉಕ್ಕಿಸುವಾಗ ಅದು ಯಾವ ದಿಕ್ಕಿಗೆ ಉಕ್ಕಿ ಹರಿಯುವುದೋ ಆ ದಿಕ್ಕಿನಲ್ಲಿ ಮಳೆ ಬೆಳೆ ಹೆಚ್ಚು ಎಂಬ ನಂಬಿಕೆ ಜನಪದರಲ್ಲಿದೆ. ಸಾಮಾನ್ಯವಾಗಿ ಹೊಸಮನೆಯ ಪ್ರವೇಶದ ಸಂದರ್ಭದಲ್ಲಿ ಹಾಲು ಉಕ್ಕಿಸುವುದನ್ನು ನಾವು ಕಾಣುತ್ತೇವೆ. ಆದರೆ ಇಲ್ಲಿನ ಆಚರಣೆಗಳಲ್ಲಿ ಈ ಸಂಪ್ರದಾಯವನ್ನು ನಾವು ನೋಡಬಹುದು.

೪. ಅಗಿ ಹುಣ್ಣಿಮೆ ಮೈಲಾರಲಿಂಗ ಹಾಗೂ ಗಂಗಿಮಾಳಮ್ಮನ ಲಗ್ನದ ಸಂದರ್ಭ. ಈ ಕಾರ್ಯಕ್ಕೆ ಮೊದಲೇ ನದಿಯ ದಡದ ಮಣ್ಣು ತಂದು ಒಂಬತ್ತು ಹೊಸ ಮಡಿಕೆಗಳಲ್ಲಿ ಜೋಳ, ಭತ್ತ, ರಾಗಿ, ಹೆಸರು, ಕಡಲೆ, ಗೋದಿ, ಎಳ್ಳು, ನವಣೆ ಹಾಗೂ ಉದ್ದು ಹೀಗೆ ಒಂಬತ್ತು ವಿಧವಾದ ಧಾನ್ಯಗಳನ್ನು ಹಾಕುವರು. ಈ ಮಡಿಕೆಗಳಲ್ಲಿ ಹಾಕಿದ ಕಾಳುಗಳು ಮೈಲಾರನ ಮದುವೆಯ ಹೊತ್ತಿಗೆ ಚೆನ್ನಾಗಿ ನಾಟಿಕೊಂಡು ಮೊಳಕೆಯೊಡೆದಿರುತ್ತವೆ. ಮದುವೆಗೆ ಬಂದ ಭಕ್ತರು ಈ ಬೆಳೆಗಳಲ್ಲಿ ಯಾವ ಅಗಿಗಳು ಸಮೃದ್ಧವಾಗಿ ಬಂದಿವೆಯೋ ಆ ವರ್ಷ ಆ ಬೆಳೆ ಚೆನ್ನಾಗಿ ಬರುವುದೆಂದು ತಿಳಿದು ತಮ್ಮ ಹೊಲಗಳಲ್ಲಿ ಅದೇ ಬೆಳೆಯನ್ನು ಬಿತ್ತುವರು. ಈ ನಂಬಿಕೆಯ ಹಿಂದೆ ವೈಜ್ಞಾನಿಕ ತಳಹದಿಯೂ ಇರುವುದನ್ನು ನಾವು ಕಾಣಬಹುದಾಗಿದೆ. ಸಾಮಾನ್ಯವಾಗಿ ಬೆಳೆಯನ್ನು ಬಿತ್ತುವಾಗ ಮುಂದೆ ಅದು ಹೇಗೆ ಬರುವುದೆಂದು ಮೊದಲೇ ಪರೀಕ್ಷಿಸಿ ನಂತರ ಹೊಲದಲ್ಲಿ ಬಿತ್ತುವ ಕ್ರಮದಿಂದ ಭವಿಷ್ಯದಲ್ಲಿ ಉತ್ತಮ ಬೆಳೆಯನ್ನು ಪಡೆಯಬಹುದು ಎಂಬ ಅನುಭವ ಈ ನಂಬಿಕೆಯ ಹಿಂದಿರುವುದನ್ನು ನಾವು ಗಮನಿಸಬಹುದು.

೫. ದೋಣಿಯನ್ನು ಪರಿಶೀಬಟ್ಟಲು ಎಂದೂ ಕರೆಯುತ್ತಾರೆ. ಅಂದರೆ ದೋಣಿ ಅಷ್ಟೊಂದು ಪರಿಶುದ್ಧವಾದುದು. ಇದರಲ್ಲಿ ವಿಷವಿಕ್ಕಿದರೂ ಅದು ಅಮೃತವಾಗುವುದು ಎಂಬ ನಂಬಿಕೆಯಿದೆ.

೬. ಕೆಲವರ ನಂಬಿಕೆಯಂತೆ ದೋಣಿ ಮಲ್ಲಾಸುರನ ಶಿರ. ಶಿವನು ಮಲ್ಲಾಸುರನನ್ನು ವಧಿಸಿದ ನಂತರ ಅವನ ತಲೆಯನ್ನು ದೋಣಿಯಂತೆ ಬಳಸಿದ.

೭. ಎಲ್ಲಕ್ಕೂ ಮುಂಚೆ ದೋಣಿಯನ್ನು ಸಿದ್ಧಪಡಿಸಿ ಕೊಟ್ಟವಳು ನರಗುಂದ ನವಿಲುಗುಂದಗಳ ಹತ್ತಿರದ ಊರಾದ ಬನ್ನೂರಿನ ಶ್ರೀಮಂತ ಗೃಹಿಣಿ ರಡ್ಡೇರ ನೀಲವ್ವ[8] ಎಂಬ ನಂಬಿಕೆ ಗೊರವರಲ್ಲಿದೆ.

೮. ಮಲ್ಲಯ್ಯ ಕುರುಬರ ಮಾಳವ್ವನಿಗಾಗಿ ಕುರಿಯ ದೊಡ್ಡಿಯಲ್ಲಿ ಆಳಾಗಿ ದುಡಿದ. ಆಗ ನಾಯಿಗಳು ತಿನ್ನುತ್ತಿದ್ದ ದೋಣಿಯಲ್ಲಿಯೇ ಅವನೂ ಊಟಮಾಡಿದ. ಆ ಕಾರಣಕ್ಕಾಗಿ ಗೊರವರೂ ದೋಣಿಯಲ್ಲಿ ಊಟಮಾಡುವರು ಎಂಬ ನಂಬಿಕೆಯೂ ಗೊರವರಲ್ಲಿದೆ.

೯. ಮೈಲಾರದೇವರಿಗೆ ಜಾತಿಪಾತಿಗಳ ಅಡ್ಡಿಯಿಲ್ಲ. ಇಲ್ಲಿ ಸೇವೆಸಲ್ಲಿಸುವ ಎಲ್ಲರೂ ಒಂದೇ ಎಂಬ ನಂಬಿಕೆಯಿದೆ. ಗೊರವರು ಕುರುಬಜಾತಿಗೆ ಸೇರಿದ್ದರೂ ಎಲ್ಲರೂ ಇವರಿಗೆ ಗೌರವನೀಡುತ್ತಾರೆ. ಬ್ರಾಹ್ಮಣರೂ ಸಹ ಯಾವುದೇ ನಿರ್ಬಂಧಗಳಿಲ್ಲದೆ ಸಮಾನತೆಯನ್ನು ಪಾಲಿಸುತ್ತಾರೆ.

೧೦. ಬಾಳೆಹಣ್ಣು, ತುಪ್ಪ, ಸಕ್ಕರೆ ಅಥವಾ ಬೆಲ್ಲವನ್ನು ಸೇರಿಸಿ ಮಾಡಿದ ಹಣ್ತುಪ್ಪ ಮೈಲಾರಲಿಂಗನಿಗೆ ಅತಿ ಪ್ರೀತಿಯ ನೈವೇದ್ಯ.

೧೧. ತುಪ್ಪದ ಮಾಳಮ್ಮನಿಗೆ ತಲೆಯಿಂದ ಪಾದದ ವರೆಗೂ ಹರಿಯುವಂತೆ ಮೀಸಲು ತುಪ್ಪವನ್ನು ತಂದು ಸುರಿಯುವುದು ಇನ್ನೊಂದು ವಿಶಿಷ್ಟ ಆಚರಣೆ. ಇದರಿಂದ ಮನೆಯಲ್ಲಿ ಹೈನು ಸಮೃದ್ಧವಾಗಿರುವುದೆಂದು ಭಕ್ತರು ಹೇಳುತ್ತಾರೆ.

೧೨. ಮೈಲಾರಲಿಂಗನ ದೇವಾಲಯಗಳಿರುವಲ್ಲಿ ಹೆಗ್ಗಪ್ಪ ಕ್ಷೇತ್ರಪಾಲಕ ದೇವತೆ. ವಿಷ್ಣುವೇ ಹೆಗ್ಗಪ್ಪನಾಗಿ ಮಲ್ಲಾಸುರನ ಸಂಹಾರಕ್ಕೆ ಸಹಾಯಮಾಡಿದನೆಂಬ ನಂಬಿಕೆಯಿಂದ ಜನರು ಹೆಗ್ಗಪ್ಪನಿಗೆ ನಡೆದುಕೊಳ್ಳುತ್ತಾರೆ. ಆದ್ದರಿಂದ ಜಾತ್ರೆಗೆ ಬಂದು ಹೋಗುವ ಭಕ್ತರು ತಮ್ಮ ಊರುಗಳಿಗೆ ಸುರಕ್ಷಿತವಾಗಿ ಹೋಗಿ ತಲುಪುವಂತೆ ಹೆಗ್ಗಪ್ಪ ನೋಡಿಕೊಳ್ಳುತ್ತಾನೆಂದು ಜನರ ನಂಬಿಕೆ. ಅದ್ದರಿಂದ ಅವರು ಮನೆ ತಲುಪಿದ ತರುವಾಯು ಹೆಗ್ಗಪ್ಪನನ್ನು ಕಳುಹಿಸುವ ಕಾರ್ಯಕ್ರಮ ಮಾಡುತ್ತಾರೆ.

೧೩. ಹೆಗ್ಗಪ್ಪನಿಗೆ ಈಡುಗಾಯಿ ಉರುಳಿಸುವುದು ಮೈಲಾರ ಸಂಪ್ರದಾಯದಲ್ಲಿರುವ ವಿಶಿಷ್ಟ ಕಾರ್ಯಕ್ರಮ. ಹೆಗ್ಗಪ್ಪನ ಗುಡಿಯ ಬಾಗಿಲಿನಲ್ಲಿ ನಿಂತು ಒಳಗಿರುವ ಹೆಗ್ಗಪ್ಪನ ಮೂರ್ತಿಗೆ ತಾಕುವಂತೆ ಇಡಿಯಾಗಿರುವ ತೆಂಗಿನ ಕಾಯಿಯನ್ನು ಉರುಳಿಸುತ್ತಾರೆ. ಇದರಿಂದಾಗಿ ತಮ್ಮ ಮೇಲೆ ಪ್ರಯೋಗವಾದ ಮಾಟ ಪರಿಹಾರವಾಗುವುದೆಂದು ಜನ ನಂಬುತ್ತಾರೆ[9].

೧೪. ಹುರುಕು ಕಜ್ಜಿಗಳಾದವರು ದೇವಾಲಯದ ಆವರಣದಲ್ಲಿರುವ ಕೆಲ ಶಿಲಾಮೂರ್ತಿಗಳ ಮೇಲೆ ಉಪ್ಪು ಸುರಿದು ಹೋಗುತ್ತಾರೆ. ಇದರಿಂದ ಈ ವ್ಯಾಧಿಗಳು ಗುಣವಾಗುವುವೆಂಬ ನಂಬಿಕೆ ಪ್ರಚಲಿತದಲ್ಲಿದೆ.

## ೭.೨ ವಿಧಿ

ನಂಬಿಕೆಗಳು ಪರಂಪರಾನುಗತವಾಗಿ ಅಂಗೀಕೃತವಾದ ಪರಿಕಲ್ಪನೆಗಳಾದರೆ, ವಿಧಿಗಳು ಅವನ್ನು ಪೂರೈಸುವ ಕ್ರಿಯೆಗಳ ಪ್ರಕಾರಗಳು. ಇದು ಹೀಗೆಯೇ ಇರಬೇಕು ಎಂದು ನಿರ್ದಿಷ್ಟವಾಗಿ ಅಚರಿಸುವ ಸಾಂಪ್ರದಾಯಿಕ ಆಚರಣೆಗಲ ಕ್ರಮಗಳನ್ನು ವಿಧಿಗಳು ಎನ್ನಬಹುದು.

ವಿಧಿಗಳು ತಲೆಮಾರಿನಿಂದ ತಲೆಮಾರಿಗೆ ಹೇರಿಕೆಯ ರೂಪದಲ್ಲಿ ಬಂದ ನಂಬಿಕೆಗಳ ಮೊತ್ತ. ಅದಕ್ಕೆ ಕಾರಣಗಳು ಇರಬಹುದು, ಇಲ್ಲದಿರಬಹುದು. ಆದರೆ ಪಾಲನೆ ಮಾಡಲೇಬೇಕೆಂಬ ಒತ್ತಾಯ ವಿಧಿಗಳ ಹಿಂದಿರುತ್ತದೆ.

ಮೈಲಾರನ ಆಚರಣೆಗೆ ಸಂಬಂಧಿಸಿದಂತೆ ಅನೇಕ ವಿಧಿಗಳನ್ನು ಭಕ್ತರು ಪೂರೈಸಬೇಕಾಗುತ್ತದೆ. ಅವುಗಳಲ್ಲಿ ಕೆಲವಕ್ಕೆ ಧಾರ್ಮಿಕ ಕಾರಣಗಳಿದ್ದರೆ ಇನ್ನು ಕೆಲವಕ್ಕೆ ವೈಯಕ್ತಿಕ ಕಾರಣಗಳಿವೆ.

### ಧಾರ್ಮಿಕ ವಿಧಿಗಳು

೧. ಮೈಲಾರದಲ್ಲಿ ಯುಗಾದಿಯಂದು ಹಡದಿ ಹೊರಡುವಾಗ ಬೆಲ್ಲದ ಪುಡಿ ಹಾಗೂ ನವಣೆಯ ಹಿಟ್ಟುಗಳಿಂದ ಮಾಡಿದ ಮಿಶ್ರಣವನ್ನು[10] ಇರುವೆಗಳ ಹುತ್ತ ಕಂಡಲ್ಲೆಲ್ಲ ಹಾಕುವರು. ಇದರಲ್ಲಿ ಇರುವೆಗಳು ವಾಸದ ಮನೆಯ ಪ್ರದೇಶ ಬಿಟ್ಟು ಬೇರೆಡೆಗೆ

ವರ್ಗಾವಣೆಯಾಗಲಿ, ವಾಸದಮನೆ, ಸ್ಥಳ ಕೊರೆಯುವುದು ತಪ್ಪಲಿ ಎಂಬ ಉದ್ದೇಶವಿದೆ. ಜೊತೆಗೆ ಪ್ರಾಣಿ ದಯೆಯೂ ಸೇರಿಕೊಂಡಿದೆ.

೨. ಭಂಡಾರ ಸಿದ್ಧಪಡಿಸುವಾಗ ಅರಿಷಿಣ ಕೊಂಬು, ಬಂಗಾರ, ಬೆಳ್ಳಿ ಮುತ್ತು ಹಾಗೂ ಹವಳಗಳ ಜೊತೆ ಕರಿಯೆಳಿ (ಕುರಿಯ ಉಣ್ಣೆ) ಯನ್ನು ಸೇರಿಸಲೇಬೇಕು. ಇದು ಕಾಲಾಂತರದಿಂದ ನಡೆದುಕೊಂಡು ಬಂದ ಪದ್ಧತಿ.

೩. ಜಾತ್ರೆಗೆ(ಕಾರಣಿಕಕ್ಕೆ) ಬರುವಾಗ ಕೊಲ್ಲಾರಿಯ ಬಂಡಿಗಳಲ್ಲಿಯೇ ಬರಬೇಕು. (ಈಚೆಗೆ ಕೊಲ್ಲಾರಿ ಬಂಡಿಗಳ ಜಾಗದಲ್ಲಿ ಕೊಲ್ಲಾರಿ ಟ್ರಾಕ್ಟರ್ ಗಳು, ಮಿನಿ ಟೆಂಪೋಗಳು ಸೇರಿವೆ, ಆದರೂ ಸಂಪ್ರದಾಯ ನಿಂತಿಲ್ಲ.)

೪. ಜಾತ್ರೆಗೆ ಬರುವವರು ಕಾಲಲ್ಲಿ ಜೋಡು ಮೆಟ್ಟದೇ ಬರಿಗಾಲಲ್ಲಿ ಬರಬೇಕು.ಇದು ಪಾವಿತ್ರ್ಯ ಕಾಪಾಡುವ ಆಚರಣೆಯಾಗಿದೆ.

೫. ಕಾರಣಿಕದ ಗೊರವ ರಥಸಪ್ತಮಿಯಿಂದ ಕಾರಣಿಕದ ದಿನದವರೆಗೆ ಡೆಂಕಣ ಮರಡಿಯಲ್ಲಿಯೇ ವಾಸಿಸಬೇಕು.

೬. ಗುಗ್ಗರಿಯನ್ನು ಮೊದಲು ಕುದುರೆಪ್ಪನಿಗೆ ಅರ್ಪಿಸಿಯೇ ಅನಂತರ ದೋಣಿಗೆ ನೀಡಬೇಕು. ಬಳಿಕವೇ ಇತರರು ತಿನ್ನಬೇಕು.

೭. ಕಾರಣಿಕದ ನುಡಿ ನುಡಿಯುವಾಗ ಯಾರೂ ಮಾತನಾಡಬಾರದು, ನಿಶ್ಶಬ್ದವಾಗಿರಬೇಕು.

೮. ಕಾರಣಿಕದ ನಂತರ ಮನೆಗೆ ಹೋದಮೇಲೆ ಹೆಗ್ಗಪ್ಪನನ್ನು ಕಳಿಸುವ ಕಾರ್ಯ ಮಾಡಬೇಕು.

೯. ದೇವಾಲಯದಲ್ಲಿ ಹುಣ್ಣಿಮೆ, ಹಬ್ಬ, ಜಾತ್ರೆ, ಕಾರಣಿಕಗಳಂತಹ ಉತ್ಸವ ನಡೆಯುವ ಸಂದರ್ಭಗಳಲ್ಲಿ ಹಾಗೂ ರವಿವಾರಗಳಂದು ಕಂಚಾವೀರರ ಮನೆಗಳಲ್ಲಿ ಸಂಪೂರ್ಣವಾಗಿ ಸಸ್ಯಾಹಾರವನ್ನು ಪಾಲಿಸಬೇಕು. ಯಾವುದೇ ಕಾರಣಕ್ಕೂ ಮಾಂಸಾಹಾರವನ್ನು ಸ್ವೀಕರಿಸಬಾರದು.

೧೦. ಬದನೇಕಾಯಿ, ಈರುಳ್ಳಿ ಹಾಗೂ ಬಳ್ಳೊಳ್ಳಿಗಳನ್ನು ದೇವರಿಗೆ ಅರ್ಪಿಸಿ ನಂತರ ತಿನ್ನಬೇಕು. ಇಲ್ಲದಿದ್ದರೆ ದೋಷ ಬರುತ್ತದೆ.

೧೧. ಗೊರವಿಯರು ದೀಕ್ಷೆ ಪಡೆದಾದ ಬಳಿಕ ಚಾಮರಬೀಸಿ, ವೀಳಯ ಸಲ್ಲಿಸಿ ತಮ್ಮ ಸೇವೆ ಆರಂಭಿಸುವರು.

೧೨. ದೋಣಿಯಲ್ಲಿ ನೀಡಿದರೆ ಮಾತ್ರ ಅದು ಮೈಲಾರಲಿಂಗಪ್ಪನಿಗೆ ಮುಟ್ಟುವುದು. ಆದ್ದರಿಂದ ಭಕ್ತರು ಏನೇ ನೀಡಬೇಕಾದರೂ ಅದನ್ನು ದೋಣಿಯಲ್ಲೇ ಹಾಕಬೇಕು. ದೋಣಿ ತುಂಬಲು ಕನಿಷ್ಠ ಎರಡು ದೋಣಿಗಳಾದರೂ ಇರಲೇಬೇಕು. ಸಾಮಾನ್ಯವಾಗಿ ಐದು ದೋಣಿಗಳನ್ನು ತುಂಬುವರು.

೧೩. ಗೊರವ ಗೊರವಿಯರು ಸಿಗದಿರುವ ಸಂದರ್ಭದಲ್ಲಿ ಭಕ್ತರು ಹಸಿರು ದೋಣಿ[12] ಯನ್ನು ತುಂಬಿಸಬಹುದು.

**ವೈಯಕ್ತಿಕ ವಿಧಿಗಳು :**

೧. ಮದುವೆಗೆ ಮುಂಚೆ ಗೊರವ ದೀಕ್ಷೆ ಪಡೆಯಬೇಕು.[12]

೨. ಹೊರೆಹೊರುವ ವ್ಯಕ್ತಿಗೆ ಆಕಳ ಹಾಲು, ತುಪ್ಪ, ಗೋಮೂತ್ರಗಳಿಂದ ಎರೆದು ಶುದ್ಧ ಮಾಡಬೇಕು.

೩. ಒಡೆಯರಿಂದ, ಗೊರವರಿಂದ ಅಥವಾ ಗಣಾಚಾರಿಗಳಿಂದ ಮಾತ್ರ ದೀಕ್ಷೆ ಪಡೆಯಬೇಕು. ಹೊರೆ ಹೊರುವಾಗ ಒಡೆಯರು ಪೂರ್ವಾಭಿಮುಖವಾಗಿಯೂ ಹೊರೆ ಹೊರುವ ವ್ಯಕ್ತಿ ಪಶ್ಚಿಮಾಭಿಮುಖವಾಗಿಯೂ ಕೂರಬೇಕು.

೪. ಹೊರೆ ಹೊರುವಾಗ ತ್ರಿಶೂಲವನ್ನು ಯಾವಾಗಲೂ ಮೇಲ್ಮುಖವಾಗಿ ಹಿಡಿದಿರಬೇಕು. ಕೆಳಗೆ ಇಡುವಾಗಲೂ ಮೇಲ್ಮುಖವಾಗಿಯೇ ಇಡಬೇಕು.

೫. ಹೊರೆ ಹೊರುವಾಗ ಮುದ್ರೆಯ ಸಲಕರಣೆಗಳು ಇರದಿದ್ದರೆ, ಬೇರೆಯವರ ವಸ್ತುಗಳಿಂದ ತಾತ್ಕಾಲಿಕವಾಗಿ ಕಾರ್ಯ ಪೂರೈಸಿಕೊಳ್ಳಬಹುದು. ಆದರೆ ಕಂಬಳಿಯ ನಿಲುವಂಗಿ ಹಾಗೂ ಮುರಗಿ ಮುಂಡಾಸಗಳನ್ನು ಎರವಲು ಪಡೆಯಬಾರದು.

೬. ಹೊರೆ ಹೊತ್ತ ವ್ಯಕ್ತಿ ಸುಳ್ಳಾಡಬಾರದು, ಬೇರೆಯವರು ಹಸಿದಿದ್ದೇನೆ ಎಂದು ಹೇಳುವುದನ್ನು ಕೇಳಬಾರದು, ಸರ್ಪವನ್ನು ಸಾಯಿಸಬಾರದು, ಹೊಲದಲ್ಲಿ ಹಸು ಮೇಯುತ್ತಿದ್ದರೆ ಅದನ್ನು ಓಡಿಸಬಾರದು, ಕರಿ ಹಾಲು ಕುಡಿಯುತ್ತಿದ್ದರೆ ಅದನ್ನು ಕೀಳಬಾರದು, ನ್ಯಾಯದಿಂದ ನಡೆಯಬೇಕು, ರವಿವಾರ ಹಾಗೂ ಗುರುವಾರಗಳಂದು ಉಪವಾಸವಿದ್ದು ದೇವರ ಸೇವೆ ಮಾಡಬೇಕು.

೭. ಹೊರೆಹೊರುವಾಗ ಮೈಲಿಗೆ–ಮುಸುರೆಯನ್ನು ಆಯ್ದುಕೊಂಡಿದ್ದರೆ ಆ ಸಮಯದಲ್ಲಿ ಬೇರೆಯವರ ಎಡೆಯಿಂದ ಸ್ವಲ್ಪ ಆಹಾರವನ್ನು ತೆಗೆದುಕೊಂಡು ತಿನ್ನಬೇಕು. ಅಂದರೆ ಮುಂದೆ ತನ್ನ ಮನೆಯವರು, ಮಕ್ಕಳು ಅಥವಾ ಬೇರೆಯವರು ಮುಟ್ಟಿದ ಎಂಜಲು ಆಹಾರವನ್ನು ಸೇವಿಸಲು ಅವಕಾಶವಿರುವುದು. ಅದೇ ರೀತಿ ಬೇರೆಯವರ ಎಂಜಲು ಎಲೆಗಳನ್ನು ಎತ್ತಿ ತೆಗೆಯಬೇಕು. ಎಲೆ ಅಡಿಕೆ ಸುಣ್ಣವನ್ನು ಇನ್ನೊಬ್ಬರಿಂದ ತೆಗೆದುಕೊಂಡು ತಿನ್ನಬೇಕು. ಒಂದಾದರೂ ಬೇರೆಯವರ ಬಟ್ಟೆ ಒಗೆಯಬೇಕು. ಅಂದರೆ ಮುಂದೆ ಅನಿವಾರ್ಯವಾದಾಗ ಬೇರೆಯವರ ಬಟ್ಟೆ ಒಗೆಯಬಹುದು.

೮. ಹೊರೆಹೊತ್ತವರು ರವಿವಾರಗಳಂದು ಕನಿಷ್ಟ ಐದು ಮನೆಗಳ ಮುಂದೆ ನಿಂತು ಏಳು ಕೋಟಿ ಏಳುಕೋಟಿ ಎಂದು ಡಮರು, ಗಂಟೆ ಬಾರಿಸಿ ಸೇವೆ ಸಲ್ಲಿಸಿ ಭಿಕ್ಷೆ ಬೇಡಬೇಕು.

೯. ಕುದುರೆಕಾರರು ಅಥವಾ ಕುದುರೆ ಗೊರವರು ದೀಕ್ಷೆ ಪಡೆದ ಬಳಿಕ ಗಂಗಿಮಾಳಮ್ಮನ ಗುಡಿಯ ಮುಂದೆ ಸ್ವಲ್ಪ ಹೊತ್ತು ಕುಣಿದು ಹೊರೆಯ ಕಾಯಕ ಪ್ರಾರಂಭಿಸಬೇಕು. ಈ ಸಂದರ್ಭದಲ್ಲಿ ದಾಣಿ[13]ಯನ್ನು ಮುಕ್ಕುತ್ತ ಕುಣಿಯಬೇಕು.

೧೦. ವಿಶೇಷ ಸಂದರ್ಭಗಳಲ್ಲಿ ಇತರ ಭಕ್ತರು ಇವರ ಮುಂದೆ ಎತ್ತರದ ಒಂದು ಬಟ್ಟೆಯಲ್ಲಿ ದಾಣಿ ಹಿಡಿದರೆ ಅದನ್ನು ದೇವರ ಕುದುರೆಗಳು (ಕುದುರೆಗೊರವರು) ಮುಂದೆ ಬಂದು ಬಾಯಿಂದ ಅದನ್ನು ಮುಕ್ಕಬೇಕು.

೧೧. ಗೊರವರು ತಮ್ಮ ದೋಣಿಗೆ ಭಕ್ತರು ನೀಡಿದ ಆಹಾರದಲ್ಲಿ ಸ್ವಲ್ಪ ಭಾಗವನ್ನು ಪ್ರಸಾದವೆಂದು ನೀಡುವರು. ಉಳಿದಂತೆ ದೋಣಿಯಲ್ಲಿನ ಎಲ್ಲ ಪದಾರ್ಥಗಳನ್ನು ಗೊರವರು ಉಣ್ಣಲೇಬೇಕು. ಹೆಚ್ಚಾಯಿತೆಂದು ಚೆಲ್ಲುವಂತಿಲ್ಲ ಅಥವಾ ಅದನ್ನು ದೋಣಿಯಲ್ಲಿ ಹಾಗೆಯೇ ಬಿಡುವಂತಿಲ್ಲ.

೧೨. ಕಂಚಾವೀರರಲ್ಲಿ ತಮ್ಮ ಮನೆಯ ಹೆಣ್ಣುಮಕ್ಕಳನ್ನು ಹಿರೇಮೈಲಾರ, ದೇವರಗುಡ್ಡಗಳಲ್ಲಿಯೇ ಕೊಡು–ಕೊಳ್ಳುವುದನ್ನು ಮಾಡುತ್ತಾರೆ. ಒಂದು ವೇಳೆ ಬೇರೆ ಕಡೆಗಳಿಂದ ಹೆಣ್ಣು ತಂದುಕೊಂಡರೆ ಅವರಿಗೆ ತಮ್ಮ ಗುರುಗಳಾದ ಒಡೆಯರಲ್ಲಿ ಶುದ್ಧೀಕರಣ ಮಾಡುತ್ತಾರೆ. ಶುದ್ಧೀಕರಣದ ಸಂದರ್ಭದಲ್ಲಿ ಮನೆಯನ್ನು ಶುಚಿಗೊಳಿಸಿ, ಶುದ್ಧೀಕರಣಕ್ಕೆ ಒಳಪಡುವ ಹೆಣ್ಣು ಮಗಳನ್ನು ಉಪವಾಸವಿರಿಸುತ್ತಾರೆ. ಅವಳಿಗೆ ಸ್ನಾನ ಮಾಡಿಸಿ, ಮಡಿಬಟ್ಟೆ ತೊಡಿಸಿ, ದೇವಾಲಯಕ್ಕೆ ಕರೆದುಕೊಂಡು ಹೋಗುತ್ತಾರೆ. ಬಳಿಕ ಅಲ್ಲಿ ದೇವರಿಗೆ ನಮಸ್ಕಾರ ಮಾಡಿಸಿ, ಅವಳ ಬಾಯಿಯಲ್ಲಿ ದೇವರ ಅಭಿಷೇಕದ ತೀರ್ಥ ಹಾಗೂ ಭಂಡಾರಗಳನ್ನು ಹಾಕುವರು. ಆಮೇಲೆ ಅವಳ ನಾಲಿಗೆಯನ್ನು ಊದಿನಕಡ್ಡಿಯಿಂದ ಸುಡುವರು. ನಂತರ ಅವಳನ್ನು ಆ ಮನೆಯ ಹೆಣ್ಣುಮಗಳೆಂದು ಪರಿಗಣಿಸುವರು.

೧೩. ಕಂಚಾವೀರರಲ್ಲಿ ಕನ್ನೆಪವಾಡ ಮಾಡದ ಹೊರತು ಮದುವೆ ಮಾಡುವಂತಿಲ್ಲ. ಈ ಪವಾಡ ಆಗುವ ವರೆಗೂ ಹುಟ್ಟಿದ ಮಗ ಹಾಗೆಯೇ ಇರಬೇಕು (ಬ್ರಹ್ಮಚಾರಿಯಾಗಿರಬೇಕು) ಎಂಬ ನಿಯಮವಿದೆ. ಎಲ್ಲರೂ ಸಾಮಾನ್ಯವಾಗಿ ಈ ನಿಯಮವನ್ನು ಪಾಲಿಸುತ್ತಾರೆ.

೧೪. ಕನ್ನೆಪವಾಡದ ಸಂದರ್ಭದಲ್ಲಿ ಹೆಂಗಸರು ಪವಾಡಮಾಡುವವನಿಂದ ದೂರದಲ್ಲಿಯೇ ಇರಬೇಕು. ಅಡುಗೆ ಕಾರ್ಯದಿಂದ ಹಿಡಿದು ಎಲ್ಲವನ್ನೂ ಗಂಡಸರೇ ಮಾಡಬೇಕು ಎಂಬ ನಿಯಮವನ್ನು ಕನ್ನೆಪವಾಡದ ಸಂದರ್ಭದಲ್ಲಿ ಕಟ್ಟುನಿಟ್ಟಾಗಿ ಪಾಲಿಸುತ್ತಾರೆ.

೧೫. ದೇವರ ಪಲ್ಲಕ್ಕಿ ಹೊರಗೆ ಹೊರಟಾಗಲೆಲ್ಲ ಅದರ ಜೊತೆಗೆ ಖಡ್ಗಧಾರಿಗಳಾಗಿ ಕಂಚಾವೀರರು ಇರಲೇಬೇಕು. ಹಾಗೆಯೇ ಹೆಗ್ಗಪ್ಪನ ಗುಡಿಯ ಮುಂದೆ, ಗಂಗಿಮಾಳಮ್ಮನ ಗುಡಿಯ ಮುಂದೆ ಹಾಗೂ ಕಂಚಪ್ಪನ ಗುಡಿಯ ಮುಂದೆ ಖಡ್ಗ ಹೇಳುವ ಕಾರ್ಯಕ್ರಮ ನಡೆಯಬೇಕು.

೧೬. ಕಂಚಾವೀರರು ಮಹಾಲಯ ಅಮಾವಾಸ್ಯೆಯಂದು ತಮ್ಮ ಹಿರಿಯರ ತಿಥಿ ಆಚರಿಸುತ್ತಾರೆ. ಅಂದು ಸಂಜೆ ಹಿರಿಯರ ಹೆಸರಿನಿಂದ ಹೊಸಬಟ್ಟೆ ತರುತ್ತಾರೆ.

ಅಡುಗೆ ಮಾಡಿ, ನೈವೇದ್ಯ ಸಲ್ಲಿಸುವರು. ಬಳಿಕ ಆ ನೈವೇದ್ಯವನ್ನು ತಮ್ಮ ಮನೆಗಳ ಮಾಳಿಗೆಯ ಮೇಲೆ ಇಟ್ಟು ಮಾರನೆಯ ದಿನ ಬೆಳಗ್ಗೆ ಅದನ್ನು ತೆಗೆದುಕೊಳ್ಳುವರು. ತಿಥಿಗಾಗಿ ಮೊದಲು ಕುರಿಯನ್ನು ಬಲಿಕೊಡುವ ಸಂಪ್ರದಾಯವಿತ್ತಾದರೂ ಈಗ ಅದು ಕಂಡುಬರುವುದಿಲ್ಲ. ಬದಲಾಗಿ ಸಿಹಿ ಅಡುಗೆಮಾಡಿ ತಿಥಿ ಆಚರಿಸುತ್ತಾರೆ.

೧೭. ಹೊರೆಹೊತ್ತ ಗೊರವಿಯರು ಗೃಹಿಣಿಯರಾಗಿದ್ದು ಗಂಡ ತೀರಿಕೊಂಡ ಬಳಿಕ ಪುನಃ ಮದುವೆ(ಉಡಿಕೆ)ಯಾಗುವಂತಿಲ್ಲ. ಮೈಲಾರಲಿಂಗಪ್ಪನೇ ತಮ್ಮ ಗಂಡನೆಂದು ಭಾವಿಸಿ ಸೇವೆಮಾಡುವರು.[14]

೧೮. ಗೊರವ ಗೊರವಿರು ದೇವಸ್ಥಾನಕ್ಕೆ ನಿಶ್ಚಿತ ಕ್ರಮದಲ್ಲಿ ನಡೆದುಕೊಳ್ಳಬೇಕು. ವರ್ಷದಲ್ಲಿ ಕನಿಷ್ಠ ಐದು ಹುಣ್ಣಿಮೆಗಳಾದರೂ ಪೂಜೆಗಾಗಿ ದೇವಸ್ಥಾನಗಳಿಗೆ ಹೋಗಿ ಬರಬೇಕು. ವರ್ಷದಲ್ಲಿ ಕೆಲವು ರಾತ್ರಿಗಳನ್ನಾದರೂ ದೇವಸ್ಥಾನದಲ್ಲಿ ಕಳೆಯಬೇಕು. ಇದನ್ನು ಬಾಗಿಲುಕಾಯುವುದು ಎನ್ನುವರು. ದೇವಸ್ಥಾನಕ್ಕೆ ಹೋದಾಗ ಗೊರವರೂ ಒಡೆಯನ ಜಾಡಿಗೆ ತಮ್ಮ ಪಾಲಿನ ಕಾಣಿಕೆಯನ್ನು ಹಾಕಬೇಕು.

೧೯. ಹೊಸದಾಗಿ ಮದುವೆಯಾದ ಗಂಡ ಹೆಂಡಿರು ಮೈಲಾರನ ಒಕ್ಕಲಾಗಿದ್ದರೆ ಅವರು ಕಳಸದರ್ಶನ[15]ವಾದ ಬಳಿಕವೇ ಮದುವೆಯ ನಂತರದ ಪ್ರಾಪಂಚಿಕ ಜೀವನವನ್ನು ಆರಂಭಿಸಬೇಕು.

## ೭.೩ ನಿಷೇಧಗಳು

ಮಾನವ ಸಮಾಜದ ಒಂದು ಅಂಗ. ಅವನು ಸಮಾಜವನ್ನು ಬಿಟ್ಟು ಬದುಕಲಾರ. ಆದ್ದರಿಂದ ಸಮೂಹ, ಸಮಾಜದ ಸ್ವಾಸ್ಥ್ಯಕ್ಕಾಗಿ ಹಾಗೂ ಹಿತಕ್ಕಾಗಿ ಅವನು ಕೆಲವು ನಿಯಮಗಳನ್ನು ರೂಪಿಸಿಕೊಂಡ. ಅವನ್ನು ನಿಷೇಧಗಳೆಂದು ಗುರುತಿಸುವರು. ಸಮಾಜದ ಸರ್ವ ನಿರ್ಬಂಧಗಳನ್ನು ಪ್ರತಿನಿಧಿಸುವಂತೆ ನಿಷೇಧಗಳನ್ನು ಬಳಸುತ್ತಾರೆ. ಒಂದು ಸಮಾಜದ ಭಾಗವಾದ ಮಾನವ ಆ ನಿಷೇಧಗಳನ್ನು ಚಾಚೂ ತಪ್ಪದೆ ಆಚರಿಸಲು ಆರಂಭಿಸಿದ. ಹಾಗೆ ಅನುಸರಿಸದಿದ್ದರೆ ತನಗೆ ಕೇಡಾಗುವುದೆಂಬ ಭಾವನೆ ಆ ನಿಷೇಧಗಳ ಬಗ್ಗೆ ಅವನಿಗೆ ಪೂಜ್ಯ ದೃಷ್ಟಿ ಬೆಳೆಯುವಂತೆ ಮಾಡಿತು. ಮಾನವನು ಸಮಾಜಕ್ಕಿಂತ

ದೊಡ್ಡವನಲ್ಲ. ಆದ್ದರಿಂದ ಸಮಾಜವು ಮಾಡಿದ ನಿಷೇಧಗಳನ್ನು ಅವನು ಪೂಜ್ಯಭಾವನೆಯಿಂದಲೇ ಪಾಲಿಸುತ್ತ ಬಂದನು.

ನಿಷೇಧಗಳನ್ನು ಕುರಿತು ವಿದ್ವಾಂಸರು ಈ ರೀತಿ ಅಭಿಪ್ರಾಯಪಡುತ್ತಾರೆ.

ಖ್ಯಾತ ಮನಶ್ಶಾಸ್ತ್ರಜ್ಞ ಸಿಗ್ಮಂಡ್ ಫ್ರಾಯ್ಡ್‌ನ ಪ್ರಕಾರ – "ಯಾವುದನ್ನು ಮಾಡಬಾರದೆಂದಿದೆಯೋ ಅದನ್ನು ಮಾಡಬೇಕೆಂಬ ಆಸೆಯೊಂದು ಕಡೆ; ಮಾಡಕೂಡದೆಂಬ ಸ್ವಪರಿಜ್ಞಾನ ಇನ್ನೊಂದು ಕಡೆ. ಈ ರೀತಿಯ ದ್ವಂದ್ವವೇ ನಿಷೇಧಗಳ ಉಗಮಕ್ಕೆ ಕಾರಣ".

ಉಂಟ್‌ನ ಪ್ರಕಾರ – "ನಿಷೇಧದ ಹಿಂದೆ ಅಲೌಕಿಕ ಶಕ್ತಿ ಕೆಲಸ ಮಾಡುತ್ತಿರುತ್ತದೆ. ಆದ್ದರಿಂದ ಮಾನವ ನಿಷೇಧಗಳನ್ನು ಪಾಲಿಸುತ್ತಾನೆ".

ನಿಷೇಧಗಳಲ್ಲಿ ಸಾಮಾಜಿಕ ಹಾಗೂ ಧಾರ್ಮಿಕ ನಿಷೇಧಗಳೆಂದು ಎರಡು ಭಾಗ ಮಾಡಬಹುದು. ಸಾಮಾಜಿಕ ನಿಷೇಧಗಳನ್ನು ಪಾಲಿಸದಿದ್ದರೆ ಸಮಾಜದಿಂದ ಹೊರಗಿರಬೇಕಾಗುತ್ತದೆ ಎಂಬ ಕಾರಣದಿಂದ ಸಾಮಾಜಿಕ ನಿಷೇಧಗಳನ್ನು ಪಾಲನೆ ಮಾಡುತ್ತಾನೆ. ಆದರೆ ಧಾರ್ಮಿಕ ನಿಷೇಧಗಳಿಗೆ ಈ ರೀತಿಯ ನಿರ್ಬಂಧವೇನೂ ಇರುವುದಿಲ್ಲ ಆದರೂ ಅವನು ಇವನ್ನು ಸ್ವಲ್ಪವೂ ಲೋಪವಿಲ್ಲದೆ ಅನುಸರಿಸುತ್ತಾನೆ. ಇವನ್ನು ಪಾಲಿಸದಿದ್ದರೆ ಪಾಪ ಬರುತ್ತದೆ ಎಂಬ ಭೀತಿಯೂ ಈ ನಿಷೇಧಗಳ ಪಾಲನೆಗೆ ಕಾರಣ. ಆಚರಣೆಯ ಪಾವಿತ್ರ್ಯತೆಯ ದೃಷ್ಟಿಯಿಂದ ಸಹ ಧಾರ್ಮಿಕ ನಿಷೇಧಗಳ ಬಳಕೆ ಮಾಡುತ್ತಾರೆ.

ಮೈಲಾರನ ಭಕ್ತರಲ್ಲಿರುವ ಆಚರಣೆಗಳಲ್ಲಿ ಅನೇಕ ನಿಷೇಧಗಳಿವೆ. ಇವಕ್ಕೆ ಜನಪದರು ತಮ್ಮದೇ ಆದ ಕಾರಣಗಳನ್ನು ನೀಡುತ್ತಾರಾದರೂ ಪರಂಪರಾನುಗತವಾಗಿ ಬಂದ ನಂಬಿಕೆಗಳು ತಮ್ಮ ಮೂಲ ಉದ್ದೇಶವನ್ನು ಬಿಟ್ಟು ಬಹುದೂರ ಸಾಗಿರುವುದಂತೂ ನಿಜ. ಈ ನಿಷೇಧಗಳು ತಲೆತಲಾಂತರದಿಂದ ಬೆಳೆದುಬಂದಿರಬಹುದು ಅಥವಾ ಯಾವುದೋ ನಿರ್ದಿಷ್ಟ ಉದ್ದೇಶಕ್ಕೆ ಆರಂಭವಾಗಿ ನಂತರ ಉದ್ದೇಶರಹಿತವಾಗಿ ಮುಂದುವರಿದ ಆಚರಣೆಗಳೂ ಆಗಿರಬಹುದು. ಈ ನಿಟ್ಟಿನಲ್ಲಿ ಕೆಲವು ನಿಷೇಧಗಳನ್ನು ನಾವು ನೋಡಬಹುದು.

**ಧಾರ್ಮಿಕ ನಿಷೇಧಗಳು :**

೧. **ಮಲ್ಲಯ್ಯ ಸಾಕಿದ ನಾಯಿಯನ್ನು ಹೊಡೆಯಬಾರದು ಅಥವಾ ತಂಗಳನ್ನು ತಿನ್ನಿಸಬಾರದು :** ಮೈಲಾರನ ಭಕ್ತವರ್ಗದಲ್ಲಿ ಬರುವ ಗೊರವರಲ್ಲಿ ನಾಯಿಗೊರವರು ಎಂಬ ಪಂಗಡವಿದೆ. ಇವರನ್ನು ಕುರಿತು ಬಸವಾದಿ ಪ್ರಮಥರು ತಮ್ಮ ವಚನಗಳಲ್ಲಿ ವಿಡಂಬಿಸಿರುವುದನ್ನು ನಾವು ಕಾಣಬಹುದು.[16] ದೋಣಿ ತುಂಬುವಾಗ ಜಗಳವಾಡುತ್ತ, ನಾಯಿಯನ್ನು ಅನುಸರಿಸಿ ತಿನ್ನುವುದನ್ನು ಕಾಣಬಹುದು. ಮೈಲಾರನು ಮಣಿಕಾಸುರನನ್ನು ಸಂಹರಿಸುವಾಗ ನಾಯಿಗಳು ಅವನಿಗೆ ಸಹಾಯ ಮಾಡಿದ್ದವಂತೆ. ಹೀಗಾಗಿ ನಾಯಿಗಳು ಮೈಲಾರನ ಅನುಯಾಯಿಗಳು ಎಂಬ ನಂಬಿಕೆಯಿದೆ. ಆದ್ದರಿಂದ ಮೈಲಾರನ ಭಕ್ತರು ಮನೆಗಳಲ್ಲಿ ನಾಯಿ ಸಾಕಿದ್ದಾದರೆ ಅದನ್ನು ಕಾಲಿನಿಂದ ಒದೆಯುವುದಾಗಲಿ, ಹೊಡೆಯುವುದಾಗಲಿ ಮಾಡುವುದಿಲ್ಲ. ಅವುಗಳಿಗೆ ತಂಗುಳು ತಿನ್ನಿಸಿದರೆ ಮೈಲಾರನಿಗೆ ತಿನ್ನಿಸಿದಂತೆ ಎಂಬ ನಂಬಿಕೆಯಿರುವುದರಿಂದ ಈ ನಿಷೇಧವಿದೆ. ನಾಯಿಗೆ ಮೈಲಾರನ ಭಕ್ತರು ಎಷ್ಟು ಮಹತ್ವ ಕೊಡುತ್ತಾರೆಂದರೆ, ಒಂದು ವೇಳೆ ದೋಣಿ ತುಂಬಲು ಗೊರವರು ದೊರಕದೇ ಹೋದಲ್ಲಿ ಹಸಿರುದೋಣಿ ಮಾಡಿ ಅದಕ್ಕೆ ಎಲ್ಲ ಪದಾರ್ಥಗಳನ್ನು ಹಾಕಿ ನಾಯಿಗೆ ತಿನ್ನಿಸುತ್ತಾರೆ. ಈ ಮೂಲಕ ಆ ನೈವೇದ್ಯ ಭಗವಂತನಿಗೆ ಅರ್ಪಿತವಾಯಿತೆಂದು ಭಾವಿಸುತ್ತಾರೆ.

೨. **ಮೈಲಾರನ ಭಕ್ತರು ಕುದುರೆ ಹತ್ತಬಾರದು :** ನಾಯಿಗೊರವರಂತೆಯೇ ಮೈಲಾರನ ಭಕ್ತರಲ್ಲಿ ಕುದುರೆ ಗೊರವರ ಸಂಪ್ರದಾಯವೂ ಇದೆ. ಶಿವನು ಮೈಲಾರನಾಗಿ ಮಣಿಕಾಸುರನನ್ನು ಕೊಲ್ಲಲು ಬಂದಾಗ ಅವನ ಕೋರಿಕೆಯಂತೆ ತನ್ನ ವಾಹನವನ್ನಾಗಿ ಸ್ವೀಕರಿಸಿದ . ಆದ್ದರಿಂದ ಈಗಲೂ ಸಹ ಮೈಲಾರನ ಭಕ್ತರು ಕುದುರೆಯನ್ನು ಮೈಲಾರನ ವಾಹನವೆಂದು ಭಾವಿಸುತ್ತಾರೆ. ಅದಲ್ಲದೇ ಕುದುರೆ ಗೊರವರಾಗಿ ದೇವರಿಗೆ ಸೇವೆ ಸಲ್ಲಿಸುವ ಕ್ರಮವನ್ನು ನಾವು ನೋಡುತ್ತೇವೆ. ಮೈಲಾರನಿಗೆ ಸಂಬಂಧಿಸಿದ ಆಚರಣೆಗಳಲ್ಲಿ ಕುದುರೆಯ ಹಬ್ಬ ಎಂಬ ವಿಶಿಷ್ಟ ಆಚರಣೆಯೂ ಇದೆ. ಛಾಯಾಚಿತ್ರ(ಫೋಟೋ)ಗಳಲ್ಲಿ ಕುದುರೆಯ ಮೇಲೆ ಕುಳಿತ ಮೈಲಾರನನ್ನೇ

ಜನ ಪೂಜಿಸುವುದನ್ನು ನಾವು ಕಾಣಬಹುದು. ಕರ್ನಾಟಕದ ಅನೇಕ ದೇವಾಲಯಗಳಲ್ಲಿ ಕುದುರೆಯ ಮೇಲೆ ಕುಳಿತ ಮೈಲಾರನ ವಿಗ್ರಹಗಳಿವೆ[17]. (ಚಿತ್ರ – ೩) ಭಕ್ತರೂ ಸಹ ತಮ್ಮ ಮನೆಗಳಲ್ಲಿ ಪೂಜಿಸುವ ವಿಗ್ರಹಗಳು ಕುದುರೆಯ ಮೇಲೆ ಕುಳಿತ ಮೈಲಾರನ ವಿಗ್ರಹಗಳೇ ಆಗಿವೆ. ಹೀಗಾಗಿ ಕುದುರೆ ಪವಿತ್ರವಾದುದು, ಅದರ ಮೇಲೆ ಸವಾರಿ ಮಾಡುವ ಅಧಿಕಾರ ಕೇವಲ ಮಲ್ಲಯ್ಯನಿಗೆ ಮಾತ್ರ ಎಂಬ ನಂಬಿಕೆಯಿಂದ ಮೈಲಾರನ ಭಕ್ತರು ಕುದುರೆ ಏರಬಾರದು ಎಂಬ ನಿಷೇಧವಿದೆ. ಆದರೆ ಒಡೆಯರು ಮೈಲಾರನ ರೂಪವೆಂದೇ ನಂಬಿಕೆಯಿರುವುದರಿಂದ ಅವರಿಗೆ ಈ ನಿಷೇಧ ಅನ್ವಯಿಸುವುದಿಲ್ಲ. ಉತ್ಸವಾದಿ ಸಂದರ್ಭಗಳಲ್ಲಿ, ಕಾರಣಿಕದ ಸಂದರ್ಭದಲ್ಲಿ ಇವರು ಕುದುರೆಯ ಮೇಲೆ ಕುಳಿತು ಸವಾರಿ ಹೋಗುವುದನ್ನು ಕಾಣಬಹುದು.

೩. ರಥಸಪ್ತಮಿಯಂದು ಹಾಲುಉಕ್ಕಿಸುವ ಕಾರ್ಯಕ್ರಮದ ನಂತರ ಮೌನ ಕಾರಣಿಕೋತ್ಸವದವರೆಗೆ ದೇವಸ್ಥಾನದಲ್ಲಿ ಯಾವುದೇ ವಾದ್ಯ ವಾಲಗಗಳ ವೈಭವ ಇರುವುದಿಲ್ಲ. ದೇವಾಲಯದಲ್ಲಿ ತೂಗುಬಿಟ್ಟ ಗಂಟೆಗಳನ್ನು ಸಹ ಬಾರಿಸುವಂತಿಲ್ಲ. ಹಿಂದೆ ಮೈಲಾರನು ಮಣಿಕಾಸುರ ಮಲ್ಲಾಸುರರನ್ನು ಮರ್ದಿಸಲು ಹೊರಟಾಗ ಸದ್ದಾದರೆ ಅವರಿಗೆ ಗೊತ್ತಾಗುತ್ತದೆ ಎಂಬ ಹಿನ್ನೆಲೆಯಲ್ಲಿ ಏಳುಕೋಟಿ ಸೈನ್ಯವು ಮೌನವಾಗಿ ನಡೆದಿತ್ತಂತೆ. ಈ ಕಾರಣದಿಂದ ಮೈಲಾರದಲ್ಲಿ ಇಂದಿಗೂ ಈ ನಿಯಮವನ್ನು ಪಾಲಿಸುತ್ತಾರೆ.

೪. ಹೊರೆಹೊರುವಾಗ ಮಡಿಯನ್ನು ಆಯ್ದುಕೊಂಡಿದ್ದರೆ ಬೇರೆಯವರು ಮುಟ್ಟಿದ ಆಹಾರವನ್ನು ಸೇವಿಸಕೂಡದು. ಎಲೆ ಅಡಿಕೆಗೆ ಸುಣ್ಣ ಕೇಳಬಾರದು. ಕಂಡಕಂಡಲ್ಲಿ ನೀರು, ಆಹಾರ ಸೇವಿಸಬಾರದು. ಈ ಕ್ರಮವನ್ನು ಜೀವನಪರ್ಯಂತ ಪಾಲಿಸಬೇಕು.

೫. ಭಿಕ್ಷೆಗೆ ಹೋಗುವಾಗ ಅಥವಾ ದೇವಸ್ಥಾನಗಳಿಗೆ ಹೋಗುವಾಗ, ಜಾತ್ರೆ, ಕಾರಣಿಕಗಳಲ್ಲಿ ಭಾಗವಹಿಸುವಾಗ, ಹೊರೆ ಹೊರುವ ಸಂದರ್ಭಗಳಲ್ಲಿ ಕಾಲಿಗೆ ಚಪ್ಪಲಿ ಹಾಕಬಾರದು. ಒಂದು ವೇಳೆ ದೀಕ್ಷೆ ತೆಗೆದುಕೊಳ್ಳುವಾಗ ಹೊಲ ಮನೆ

ಕೆಲಸಗಳಲ್ಲಿ ಜೋಡುಮೆಟ್ಟಿಕೊಳ್ಳುತ್ತೇನೆ ಎಂದು ಹೇಳಿದ್ದರೆ ಮುದ್ರೆ ತೆಗೆದಿಟ್ಟು ಚಪ್ಪಲಿ ಹಾಕಿಕೊಳ್ಳಬಹುದು.

೬. ಕಾರಣಿಕದ ಗೊರವನಿಗೆ ಪ್ರಾಪಂಚಿಕ ಜೀವನ ನಿಷಿದ್ಧ.

**ಕೌಟುಂಬಿಕ ನಿಷೇಧಗಳು :**

೧. ಕಂಚಾವೀರರಲ್ಲಿ ಬೇರೆ ಕಡೆಯಿಂದ ಹೆಣ್ಣು ತಂದು ಶುದ್ಧಮಾಡಿ ಮನೆ ತುಂಬಿಸಿಕೊಳ್ಳುವ ಕ್ರಮವಿದ್ದರೂ ಅದು ಅಷ್ಟು ಒಳ್ಳೆಯದಲ್ಲ ಎಂಬ ಭಾವನೆಯಿದೆ. ಆದ್ದರಿಂದ ಸಾಧ್ಯವಾದಷ್ಟು ತಮ್ಮ ಮನೆತನಗಳಲ್ಲಿಯೇ ಸಂಬಂಧ ಬೆಳೆಸುವರು. ಒಂದು ವೇಳೆ ತಮ್ಮ ಜಾತಿಯ ಬೇರೆ ಮನೆತನಗಳಿಂದ ಹೆಣ್ಣು ತಂದರೆ ಆ ಹೆಣ್ಣುಮಗಳು ಮದುವೆಯಾಗಿ ಒಮ್ಮೆ ಗಂಡನ ಮನೆಗೆ ಬಂದು ಸೇರಿಕೊಂಡರೆ ಮತ್ತೆ ಅವಳು ತನ್ನ ತವರಿಗೆ ಹೋಗುವಂತಿಲ್ಲ. ಅನಿವಾರ್ಯ ಪ್ರಸಂಗಗಳಲ್ಲಿ ಹೋದರೂ ಅಲ್ಲಿ ನೀರು, ಆಹಾರ ಸೇವಿಸುವಂತಿಲ್ಲ. ಏನೇ ಕೆಲಸ ಇದ್ದರೂ ಹೊರಗಡೆ ಕುಳಿತೇ ಮುಗಿಸಿಕೊಂಡು ತನ್ನ ಗಂಡನ ಮನೆಗೆ ಮರಳಿಬರಬೇಕು. ಗಂಡಸರೂ ಸಹ ಅದೇ ರೀತಿ ಕೆಲ ಪ್ರಸಂಗಗಳಲ್ಲಿ ಬೀಗರ ಮನೆಗೆ ಹೋದರೆ ಹೊರಗಿನಿಂದಲೇ ತಮ್ಮ ಕೆಲಸ ಮುಗಿಸಿಕೊಂಡು ಬರುತ್ತಾರೆ.

೨. ವೀರಗಾಸೆಹಾಕುವ ಕಂಚಾವೀರರು ಕುದುರೆಯ ಹಬ್ಬ, ಭಾರತ ಹುಣ್ಣಿಮೆ ಹಾಗೂ ಪವಾಡ ನಡೆಯುವ ಸಂದರ್ಭ – ಹೀಗೆ ವರ್ಷಕ್ಕೆ ಮೂರುಸಲ ವೀರಗಾಸೆ ಕಟ್ಟುವರು. ಉಳಿದ ಸಂದರ್ಭದಲ್ಲಿ ಅದನ್ನು ಕಟ್ಟುವಂತಿಲ್ಲ. ಅದರ ಸಲಕರಣೆಗಳನ್ನು ಮನೆಯಲ್ಲಿ ಕಟ್ಟಿಟ್ಟು ಪೂಜೆಮಾಡುವರು.

೩. ಕಂಚಾವೀರರಲ್ಲಿ ಶಿರಸ್‌ಪವಾಡ ಮಾಡುವುದು ನಿಷಿದ್ಧವಾಗಿದೆ.[18]

೪. ಮೈಲಾರಲಿಂಗನ ಒಕ್ಕಲಿರುವ ಮನೆತನಗಳಲ್ಲಿ ಕಾರಹುಣ್ಣಿಮೆಯ ನಂತರ ಮದುವೆಯಾಗುವುದಿಲ್ಲ. (ಪ್ರಾಯಶಃ ದೇವರಗುಡ್ಡದಲ್ಲಿ ಕಾರಹುಣ್ಣಿಮೆಗೆ ಮೈಲಾರಲಿಂಗನ (ಮಾಲತೇಶನ) ವಿವಾಹವಾಗುವುದರಿಂದ ದೇವರ ಲಗ್ನವಾದ ನಂತರ ತಾವು ಮದುವೆಯಾಗುವುದು ಸರಿಯಲ್ಲವೆಂಬ ಭಾವನೆ ಈ ಸಂಪ್ರದಾಯದವರಲ್ಲಿ ಇರಬಹುದು)

೫. ಗೊರವರು ಯಾವಾಗಲೂ ದೋಣಿಯನ್ನು ಹೊತ್ತು ತಿರುಗಬೇಕು. ಅದನ್ನು ಎಂದಿಗೂ ತಿರುವಿ ಹಾಕಬಾರದು. ಅದರಲ್ಲಿ ನೀಡಿದ್ದನ್ನು ಊಟಮಾಡಬೇಕು. ಆದರೆ ದೋಣಿಗೆ ಮಾಂಸ ನೀಡುವುದು ನಿಷಿದ್ಧ.

## ೭.೪ ಹರಕೆ

೧. ಕಾರಣಿಕದ ನುಡಿ ಕೇಳಿಯಾದ ನಂತರ ಜನ ಅಲ್ಲಲ್ಲಿ ಬಿದ್ದಿರುವ ಕಡ್ಡಿಗಳಿಂದ ಚಪ್ಪರದಾಕಾರದ ಮನೆಗಳನ್ನು ಮಾಡುವರು. ಇದಕ್ಕೆ ತಾವು ಹರಸಿಕೊಂಡ ಹರಕೆ ಪೂರೈಸಿದಲ್ಲಿ ಹೀಗೆ ಮಾಡುವುದಾಗಿ ಅವರು ದೇವರಲ್ಲಿ ಕೋರಿಕೊಂಡ ಕೋರಿಕೆಯೇ ಕಾರಣ ಎಂಬುದು ಭಕ್ತರ ಅಭಿಪ್ರಾಯ.

೨. ಮಕ್ಕಳಾಗದವರು ತಮಗೆ ಮಕ್ಕಳಾಗಲೆಂದು ಹರಕೆಹೊರುವುದು ವಾಡಿಕೆ. ಹೀಗೆ ಹರಕೆಹೊತ್ತಾಗ ಆ ಹರಕೆ ಪೂರೈಸಿದರೆ ಹೊರೆಹೊರಿಸುವುದಾಗಿ ನಿದಾನಮಾಡಿ ಕೊಂಡಿರುತ್ತಾರೆ. ಹರಕೆ ಪೂರೈಸಿದ ಬಳಿಕ ತಮ್ಮ ಅನುಕೂಲಕಕ್ಕೆ ತಕ್ಕ ದಿನ ನೋಡಿಕೊಂಡು ಹರಕೆಯ ಹೊರೆಹೊರುತ್ತಾರೆ.

೩. ತಮ್ಮ ಮೇಲೆ ಯಾವುದಾದರೂ ಆಪತ್ತು ಬಂದಿದ್ದಲ್ಲಿ ಅದರ ನಿವಾರಣೆಗಾಗಿಯೂ ಹರಕೆಹೊರುವ ಸಂಪ್ರದಾಯ ಮೈಲಾರದಲ್ಲಿದೆ. ಆಪತ್ತು ನಿವಾರಣೆಯಾದಾಗ ಹರಕೆಯಲ್ಲಿ ಹೊತ್ತುಕೊಂಡ ನಿಯಮವನ್ನು ಪಾಲಿಸುತ್ತಾರೆ.

೪. ಮೈಲಾರನನ್ನು, ಅವನ ಭಕ್ತರನ್ನು ಅಥವಾ ಅವರ ಆಚರಣೆಗಳನ್ನು ನಿಂದಿಸಿದವರು, ಅನ್ಯಾಯವೆಸಗಿದವರು ಅನೇಕ ಕಷ್ಟಗಳಿಗೆ ಸಿಕ್ಕಿಕೊಳ್ಳುತ್ತಾರೆ. ಆಗ ಕಷ್ಟ ಪರಿಹಾರಕ್ಕಾಗಿ ಮೈಲಾರನಿಗೆ ಹರಕೆಹೊರುವುದೂ ಉಂಟು. ಕಷ್ಟ ಪರಿಹಾರವಾದಾಗ ಅದಕ್ಕೆ ತಕ್ಕ ರೀತಿಯಲ್ಲಿ ಹೊರೆಹೊರುವುದಾಗಿ, ಸೇವೆಮಾಡುವುದಾಗಿ ಬೇಡಿಕೊಂಡಿದ್ದರೆ, ಅದನ್ನು ಚಾಚೂ ತಪ್ಪದೇ ನೆರವೇರಿಸುವರು.

೫. ಹೊರೆಹೊರುವ ಸಂದರ್ಭದಲ್ಲಿ ಕೆಲವರು ದೀರ್ಘ ನಮಸ್ಕಾರಹಾಕಿ ಹೊರೆ ಹೊರುವುದಾಗಿ ಹರಕೆಹೊತ್ತಿರುತ್ತಾರೆ. ಅಂತವರು ಹೊರೆಹೊರುವ ಮೊದಲು ಗುಡಿಯುವರೆಗೆ ದೀರ್ಘನಮಸ್ಕಾರಹಾಕುತ್ತ ಹೋಗಿ, ಬಳಿಕ ಕ್ರಮದಂತೆ ಹೊರೆಹೊರುವರು.

೬. ಗೊರವಿಯರಲ್ಲಿ ಮುಳ್ಳಾವಿಗೆ ಸೇವೆಯ ಹರಕೆಹೊರುವುದು ಸಹ ಒಂದು ಪದ್ಧತಿ. ಈ ರೀತಿಯ ಸೇವೆಯನ್ನು ಮಾಡುವವರು ಮುಳ್ಳಿನ ಆವಿಗೆಯ ಮೇಲೆ ನಿಂತು ಸೇವೆ ಸಲ್ಲಿಸುವುದಾಗಿ ದೀಕ್ಷೆ ಪಡೆದಿರುತ್ತಾರೆ[19]. ಇಂತವರು ಜಾತ್ರೆ, ಉತ್ಸವಾದಿ ಸಂದರ್ಭಗಳಲ್ಲಿ ದೇವರ ಪಕ್ಕದಲ್ಲಿ ಮುಳ್ಳಿನ ಆವಿಗಿಯ ಮೇಲೆ ನಿಂತು ಚವುರ ಬೀಸಿ ಸೇವೆ ಸಲ್ಲಿಸುವರು. ಉಳಿದ ಸಂದರ್ಭಗಳಲ್ಲಿ ಮುದ್ರೆಯೊಡನೆ ಆವಿಗೆಯನ್ನು ಸಹ ತಮ್ಮ ಹೆಗಲ ಮೇಲೆ ಹೊತ್ತುಕೊಂಡು ತಿರುಗುತ್ತಾರೆ.

೭. ಮಕ್ಕಳಾಗದವರು ಅಥವಾ ಹುಟ್ಟಿದ ಮಕ್ಕಳು ಬದುಕುಳಿಯದವರು, ತಮಗೆ ಮಕ್ಕಳಾಗಿ ಅವು ಬದುಕುಳಿದರೆ ಅವರನ್ನು ಸೇವೆಗೆ ಒಪ್ಪಿಸುತ್ತೇವೆ ಎಂದು ಹರಕೆ ಹೊರುತ್ತಾರೆ. ಅದರಂತೆ ಪಾಲಿಸುತ್ತಾರೆ. ಒಮ್ಮೊಮ್ಮೆ ವಿಪರೀತ ರೋಗ ಬಂದು ಅದು ಉಲ್ಬಣಿಸಿ ಬದುಕುವುದೇ ಅಸಾಧ್ಯವೆಂದು ಕಂಡಾಗ ತಮ್ಮನ್ನು ಕಾಪಾಡಲು ದೇವರಲ್ಲಿ ಮೊರೆಯಿಡುತ್ತಾರೆ. ಆಮೇಲೆ ಸೇವೆಯ ಹೊರೆಹೊತ್ತು ಹರಕೆತೀರಿಸುತ್ತಾರೆ.

೮. ತಮ್ಮ ಬಯಕೆ ಕೈಗೂಡಿದರೆ ಇಂತಿಷ್ಟು ಪ್ರಮಾಣದಲ್ಲಿ, ಇಷ್ಟು ಜನರಿಗೆ ಅಡಿಗೆ ಮಾಡಿಸಿ ಊಟ ಹಾಕಿಸುವುದಾಗಿ ಕೆಲವರು ಹರಕೆ ಹೊತ್ತುಕೊಂಡಿರುತ್ತಾರೆ. ಅಂತಹವರು ದೇವಸ್ಥಾನಕ್ಕೆ ಹೋಗಿ ಆ ರೀತಿಯ ಹರಕೆಸಲ್ಲಿಸಿ ಬರುವರು.

೯. ಕೆಲವರು ತಮ್ಮ ಬಯಕೆ ಕೈಗೂಡಿದರೆ ಪಾದುಕೆಗಳನ್ನು ಮಾಡಿಸಿ ತಂದು ಕೊಡುತ್ತೇವೆ ಎಂದು ಹರಕೆ ಹೊತ್ತುಕೊಂಡಿರುತ್ತಾರೆ. ಅದರಂತೆ ಬಯಕೆ ಕೈಗೂಡಿದಾಗ ತಂದು ನೀಡಿರುವ ಬೃಹತ್ ಪಾದುಕೆಗಳನ್ನು ದೇವಾಲಯದ ಮುಖ್ಯದ್ವಾರದಲ್ಲಿ ನೋಡಬಹುದು. (ಇದು ಕೇವಲ ಮೈಲಾರಕ್ಕೆ ಮಾತ್ರ ಸೀಮಿತವಲ್ಲ. ಇತರ ದೇವಾಲಯಗಳ ಬಳಿಯೂ ಈ ರೀತಿಯ ಪಾದುಕೆಗಳನ್ನು ನಾವು ನೋಡಬಹುದು) (ಚಿತ್ರ – ೨೨)

೧೦. ಮಕ್ಕಳ ಜಾವಳ, ಕಿವಿಚುಚ್ಚುವುದು ಮೊದಲಾದ ಹರಕೆ ಹೊರುವವರೂ ಇದ್ದಾರೆ. ಅವರು ದೇವಸ್ಥಾನಕ್ಕೆ ಬಂದು ತಮ್ಮ ಹರಕೆಯನ್ನು ತೀರಿಸುತ್ತಾರೆ.

೧೧. ಮೈಲಾರದಲ್ಲಿರುವ ಮೃಣ್ಮಯ ಮೂರ್ತಿಗೆ ಹರಕೆಯ ರೂಪದಲ್ಲಿ ಎಣ್ಣೆ ಸ್ನಾನ ಮಾಡಿಸುವ ಪದ್ಧತಿಯೂ ಇದೆ.

## ೭.೫ ಪವಾಡಗಳು

ಜನಪದರಲ್ಲಿನ ಆಚರಣೆಗಳು ಉಗ್ರಸ್ವರೂಪದಲ್ಲಿರುವುದನ್ನು ನಾವು ಕಾಣುತ್ತೇವೆ. ಈ ರೀತಿಯ ಆಚರಣೆಗಳಿಗೆ ಕಾಲ ದೇಶಗಳ ಮಿತಿಯಿಲ್ಲ. ಎಲ್ಲ ಜನಾಂಗಗಳಲ್ಲಿ, ನಾವು ಉಗ್ರ ಆಚರಣೆಗಳನ್ನು ಕಾಣಬಹುದಾಗಿದೆ. ಇದಕ್ಕೆ ಮೂಲಕಾರಣ ಬಹುಶಃ ನಮ್ಮನ್ನು ನಾವು ಹಿಂಸಿಸಿಕೊಂಡರೆ ದೇವರು ಒಲಿಯುತ್ತಾನೆ, ಕೇಳಿದ್ದನ್ನು ನೀಡುತ್ತಾನೆ ಎಂಬ ಭಾವನೆಯಿರಬನುದು. ಇನ್ನೊಂದು ಕಡೆ ಹರಕೆ ಹೊತ್ತುಕೊಂಡು ಆ ಹರಕೆ ಪೂರೈಸಿದಾಗ ದೇವರ ಪ್ರೀತ್ಯರ್ಥವಾಗಿ ಉಗ್ರ ಆಚರಣೆಗಳ ಮೂಲಕ ಸೇವೆ ಸಲ್ಲಿಸುವುದನ್ನು ನಾವು ಕಾಣುತ್ತೇವೆ.

ಮೈಲಾರ ಕ್ಷೇತ್ರದಲ್ಲಿಯೂ ಸಹ ನಾವು ಇದೇ ರೀತಿಯ ಅನೇಕ ಉಗ್ರ ಆಚರಣೆಯ ಕ್ರಮಗಳನ್ನು ಕಾಣುತ್ತೇವೆ. ಅವನ್ನು ಇಲ್ಲಿನವರು ಪವಾಡಗಳು ಎಂದು ಕರೆಯುತ್ತಾರೆ. ಭಗವಂತನ ಶಕ್ತಿಯಿಂದ ತಾವು ಈ ಪವಾಡಗಳನ್ನು ಮಾಡುವುದಾಗಿ ಭಕ್ತರು ಹೇಳುತ್ತಾರೆ. ಈ ಹಿನ್ನೆಲೆಯಲ್ಲಿ ಕೆಲ ಅಂಶಗಳನ್ನು ಗಮನಿಸಿದಾಗ ಮೈಲಾರ ಮತ್ತು ಲಿಂಗ ಇವೆರಡೂ ಪ್ರತ್ಯೇಕ ಅಂಗಗಳಾಗಿದ್ದು, ಕಾಲಾಂತರದಲ್ಲಿ ಮೈಲಾರ ಲಿಂಗ ಎಂದು ಪ್ರಸಿದ್ಧಿಗೆ ಬಂದಂತೆ ತೋರುತ್ತದೆ. ಏಕೆಂದರೆ ಮೈಲಾರ ಭೈರವನ ರೂಪ ಹಾಗೂ ಲಿಂಗ ಶಿವನ ರೂಪ (ಶಾಂತ). ಶಿವನಿಗೆ ರುದ್ರ ಎಂಬ ಹೆಸರಿದೆಯಾದರೂ ಶಿವನ ಹೆಸರಿನಲ್ಲಿನ ಉಗ್ರ ಆಚರಣೆಗಳು ತುಂಬಾ ಕಡಿಮೆ. ಬೇಡರ ಕಣ್ಣಪ್ಪನಂತಹ ಭಕ್ತ ಶಿರೋಮಣಿ ತನ್ನ ಕಣ್ಣನ್ನು ಶಿವನಿಗರ್ಪಿಸಿದ ಹಿನ್ನೆಲೆ ಇದೆಯಾದರೂ ಅದನ್ನು ಆಚರಣೆಗೆ ತಂದು ತಮ್ಮ ಕಣ್ಣನ್ನು ಹರಕೆಯ ರೂಪದಲ್ಲಿ ನೀಡಿರುವುದನ್ನು ನಾವು ಕಾಣುವುದಿಲ್ಲ.[20] ಶಿರಿಯಾಳನೆಂಬ ಭಕ್ತ ತನ್ನ ಮಗನ ತಲೆಯನ್ನೇ ಕತ್ತರಿಸಿ ಶಿವನಿಗೆ ನೈವೇದ್ಯ ಮಾಡಿದನೆಂಬ ಪ್ರತೀತಿ ಇದ್ದರೂ ಅದನ್ನು ಆಚರಣೆಯ ರೂಪದಲ್ಲಿ ನಾವು ಕಂಡರಿಯೆವು. ಹೀಗಾಗಿ ಮೈಲಾರನ ಆಚರಣೆಗಳು ಕಾಲಾಂತರದಲ್ಲಿ ಮೈಲಾರಲಿಂಗನ ಆಚರಣೆಗಳಾಗಿ ಬಂದಿರಬಹುದೆಂದು ಹೇಳಬಹುದು.

ಇನ್ನೊಂದು ವೈಶಿಷ್ಟ್ಯವನ್ನು ಇಲ್ಲಿ ಗಮನಿಸಬಹುದಾದರೆ ಇಲ್ಲಿನ ಆಚರಣೆಗಳಿಗೂ ಮತ್ತು ಹತ್ತಿರದ ಉರುಕುಂದಿಯಲ್ಲಿ ಇರುವ ವೀರಭದ್ರನ ಸಂಪ್ರದಾಯಕ್ಕೆ ಸೇರಿದ

ಆಚರಣೆಗಳಿಗೂ ಸಾಮ್ಯತೆ ಕಂಡುಬರುತ್ತದೆ. ಹೀಗಾಗಿ ಪ್ರಾದೇಶಿಕತೆಯನ್ನು ಮೈಲಾರಲಿಂಗನ ಸಂಪ್ರದಾಯದವರೂ ರೂಢಿಸಿಕೊಂಡಿರುವ ಸಾಧ್ಯತೆಗಳಿವೆ.

ಮೈಲಾರಲಿಂಗನ ಆಚರಣೆಗಳಲ್ಲಿ ಅನೇಕ ರೀತಿಯ ಪವಾಡಗಳನ್ನು ಮಾಡಿ ತನ್ಮೂಲಕ ಭಗವಂತನನ್ನು ಮೆಚ್ಚಿಸುವ ಕಾರ್ಯ ಮಾಡುವ ಭಕ್ತರಿದ್ದಾರೆ. ಇವರನ್ನು ಕಂಚಾವೀರರೆಂದೇ ಕರೆಯುತ್ತಾರೆ. ಈ ವರ್ಗದವರು ಹರಿಜನರೇ ಆಗಿರುವುದು ವಿಶೇಷ. ಕಂಚಾವೀರರು ತಮ್ಮನ್ನು ತಾವು ವೀರಭದ್ರನ ಅಂಶವೆಂದು ಹೇಳಿಕೊಳ್ಳುತ್ತಾರೆ. ಹಾಗೆಯೇ ಮಣಿಕನ ಜೊತೆಗೆ ಮೈಲಾರನ ಹೋರಾಟದಲ್ಲಿ ತಾವು ಶಿವನಿಗೆ ಸಹಾಯಮಾಡಲೆಂದೇ ಹುಟ್ಟಿ ಬಂದವರೆಂದು ಹೇಳಿಕೊಳ್ಳುತ್ತಾರೆ. ಇದಕ್ಕೆ ಜನಪದ ಕಥೆಯೊಂದು ಹೀಗಿದೆ[21]:

ಒಮ್ಮೆ ಮೈಲಾರಭೈರವನು ಯುದ್ಧ ಮಾಡಿಮಾಡಿ ದಣಿದು ಮೈಲಾರದ ತುಂಗಭದ್ರಾ ನದಿಯ ದಂಡೆಯಮೇಲೆ ತಿರುಗಾಡುತ್ತಿದ್ದಾಗ ತನ್ನ ಬೆವರನ್ನು ಒರೆಸಿ ನೆಲಕ್ಕೆ ಎಸೆದನು. ಆಗ ಆ ಬೆವರಿಂದ ಐದು ಜನ ವೀರರು ಉದ್ಭವಿಸಿದರು. ಮೈಲಾರನು ಅವರನ್ನು ಕುರಿತು ನೀವು ಯಾರೆಂದು ಕೇಳಿದಾಗ ಅವರು – ನಾವು ನಿನ್ನ ಮಕ್ಕಳು. ರಾಕ್ಷಸರ ಸಂಹಾರ ಕಾರ್ಯದಲ್ಲಿ ನಿಮಗೆ ಸಹಾಯಮಾಡಲು ಬಂದಿದ್ದೇವೆ ಎಂದು ಹೇಳಿದರು. ಮುಂದೆ ಇವರೇ ಪಂಚ ವೀರರು ಎಂದು ಪ್ರಸಿದ್ಧರಾದರು. ಈಗ ಇವರನ್ನೇ ಕಂಚಾವೀರರೆಂದು ಕರೆಯುತ್ತಾರೆ.

ಇದೇ ಕಥೆಯ ಪಾಠಾಂತರವನ್ನು ಡಾ॥ ಎಂ. ಎಸ್. ವೆಂಕಟೇಶ ಅವರು ಸಂಗ್ರಹಿಸಿದ್ದು ಅದು ಹೀಗಿದೆ[22]–

ಮೈಲಾರನು ಮಲ್ಲಾಸುರನ ಜೊತೆಯಲ್ಲಿ ಯುದ್ಧ ಮಾಡಿ ಸುಸ್ತಾಗಿ, ಇನ್ನೇನು ಪೂರ್ಣ ಸೋತುಹೋಗುವ ಸ್ಥಿತಿ ಬಂದಾಗ ತುಂಗಭದ್ರಾ ನದಿಯಲ್ಲಿ ಮುಳುಗಿಬಿಟ್ಟ. (ಮಹಾಭಾರತದ ದುರ್ಯೋಧನನನ್ನು ಅನುಕರಿಸಿದ ಕ್ರಮವನ್ನು ಇಲ್ಲಿ ಕಾಣಬಹುದು) ಆಗ ಅವನ ಮಗ ವೀರಭದ್ರನು ಅದನ್ನು ನೋಡಿ, ತಂದೆಯ ಸಹಾಯಕ್ಕೆ ಹೋಗೋಣ ಎಂದುಕೊಂಡು ವೀರಾವೇಶದಿಂದ ತನ್ನ ಜಟೆಯನ್ನು ನೆಲಕ್ಕೆ ಅಪ್ಪಳಿಸಿದ. ಆಗ ಪಂಚವೀರರು ಉದ್ಭವವಾದರು.[23] ಈ ಪಂಚವೀರರು ನೀರಲ್ಲಿ ಮುಳುಗಿದ್ದ

ಮೈಲಾರನನ್ನು ಮೇಲಕ್ಕೆತ್ತಿ ತಂದು – ನಾವು ನಿನ್ನ ಮಗ ವೀರಭದ್ರನ ಅಂಶದವರು. ನೀವು ಹೆದರದೇ ನಮ್ಮ ಜೊತೆ ಬನ್ನಿ, ಎಂದು ಕರೆತಂದು ಯುದ್ಧಮಾಡಿಸಲು ಕರೆದೊಯ್ದರಂತೆ. ಅಂದಿನಿಂದ ಇಂದಿನವರೆಗೂ ಇವರು ಮೈಲಾರನ ದೇವಸ್ಥಾನದಲ್ಲಿ ಪವಾಡಗಳನ್ನು ಮಾಡುತ್ತ ಬಂದಿದ್ದಾರೆ.

ಪವಾಡಗಳನ್ನು ಮಾಡುವ ವ್ಯಕ್ತಿ ಕ್ರಮಬದ್ಧವಾಗಿ ದೀಕ್ಷೆ ಪಡೆದುಕೊಳ್ಳಲೇಬೇಕು. ದೀಕ್ಷೆ ಪಡೆದುಕೊಂಡ ನಂತರ ಪವಾಡಗಳನ್ನು ಮಾಡುವಾಗ (ಹುಣ್ಣಿಮೆ, ಜಾತ್ರೆ, ಕಾರಣಿಕ ಮೊದಲಾದ ಸಂದರ್ಭದಲ್ಲಿ) ಮಾಂಸಾಹಾರ ಸೇವನೆ ಮಾಡುವಂತಿಲ್ಲ. ಸಾಮಾನ್ಯವಾಗಿ ಕಾರಣಿಕ ಹಾಗೂ ಇತರೆ ಉತ್ಸವಗಳಲ್ಲಿ ಈ ಪವಾಡಗಳನ್ನು ಮಾಡುವುದು ವಾಡಿಕೆ. ಕಾರಣಿಕದ ನುಡಿ ನುಡಿದ ಮಾರನೆಯ ದಿನ ಮೈಲಾರದಲ್ಲಿ ಸಂಜೆ ಐದು ಗಂಟೆಯ ಸುಮಾರಿಗೆ ಈ ಪವಾಡಗಳು ನಡೆಯುತ್ತವೆ. ಸುತ್ತಮುತ್ತಲಿನ ಊರುಗಳಿಂದ ಬಂದ ಸಹಸ್ರಾರು ಭಕ್ತಾದಿಗಳು ಈ ಪವಾಡಗಳಿಗೆ ಪ್ರತ್ಯಕ್ಷದರ್ಶಿಗಳಾಗಿರುತ್ತಾರೆ.

**೧. ಕನ್ನೆಪವಾಡ :**

ಕನ್ನೆಪವಾಡವನ್ನು ಮದುವೆಯಾಗದ ವ್ಯಕ್ತಿಗೆ ಮಾಡುತ್ತಾರೆ. ಈ ಪವಾಡವನ್ನು ಮಾಡದ ಹೊರತು ಅವನಿಗೆ ಮದುವೆಮಾಡುವಂತಿಲ್ಲ. ಇದನ್ನು ಮಾಡುವ ವ್ಯಕ್ತಿ ಬ್ರಹ್ಮಚಾರಿಯಾಗಿರಬೇಕು. ಸಾಮಾನ್ಯವಾಗಿ ೧೬ರಿಂದ ೧೮ ವರ್ಷದೊಳಗಿನವರಿಗೆ ಈ ಪವಾಡಗಳನ್ನು ಮಾಡುತ್ತಾರೆ.

ಕನ್ನೆಪವಾಡ ನಡೆಯುವ ಮೂರು ದಿನಗಳ ಮೊದಲಿನಿಂದ ಪವಾಡ ಮಾಡುವ ಹುಡುಗ ಉಪವಾಸ ಇರುತ್ತಾನೆ. ಪವಾಡ ಮಾಡುವ ದಿನ ಅವನಿಗೆ ಸ್ನಾನ ಮಾಡಿಸಿ, ಗೊರವಪ್ಪನಂತೆ ಬಟ್ಟೆಗಳನ್ನು ಧರಿಸಿ, ಪೂರ್ವಾಭಿಮುಖವಾಗಿ ಕೂರಿಸುತ್ತಾರೆ. ಪವಾಡದ ಸಾಧನಗಳಾದ ಕಬ್ಬಿಣದ ಸರಳು[24], ಪವಾಡದ ನಂತರ ಗಾಯಕ್ಕೆ ಕಟ್ಟಲು ಬೇಕಾದ ಹೊಸಬಟ್ಟೆ, ಮೊದಲಾದವನ್ನು ಕಂಕಣ ಕಟ್ಟಿ ಅಲಂಕರಿಸುತ್ತಾರೆ. ಕೆಲಬಾರಿ ಕನ್ನೆಪವಾಡ ಮಾಡುವವನಿಗೆ ಮುಯ್ಯು ಕೊಡುವುದೂ ಉಂಟು. ಈ ಪವಾಡ ಮುಗಿಯುವವರೆಗೂ ಹೆಂಗಸರು ಇವನ ಬಳಿ ಸುಳಿಯಕೂಡದು. ಮನೆಯಲ್ಲಿ ಪೂಜೆಯಾದ ಬಳಿಕ ಎಲ್ಲರೂ ಒಡೆಯರ ಮನೆಗೆ ಹೋಗಿ ಆಶೀರ್ವಾದ ಪಡೆಯುತ್ತಾರೆ.

ತದನಂತರದಲ್ಲಿ ವಾಲಗ ಸಮೇತ ಒಡೆಯರು ತಮ್ಮ ವಿಶೇಷ ಉಡುಗೆಯಲ್ಲಿ ಕಂಚಾವೀರರೊಡನೆ ದೇವಾಲಯಕ್ಕೆ ಬರುತ್ತಾರೆ. ದಾರಿಯಲ್ಲಿ ಹೆಗ್ಗಪ್ಪನ ಗುಡಿಯ ಮುಂದೆ ಖಡ್ಗದಿಂದ ವಂದನೆ ಸಲ್ಲಿಸುತ್ತಾರೆ. ಮುಖ್ಯ ದೇವಾಲಯದ ಆವರಣದಲ್ಲಿರುವ ಗಂಗಿ ಮಾಳವ್ವನಿಗೆ ವಂದನೆ ಸಲ್ಲಿಸಿ, ಉಳಿದ ದೇವರಿಗೂ ವಂದನೆ ಸಲ್ಲಿಸುತ್ತಾರೆ.

ತರುವಾಯು ಗಂಗಿಮಾಳಮ್ಮನ ಗುಡಿಯ ಮುಂದೆ ಕಂಬಳಿಹಾಸಿ ಅದರ ಮೇಲೆ ಪವಾಡದ ಸಾಧನಗಳನ್ನು ಇಟ್ಟು ಪೂಜೆಸಲ್ಲಿಸುತ್ತಾರೆ. (ಚಿತ್ರ – ೧೪) ಬಳಿಕ ಹಿರಿಯ ಅನುಭವಿ ಕಂಚಾವೀರನೊಬ್ಬ ಕಬ್ಬಿಣದ ಸಲಾಕೆಯನ್ನು ತೆಗೆದುಕೊಂಡು ಪವಾಡ ಮಾಡಬಯಸುವ ಹುಡುಗನ ಕಾಲಿಗೆ ಶಸ್ತ್ರ ಹಾಕಲು ಸಿದ್ಧನಾಗುತ್ತಾನೆ. ಒಡೆಯರ ಅಪ್ಪಣೆಯ ಬಳಿಕ ಗಂಗೆ ಮಾಳಮ್ಮನ ಗುಡಿಯ ಮುಂದೆ ಇರುವ ಪವಾಡದ ಕಟ್ಟೆಯ ಬಳಿಯ ಚಿಕ್ಕ ಒರಳಿನಂತಹ ಹಳ್ಳದ ಬಳಿ ಹುಡುಗನನ್ನು ಕುಳ್ಳಿರಿಸಿ ಶಸ್ತ್ರ ಹಾಕಬೇಕಾದ ಕಾಲಿನ ಭಾಗವನ್ನು ಹಳ್ಳದ ಮೇಲೆ ಬರುವಂತೆ ಇಟ್ಟು ಕಾಲಿನ ಮೀನಖಂಡದ ಭಾಗದಲ್ಲಿ (ಪಾದದಿಂದ ಸುಮಾರು ನಾಲ್ಕು ಅಂಗುಲ ಮೇಲೆ) ಜೋರಾಗಿ ಚುಚ್ಚುತ್ತಾನೆ. ಬಳಿಕ ಕಾಲನ್ನು ಸ್ವಲ್ಪ ಮೇಲಕ್ಕೆತ್ತಿ ಶಸ್ತ್ರವನ್ನು ಆಚೆಯಿಂದ ಈಚೆ ಎಳೆದು ಕಾಲಿನ ಭಾಗದಲ್ಲಿ ಎರಡೂ ಕಡೆ ಶಸ್ತ್ರ ಬಂದಿರುವುದನ್ನು ಖಾತ್ರಿ ಪಡಿಸುತ್ತಾರೆ. ಆ ಬಳಿಕ ಶಸ್ತ್ರವನ್ನು ತೆಗೆದು ಆ ಭಾಗಕ್ಕೆ ಭಂಡಾರವನ್ನು ತುಂಬಿ ಹೊಸಬಟ್ಟೆಯಿಂದ ಕಟ್ಟುತ್ತಾರೆ. ಈ ರೀತಿ ಕನ್ನೆ ಪವಾಡ ಮಾಡಿದ ಹುಡುಗನಿಗೆ ಮದುವೆಮಾಡಬಹುದು. ಭವಿಷ್ಯದಲ್ಲಿ ಇವನಿಗೆ ಇದೇ ರೀತಿಯ ಅನ್ಯ ಪವಾಡಗಳನ್ನು ಮಾಡುವ ಅರ್ಹತೆ ಬರುತ್ತದೆ.

ಮೈಲಾರದಲ್ಲಿ ಪವಾಡಗಳು ನಡೆಯುವುದು ಸಾಮಾನ್ಯವಾಗಿ ಗಂಗಿಮಾಳಮ್ಮನ ಗುಡಿಯ ಮುಂದೆ. ಇಲ್ಲಿರುವ ಒಂದು ಕಟ್ಟೆಯನ್ನು ಪವಾಡದ ಕಟ್ಟೆ ಎಂದೇ ಕರೆಯುತ್ತಾರೆ. ಅದರ ಎದುರಿಗೆ ಒಡೆಯರು ಹಾಗೂ ಇತರರಿಗೆ ಕುಳಿತುಕೊಳ್ಳಲು ಉನ್ನತಾಸನಗಳ ವ್ಯವಸ್ಥೆಮಾಡಿರುತ್ತಾರೆ. ಪವಾಡದ ಕಟ್ಟೆಯ ಬಳಿ ಪವಾಡಮಾಡುವವರು ಗದ್ದುಗೆ ಹಾಸಿ ಕುಳಿತುಕೊಂಡಿರುತ್ತಾರೆ. ಒಡೆಯರು ಆಸೀನರಾಗುತ್ತಿದ್ದಂತೆ ಆವೇಶಭರಿತರಾಗಿ ಹಾಹ್ಹು ಎನ್ನುತ್ತ ಒಡೆಯರ ಕಾಲಿಗೆ ಬಿದ್ದು ಅವರ ಆಶೀರ್ವಾದ ಪಡೆಯುತ್ತಾರೆ. ಒಡೆಯರು ತಮ್ಮ ಭಂಡಾರದ ಬಟ್ಟಲಿನಿಂದ ಭಂಡಾರವನ್ನು ಹಚ್ಚಿ ದೇವರ ಹೆಸರಿನಲ್ಲಿ ಆಶೀರ್ವಾದ ಮಾಡುತ್ತಾರೆ. ತದನಂತರದಲ್ಲಿ ಪವಾಡ ಕಾರ್ಯಕ್ರಮಗಳು ಆರಂಭವಾಗುತ್ತವೆ.

೨. **ಸರಳು ಪವಾಡ :** ಸರಳು ಪವಾಡ ಮಾಡುವಾಗ ಕಬ್ಬಿಣದ ಸರಳನ್ನು ಬಳಸುತ್ತಾರೆ. ಈ ಪವಾಡ ಮಾಡುವ ಮೊದಲು ಸಕಲ ದೇವರಿಗೂ ನಮಸ್ಕರಿಸಿ, ಶಸ್ತ್ರವನ್ನು ಕಾಲಿನ ವೀನಖಂಡದ ಭಾಗದಲ್ಲಿ ಜೋರಾಗಿ ಚುಚ್ಚಿಕೊಳ್ಳುತ್ತಾರೆ. ಆಮೇಲೆ ಅದನ್ನು ಆಚೆ ಈಚೆ ಎಳೆದು ನೆರೆದ ಜನರಿಗೆ ದೇವರ ಲೀಲೆಯನ್ನು ತೋರಿಸುತ್ತಾರೆ. ಚುಚ್ಚಿದ ಸರಳನ್ನು ಹೊರಗೆ ತೆಗೆದು ಆ ಜಾಗಕ್ಕೆ ಭಂಡಾರವನ್ನು ತುಂಬಿ ಹೊಸಬಟ್ಟೆಯಿಂದ ಕಟ್ಟುತ್ತಾರೆ. ಸರಳು ಪವಾಡ ಮಾಡುವಾಗ ಹೆಚ್ಚು ರಕ್ತಸ್ರಾವ ವಾಗುವುದಿಲ್ಲ. ಒಂದು ವೇಳೆ ಹೆಚ್ಚು ರಕ್ತಸ್ರಾವವಾದರೆ ಪವಾಡ ಮಾಡುವವನಲ್ಲಿ ಏನೋ ಕೊರತೆಯಿದೆ ಎಂದು ಜನ ಭಾವಿಸುತ್ತಾರೆ.

೩. **ಬಗನಿ ಗೂಟ ಹಾಗೂ ಮಿಣಿ ಪವಾಡ :** ಈ ಪವಾಡ ಮಾಡುವವನು ಬಗನಿ ಗೂಟ,[25] ಕೊಡತಿ,[26] ಹಾಗೂ ಮಿಣಿ[27]ಯನ್ನು ಸಿದ್ಧವಾಗಿರಿಸಿಕೊಂಡಿರುತ್ತಾನೆ. ಸರಳು ಪವಾಡವಾದ ಬಳಿಕ ಬಗನಿ ಗೂಟದ ಪವಾಡ ಮಾಡುವ ಕಂಚಾವೀರನು ಪವಾಡದ ಕಟ್ಟೆಯ ಸಮೀಪ ಬರುತ್ತಾನೆ. ಅಲ್ಲಿ ಒರಳಿನಂತಿರುವ ಜಾಗದಲ್ಲಿ ತನ್ನ ಎಡ ಕಾಲಿನ ಮೀನಖಂಡ ಸೇರುವ ರೀತಿಯಲ್ಲಿ ಇಟ್ಟುಕೊಂಡು ಮೇಲ್ಭಾಗದಲ್ಲಿ ಬಗನಿಯ ಗೂಟವನ್ನು ಇಟ್ಟು ಕೊಡತಿಯಿಂದ ಗೂಟವನ್ನು ಹೊಡೆಯಲು ಆರಂಭಿಸುತ್ತಾನೆ. (ಚಿತ್ರ –೧೭) ಗೂಟವು ಈ ಬದಿಯಿಂದ ಆ ಬದಿಗೆ ಬರುವವರೆಗೆ ಈ ಕ್ರಿಯೆ ಸಾಗುತ್ತದೆ. ಗೂಟದ ಮುಂಭಾಗ ಕಾಲಿನ ಒಂದು ಬದಿಯಿಂದ ಇನ್ನೊಂದು ಬದಿಗೆ ಬಂದ ತಕ್ಷಣ ಅದನ್ನು ಹೊರತೆಗೆದು ಆ ರಂಧ್ರದಲ್ಲಿ ಚಿಗರೆಯ ಚರ್ಮದಿಂದ ಮಾಡಿದ ಮಿಣಿಯನ್ನು ಸೇರಿಸಿ ಅತ್ತಿಂದಿತ್ತ ಎಳೆದಾಡುತ್ತಾರೆ. (ಚಿತ್ರ – ೧೮) ಈ ಸಂದರ್ಭದಲ್ಲಿ ಪವಾಡ ಮಾಡುವ ವ್ಯಕ್ತಿ ಆವೇಶಭರಿತನಾಗಿದ್ದು ಜೋರಾಗಿ ಹೋ ಹ್ಹೊ ಎಂದು ಕಿರುಚುತ್ತಿರುತ್ತಾನೆ. ಅವನ ಜೊತೆಗಾರರೂ ಸಹ ಈ ಸದ್ದಿನಲ್ಲಿ ಭಾಗಿಯಾಗುತ್ತಾರೆ. ನೋಡುಗರಿಗಂತೂ ಈ ದೃಶ್ಯ ಎಷ್ಟು ಉಗ್ರವಾಗಿರುತ್ತದೆಂದರೆ ಎರಡು ಕ್ಷಣವೂ ನೆಟ್ಟ ದೃಷ್ಟಿಯಿಂದ ನೋಡಲು ಸಾಧ್ಯವಾಗುವುದಿಲ್ಲ. ಕೆಲವರಂತೂ ಈ ದೃಶ್ಯ ನೋಡಿ ಮೂರ್ಛಿತ ರಾಗುವರು. ಈ ಪವಾಡವಾದ ಬಳಿಕ ಕಾಲಿನ ಗಾಯವಾದ ಭಾಗಕ್ಕೆ ಭಂಡಾರವನ್ನು ತುಂಬಿ ಹೊಸಬಟ್ಟೆಯಿಂದ ಕಟ್ಟುತ್ತಾರೆ. ಮೊದಲು ಈ ಗಾಯಗಳಿಗೆ ಬಾಳೆಹಣ್ಣು,

ಸಕ್ಕರೆ, ಭಂಡಾರ ಹಾಗೂ ದೇವರ ನಿರ್ಮಾಲ್ಯವನ್ನು[28] ಸೇರಿಸಿ ಕಟ್ಟುತ್ತಿದ್ದರಂತೆ. ಆದರೆ ನಾನು ಕಂಡಂತೆ ಕೇವಲ ಭಂಡಾರವನ್ನು ಮಾತ್ರ ಹಾಕಿ ಕಟ್ಟಿದರು.

೪. **ಕೈ ಪವಾಡ :** ಸರಳು ಪವಾಡ ಹಾಗೂ ಬಗನಿ ಗೂಟ–ಮಿಣಿಗಳ ಪವಾಡಗಳು ನಡೆದಾದ ಬಳಿಕ ಕೈ ಪವಾಡ ಮಾಡುವವನು ಸಿದ್ಧನಾಗುತ್ತಾನೆ. ಈ ಪವಾಡಕ್ಕೆ ಹನ್ನೊಂದು ಬತ್ತಿಗಳನ್ನು ಹಾಕಿ ಹೊತ್ತಿಸುವ ಕಕ್ಕಡಾರತಿಯನ್ನು ಸಿದ್ಧಪಡಿಸಿಕೊಳ್ಳುತ್ತಾರೆ. ಈ ಕಕ್ಕಡಾರತಿಯ ಕೆಳಗೆ ಚೂಪಾಗಿರುವ ಉದ್ದವಾದ ಮೊಳೆಯೊಂದನ್ನು ಸೇರಿಸಿರುತ್ತಾರೆ. ಈ ಪವಾಡ ಮಾಡುವವನು ಮೊದಲು ಸರಳಿನಂತಹ ಮೊಳೆಯ ಭಾಗವನ್ನು ತನ್ನ ಎಡಗೈ ಮಣಿಕಟ್ಟಿನ ಭಾಗದಲ್ಲಿ ಜೋರಾಗಿ ಚುಚ್ಚಿಕೊಂಡು ಎರಡೂ ಬದಿಗೆ ಆ ಸರಳು ಬರುವಂತೆ ಮಾಡುವನು. ಬಳಿಕ ಆ ಕಕ್ಕಡಾರತಿಯನ್ನು ಬೆಳಗಿಸಿಕೊಂಡು ಮೈಲಾರಲಿಂಗನಿಗೆ, ಗಂಗಿ ಮಾಳಮ್ಮನಿಗೆ ಹಾಗೂ ಒಡೆಯರಿಗೆ ನಿಂತಲ್ಲಿಂದಲೇ ಆರತಿ ಬೆಳಗುವನು. ಒಮ್ಮೊಮ್ಮೆ ಆವೇಶಭರಿತರಾಗಿ ತಮ್ಮ ಮುಂಗೈಯನ್ನು ಜೋರಾಗಿ ಜಾಡಿಸಿ ರಕ್ತ ಸಿಡಿಸುವುದೂ ಉಂಟು. ಆನಂತರ ಒಡೆಯರ ಬಳಿ ಹೋಗಿ ನಮಸ್ಕರಿಸಿ ಆಶೀರ್ವಾದ ಪಡೆಯುವರು. (ಚಿತ್ರ – ೧೫)

ಈ ಪವಾಡವನ್ನು ಕಾರಣಿಕದ ದಿನವೂ ಮಾಡುವುದನ್ನು ನಾನು ಕಂಡಿದ್ದೇನೆ. ಕಾರಣಿಕದ ಬಯಲಿನಲ್ಲಿ ಕಾರಣಿಕದ ಗೊರವಪ್ಪ ಕಾರಣಿಕದ ನುಡಿ ಹೇಳಿದ ಮರುಕ್ಷಣ ಜನರೆಲ್ಲ ತಮ್ಮ ತಮ್ಮ ಮನೆಗಳಿಗೆ ಹೊರಡಲು ಅನುವಾಗುತ್ತಾರೆ. ಅದೇ ಸಂದರ್ಭದಲ್ಲಿ ಎತ್ತರದ ದಿನ್ನೆಯ ಬಳಿ ಉತ್ಸವಮೂರ್ತಿಯೊಂದನ್ನು ಇಟ್ಟಿರುತ್ತಾರೆ. ಇದನ್ನು ಮಲ್ಲಾಸುರನ ರುಂಡವೆಂದೂ ಕರೆಯುತ್ತಾರೆ. ಈ ಉತ್ಸವ ಮೂರ್ತಿಯ ಬಳಿ ಗೊರವರು ಸೇರಿಕೊಂಡು ಕೈಯ್ಯಲ್ಲಿ ಕಕ್ಕಡಾರತಿಯನ್ನು ಚುಚ್ಚಿಕೊಂಡು ಆವೇಶಭರಿತರಾಗಿ ಮೂರ್ತಿಗೆ ಆರತಿ ಮಾಡುವುದನ್ನು ಇಲ್ಲಿ ಕಾಣಬಹುದು.

೫. **ಸರಪಳಿ ಪವಾಡ :** ಮೈಲಾರದಲ್ಲಿ ಸರಪಳಿ ಪವಾಡ ಮಾಡಲೆಂದೇ ಒಂದು ನಿಶ್ಚಿತ ಸ್ಥಳವಿದೆ. ಇದನ್ನು ಪವಾಡದ ಕಟ್ಟೆ[29] ಎಂದೇ ಕರೆಯುವರು. ಇಲ್ಲಿ

ಕೈಪವಾಡ ಹಾಗೂ ಕಾಲುಪವಾಡಗಳಾದ ಬಳಿಕ ಕುರುಬ ಗೊರವರು[30] ಬಂದು ಒಡೆಯರಿಗೆ ನಮಸ್ಕರಿಸಿ, ಸರಪಳಿ ಪವಾಡ ಮಾಡಲು ಮುಂದಾಗುವರು. ಈ ಪವಾಡ ಮಾಡುವ ಗೊರವನು ಕಲ್ಲಿನ ಫಲಕಕ್ಕೆ ಸರಪಳಿ ಬಿಗಿದು ಇನ್ನೊಂದು ತುದಿಯನ್ನು ತನ್ನ ಎರಡೂ ಕೈಗಳಲ್ಲಿ ಹಿಡಿದು ದೇವರಿಗೆ ನಮಸ್ಕರಿಸಿ, ಆವೇಶದಿಂದ ಜೋರಾಗಿ ಎಳೆಯುತ್ತಾನೆ. ಹೀಗೆ ಎಳೆದಾಗ ಸರಪಳಿಯ ಕೊಂಡಿ ಎರಡುಭಾಗವಾಗಿ ಸರಪಳಿ ತುಂಡಾಗುತ್ತದೆ. ಕೆಲವೊಮ್ಮೆ ಈ ಸರಪಳಿ ಒಂದೇ ಬಾರಿಗೆ ತುಂಡಾಗುವುದಿಲ್ಲ. ಈ ಸಂದರ್ಭದಲ್ಲಿ ಗೊರವನ ನಡತೆಯಲ್ಲಿ ಏರುಪೇರಾಗಿದೆ ಎಂದೋ, ಅಶುಭವೆಂದೋ ಭಾವಿಸುತ್ತಾರೆ. ಕೆಲವರು ಮಳೆಬೆಳೆಯಲ್ಲಿ ಕೊರತೆಯುಂಟಾಗುವುದು ಎಂದೂ ಭಾವಿಸುತ್ತಾರೆ. (ಚಿತ್ರ – ೧೬)

೬. **ಶಸ್ತ್ರ ಪವಾಡ :** ಈ ಪವಾಡವು ವೀರಭದ್ರನ ಒಕ್ಕಲಿನವರ ಪವಾಡದಂತೆಯೇ ಇದ್ದು, ತ್ರಿಶೂಲದ ಸರಳನ್ನು ಒಂದು ಕೆನ್ನೆಯಲ್ಲಿ ಚುಚ್ಚಿ ಇನ್ನೊಂದು ಕೆನ್ನೆಯಲ್ಲಿ ಬರುವಂತೆ ತೂರಿಸುತ್ತಾರೆ. ಇದನ್ನು ಕುತ್ತಿಗೆಯ ಚರ್ಮದಲ್ಲಿ ತೂರಿಸುವುದೂ ಉಂಟು. (ಚಿತ್ರ – ೧೯)

೭. **ಶಿರಸ್‌ಪವಾಡ :** ಈ ಮೊದಲು ಕಂಚಾವೀರರಲ್ಲಿ ಶಿರಸ್‌ಪವಾಡ[31] ಮಾಡುವ ಕ್ರಮವೂ ಇತ್ತೆಂಬ ಮಾತು ಮೈಲಾರದಲ್ಲಿ ಕೇಳಿಬರುತ್ತದೆ. ಈಗ ಮಾಡಿದ ಕೈಪವಾಡ ಹಾಗೂ ಕಾಲು ಪವಾಡಗಳ ಬದಲಾಗಿ ಇವರು ಶಿರಸ್‌ಪವಾಡವನ್ನೇ ಮಾಡುವ ಪದ್ಧತಿ ಇತ್ತಂತೆ. ಇದರ ಕ್ರಮದಂತೆ ಪವಾಡ ಮಾಡುವವರು ತಮ್ಮ ತಲೆಯನ್ನು ತಾವೇ ಕತ್ತರಿಸಿಕೊಂಡು ಒಂದು ದೊಡ್ಡ ತಟ್ಟೆಯಲ್ಲಿಟ್ಟು ಆ ತಟ್ಟೆಯಿಂದ ದೇವರಿಗೆ ಆರತಿ ಮಾಡುತ್ತಿದ್ದರಂತೆ. ಆಗ ಆ ರುಂಡವೇ ದೇವರಿಗೆ ಖಡ್ಗ ಹೇಳಿ ವಂದನೆ ಸಲ್ಲಿಸುತ್ತಿತ್ತೆಂದು ಸ್ಥಳೀಯರು ಹೇಳುತ್ತಾರೆ. ತದನಂತರದಲ್ಲಿ ಆ ರುಂಡವನ್ನು ಮುಂಡಕ್ಕೆ ಜೋಡಿಸಿ ಭಂಡಾರ ಹಚ್ಚಿ, ಬಿಳಿಬಟ್ಟೆಯಿಂದ ಹೊದಿಸುತ್ತಿದ್ದರು. ಆಗ ಆ ತಲೆ ಮತ್ತೆ ಮುಂಡದೊಡನೆ ಸೇರಿಕೊಳ್ಳುತ್ತಿತ್ತಂತೆ.

ಆದರೆ ಈಗ ಈ ಪವಾಡವನ್ನು ನೋಡಲು ಸಾಧ್ಯವಿಲ್ಲ. ಒಂದು ಬಾರಿ ದೇವರು ವ್ಯಕ್ತಿಯೊಬ್ಬರ ಮೈಮೇಲೆ ಬಂದು ಇದು ಕಲಿಯುಗವಾದ್ದರಿಂದ ನೀತಿ

ನಿಜಾಯಿತಿಗಳು ಅಳಿಸಿಹೋಗುತ್ತಿವೆ. ಆದ್ದರಿಂದ ಇನ್ನು ಮುಂದೆ ಶಿರಸ್‌ಪವಾಡ ಬೇಡ ಎಂದು ಹೇಳಿದನಂತೆ. ಅಂದಿನಿಂದ ಶಿರಸ್‌ಪವಾಡದ ಹೊರತಾಗಿ ಇನ್ನೆಲ್ಲ ಪವಾಡಗಳು ಮೈಲಾರದಲ್ಲಿ ನಡೆಯುತ್ತಿವೆ. ಇನ್ನೊಂದು ಅಭಿಪ್ರಾಯದಂತೆ ಒಮ್ಮೆ ಶಿರಸ್‌ಪವಾಡ ಮಾಡಿದ ಬಳಿಕ ತಲೆಯನ್ನು ದೇಹಕ್ಕೆ ಜೋಡಿಸುವಾಗ ಅದು ಹಿಂದೆಮುಂದೆ ಆಯಿತಂತೆ. ಅಂದಿನಿಂದ ಈ ಪವಾಡ ಮಾಡಬಾರದು ಎಂದು ದೇವರು ಒಂದು ಸಣ್ಣ ಮಗುವಿನ ರೂಪದಲ್ಲಿ ಬಂದು ಆಜ್ಞಾಪಿಸಿದನಂತೆ.[32] ಆದ್ದರಿಂದ ಈಗ ಮೈಲಾರದಲ್ಲಿ ಶಿರಸ್‌ಪವಾಡವೊಂದನ್ನು ಹೊರತುಪಡಿಸಿ ಉಳಿದೆಲ್ಲ ಪವಾಡಗಳನ್ನು ಮಾಡುತ್ತಾರೆ.

## ೭.೬ ಇತರ ಆಚರಣೆಗಳು

**ಅ. ದೋಣಿ ತುಂಬುವುದು :**

ಪ್ರತಿಯೊಂದು ಸಂಪ್ರದಾಯಕ್ಕೂ ಅದರದೇ ಆದ ಪ್ರಮುಖ ಲಾಂಛನವೊಂದು ಇರುತ್ತದೆ. ಅದರ ಮೂಲಕ ಆಯಾ ಸಂಪ್ರದಾಯವನ್ನು ನಾವು ಸುಲಭವಾಗಿ ಗುರುತಿಸಬಹುದು. ಉದಾಹರಣೆಗೆ ಪಡ್ಡಲಗಿ ಇದ್ದರೆ ಅವರನ್ನು ಎಲ್ಲಮ್ಮನ ಅಥವಾ ಹುಲಿಗೆಮ್ಮನ ಸಂಪ್ರದಾಯಕ್ಕೆ ಸೇರಿದವರೆಂದು ಗುರುತಿಸಬಹುದು. ಗೋಪಾಳಬುಟ್ಟಿ ಇದ್ದವರನ್ನು ದಾಸರೆಂದು ತಿಳಿಯಬಹುದು. ಅದೇ ರೀತಿ ಪ್ರತಿಯೊಬ್ಬ ಗೊರವನಲ್ಲಿ ಇರಬೇಕಾದ ಪ್ರಮುಖ ವಸ್ತು ದೋಣಿ. ಇದು ಇದ್ದರೆ ಅಲ್ಲಿ ಮೈಲಾರಲಿಂಗ ದೇವರ ಸಂಪ್ರದಾಯದವರಿದ್ದಾರೆ ಎಂದು ತಿಳಿಯಬಹುದು. ಇನ್ನು ಗೊರವ ಗೊರವಿಯರಲ್ಲಿ ಇತರ ಲಾಂಛನಗಳು ಇರದಿದ್ದರೂ ದೋಣಿಯೊಂದು ಇದ್ದರೆ ಸಾಕು ಅವರನ್ನು ಗೊರವರೆಂದು ಗುರುತಿಸಬಹುದು. ಇದರಲ್ಲಿ ಏನನ್ನೇ ನೀಡದೂ ಅದು ಮೈಲಾರಲಿಂಗಪ್ಪನಿಗೆ ಮುಟ್ಟುವುದು ಎಂದು ಜನ ತಿಳಿಯುತ್ತಾರೆ. ಇದನ್ನು ಕಟ್ಟಿಗೆ, ಹಿತ್ತಾಳೆ ಅಥವಾ ಕಂಚಿನಿಂದ ಮಾಡಿರುತ್ತಾರೆ. ಉಳ್ಳವರ ಮನೆಗಳಲ್ಲಿ ಬೆಳ್ಳಿ ಬಂಗಾರದ ದೋಣಿಗಳೂ ಇರುವ ಸಾಧ್ಯತೆಯಿದೆ. ಇದನ್ನು ಪರಿಶಿ ಬಟ್ಟಲು ಎಂದೂ ಕರೆಯುವರು. ಇದರಲ್ಲಿ ವಿಷವಿಕ್ಕಿದರೂ ಅಮೃತವಾಗುವುದು ಎಂಬ ನಂಬಿಕೆ ಗೊರವರಲ್ಲಿದೆ. ಕೆಲವರು ಹೇಳುವಂತೆ ಇದು ಮಲ್ಲಾಸುರನ ಶಿರ. ಇನ್ನೂ ಕೆಲವರು ಹೇಳುವಂತೆ ಮಲ್ಲಯ್ಯ

ಕುರುಬರ ಮನೆಯ ಮಾಳವ್ವನಿಗಾಗಿ ಕುರಿಯ ದೊಡ್ಡಿಯಲ್ಲಿ ಆಳಾಗಿ ದುಡಿದ. ಆಗ ನಾಯಿಗಳು ತಿನ್ನುತ್ತಿದ್ದ ದೋಣಿಯಲ್ಲಿಯೇ ಅವನೂ ಉಣ್ಣಬೇಕಾಯಿತು. ಆದ್ದರಿಂದ ಗೊರವರರೂ ಸಹ ಅವನನ್ನು ಅನುಸರಿಸಿ ದೋಣಿಯಲ್ಲಿಯೇ ಊಟಮಾಡುತ್ತಾರೆ.

ಜಾತ್ರೆ ಉತ್ಸವಗಳಲ್ಲಿ, ಮನೆಯಲ್ಲಿ ನಡೆಯುವ ಶುಭ ಕಾರ್ಯಕ್ರಮಗಳಲ್ಲಿ, ಚಿಕ್ಕಯ್ಯ ಜುಂಜಯ್ಯರ ಪೂಜೆಯ ಸಂದರ್ಭದಲ್ಲಿ, ಹರಕೆ ಒಪ್ಪಿಸುವ ಸಂದರ್ಭಗಳಲ್ಲಿ, ಭಕ್ತರು ಮೈಲಾರನ ದೇವಸ್ಥಾನಕ್ಕೆ ಬಂದಾಗ ಹೀಗೆ ಅನೇಕ ಸಂದರ್ಭಗಳಲ್ಲಿ ದೋಣಿಯನ್ನು ತುಂಬುತ್ತಾರೆ. ಕೆಲ ವಿಶೇಷ ಸಂದರ್ಭಗಳಲ್ಲಿ ಭಕ್ತರು ತಮ್ಮ ಮನೆಗಳಲ್ಲಿ ದೋಣಿ ತುಂಬಿಸುವ ಕಾರ್ಯಕ್ರಮ ಇಟ್ಟುಕೊಳ್ಳಬಹುದು. ಇದನ್ನು ಸಾಂಕೇತಿಕವಾಗಿ ಸೂಸಲು ಮೀಸಲುಮಾಡುವುದು ಎನ್ನುವರು.

ದೋಣಿ ತುಂಬಿಸಲು ಕನಿಷ್ಟ ಎರಡಾದರೂ ದೋಣಿಗಳಿರುವುದು ಆವಶ್ಯಕ. ಹೆಚ್ಚಾಗಿ ಐದು ದೋಣಿಗಳನ್ನು ತುಂಬಿಸುವುದು ವಾಡಿಕೆ. ಉಳ್ಳವರು ೧೦೦, ೨೫೦, ೫೦೧, ೧೦೦೧ ದೋಣಿ ತುಂಬಿಸುವುದೂ ಉಂಟು. ದೋಣಿ ತುಂಬಿಸುವ ಕಾರ್ಯಕ್ರಮಕ್ಕೆ ದೋಣಿಗಳನ್ನು ತೊಳೆದು ಸ್ವಚ್ಛಗೊಳಿಸಿ ಕಂಬಳಿಯ ಮೇಲೆ ಸಾಲಾಗಿ ಇಡುವರು. ಇವುಗಳ ಜೊತೆಗೆ ದೇವರ ಸಂಕೇತಗಳಾದ ತ್ರಿಶೂಲ, ಡಮರು, ಭಂಡಾರ ಬಕ್ಸ ಮೊದಲಾದವನ್ನು ಸಹ ಇಡುವರು. ಬಳಿಕ ದೋಣಿಗಳನ್ನು ಭಂಡಾರ, ಕುಂಕುಮ, ವಿಭೂತಿ, ಹೂಗಳನ್ನು ಏರಿಸಿ ಪೂಜಿಸುವರು. ಪೂಜೆಗೆ ಹೊನ್ನವರೆ ಹೂ, ಬಿಲ್ವದಳವನ್ನು ಸಹ ಬಳಸುವರು. ಬಳಿಕ ದೋಣಿಗಳನ್ನು ಕಂಬಳಿಯ ಮೇಲೆ ಸಾಲಾಗಿ ಪ್ರತಿಷ್ಠಾಪಿಸಿ ಪ್ರತಿಯೊಂದರ ಮುಂದೆ ಎಲೆ, ಅಡಿಕೆ, ಬಾಳೆಹಣ್ಣು, ಕೊಬ್ಬರಿಚೂರು, ಅರಿಷಿಣ ಕೊಂಬು ಹಾಗೂ ಸಾಧ್ಯವಿರುವಷ್ಟು ಹಣವನ್ನು ದಕ್ಷಿಣೆಯಾಗಿ ಇಡುವರು.. (ಚಿತ್ರ – ೧೩)

ದೋಣಿ ತುಂಬಿಸುವಾಗ ಮೊದಲು ಮೈಲಾರಲಿಂಗನಿಗೆ ಅತಿಪ್ರಿಯವಾದ ಹಣ್ಣುಪ್ಪ(ಬಾಳೆಹಣ್ಣು, ತುಪ್ಪ, ಸಕ್ಕರೆ ಅಥವಾ ಬೆಲ್ಲದ ಮಿಶ್ರಣ)ವನ್ನು ನೀಡುತ್ತಾರೆ. ಬಳಿಕ ಮನೆಯಲ್ಲಿ ಮಾಡಿದ ಆಹಾರ ಪದಾರ್ಥಗಳನ್ನೆಲ್ಲ ಒಂದೊಂದಾಗಿ ತಂದು ಬಡಿಸುತ್ತಾರೆ. ಹೆಚ್ಚಾಗಿ ದೋಣಿ ತುಂಬುವಾಗ ಹೂರಣದ ಅಡಿಗೆಯನ್ನು ಮಾಡಿರುತ್ತಾರೆ.

ಜೊತೆಗೆ ಅಂಬಲಿಯನ್ನು ಬಡಿಸುತ್ತಾರೆ. ಆದರೆ ದೋಣಿಗೆ ಮಾಂಸಾಹಾರ ನೀಡುವುದು ನಿಷಿದ್ಧ. ದೋಣಿ ತುಂಬಿಸುವ ಕಾರ್ಯಕ್ರಮವಿರುವಾಗ ಕುದುರೆ ಕುಣಿತ, ಶಸ್ತ್ರಪವಾಡ, ಹಾಡುಹೇಳುವುದು ಹಾಗೂ ಕಾಯಿಕೋಲು ದೀವಟಿಗೆ ಬೆಳಗುವುದು ಹೀಗೆ ವಿವಿಧ ಕಾರ್ಯಕ್ರಮಗಳನ್ನು ಇಟ್ಟುಕೊಳ್ಳಬಹುದು. ಕೆಲವು ಬಾರಿ ಶಸ್ತ್ರಪವಾಡ ಸಹ ನಡೆಯುವುದು. ಈ ರೀತಿಯ ಕಾರ್ಯಕ್ರಮಗಳಿದ್ದರೆ ಇವು ಮುಗಿದ ಬಳಿಕ ಆರತಿ ಮಾಡುವರು. ನಂತರ ಜೋಡಿ ತೆಂಗಿನಕಾಯಿಗಳನ್ನು ಒಡೆದು ಗೊರವರ ಜೊತೆ ಸೇರಿ ಎಲ್ಲರೂ ಉಗ್ಗಡಿಸುತ್ತಾರೆ. ಗೊರವರು ದೋಣಿಯಿಂದ ಸ್ವಲ್ಪ ಭಾಗವನ್ನು ತೆಗೆದು ಪ್ರಸಾದದ ರೂಪದಲ್ಲಿ ಮನೆಯವರಿಗೆ ಕೊಟ್ಟು, ಬಳಿಕ ಅದೇ ದೋಣಿಯಲ್ಲಿ ಊಟ ಮಾಡುತ್ತಾರೆ. ಗೊರವರು ದೋಣಿಯಲ್ಲಿ ನೀಡಿದ್ದನ್ನೆಲ್ಲ ಊಟ ಮಾಡಲೇ ಬೇಕು, ಅದನ್ನು ಚೆಲ್ಲಕೂಡದು ಅಥವಾ ವ್ಯರ್ಥಮಾಡಬಾರದು ಎಂಬ ನಿಯಮವಿದೆ. ಊಟ ಮುಗಿದಾದ ಬಳಿಕ ಅಲ್ಲಿಂದ ಹೋಗುವಾಗ ಭಕ್ತರಿಗೆ ಮೈಲಾರಲಿಂಗನ ಹೆಸರಿನಲ್ಲಿ ಹರಸಿ ಭಂಡಾರವಿಟ್ಟು ಹೋಗುತ್ತಾರೆ.

ಒಂದು ವೇಳೆ ದೋಣಿ ತುಂಬಿಸುವ ಕಾರ್ಯಕ್ರಮಕ್ಕೆ ಗೊರವ ಗೊರವಿಯರು ಸಿಗದಿದ್ದಲ್ಲಿ ಹಸಿರು ದೋಣಿ ತುಂಬುವುದು ವಾಡಿಕೆ. (ಹಸಿರು ದೋಣಿ ಎಂದರೆ ಮನೆಯಲ್ಲಿ ಮಾಡಿದ ಎಲ್ಲ ಪದಾರ್ಥಗಳನ್ನು ಬಾಳೆಯ ಎಲೆಯೊಂದರಲ್ಲಿ ಬಡಿಸಿಡಿವುದು.) ದೋಣಿಗೆ ಮಾಡಿದಂತೆಯೇ ಆರತಿ ಮಾಡಿ, ಕಾಯಿ ಒಡೆದು, ಏಳು ಕೋಟಿ, ಏಳು ಕೋಟಿ ಚಾಂಗಬಲೋ ಎಂದು ಹೇಳಿ ಬಾಳೆಯೆಲೆಗೆ ನಮಸ್ಕಾರ ಮಾಡುತ್ತಾರೆ. ಬಳಿಕ ಅದನ್ನು ನಾಯಿಗೆ ತಿನ್ನಿಸುತ್ತಾರೆ.

**ಆ. ಹೆಗ್ಗಪ್ಪನನ್ನು ಕಳಿಸುವುದು :**

ಹೆಗ್ಗಪ್ಪ ಅಥವಾ ಹೆಗ್ಗಡೆಯನ್ನು ಕಳಿಸುವ ಕಾರ್ಯಕ್ರಮಕ್ಕೆ ಹೆಗ್ಗಪ್ಪನನ್ನು ಕಳಿಸುವುದು ಎನ್ನುತ್ತಾರೆ. ಮಣಿಕಾಸುರ ಮಲ್ಲಾಸುರರ ವಧೆಗೆ ಶಿವನು ಮೈಲಾರನಾಗಿ ಬಂದಾಗ ವಿಷ್ಣುವು ಹೆಗ್ಗಡೆಯಾಗಿ ಸೇನೆಯನ್ನು ಮುನ್ನಡೆಸಿದನೆಂದು ಪುರಾಣಗಳಲ್ಲಿ ಬಂದಿದೆ. ಹೀಗಾಗಿ ಹೆಗ್ಗಪ್ಪನನ್ನು ಮೈಲಾರದ ಕ್ಷೇತ್ರಪಾಲಕ ದೇವತೆ ಎಂದು ಕರೆಯುವರು. ಜಾತ್ರೆ,

ಕಾರಣಿಕ, ಹರಕೆ ಮೊದಲಾದ ಕಾರ್ಯಕ್ರಮಗಳಿಗೆ ಮೈಲಾರಕ್ಕೆ ಬಂದ ಭಕ್ತರು ಮರಳಿ ತಮ್ಮೂರಿಗೆ ಹೋಗುವಾಗ ಅವರ ರಕ್ಷಣೆಗಾಗಿ ಹೆಗ್ಗಪ್ಪ ಅವರ ಜೊತೆಗೆ ಇರುತ್ತಾನೆ ಎಂಬ ವಿಶ್ವಾಸ ಭಕ್ತರದು. ಆದ್ದರಿಂದ ಅವರು ಸುರಕ್ಷಿತವಾಗಿ ತಮ್ಮ ಸ್ವಸ್ಥಾನಗಳಿಗೆ ಹಿಂತಿರುಗಿದ ಮೇಲೆ ತಮ್ಮ ರಕ್ಷಣೆಗಾಗಿ ಬಂದ ಹೆಗ್ಗಪ್ಪನನ್ನು ಪೂಜಿಸಿ ಕಳಿಸುವುದು ತಮ್ಮ ಕರ್ತವ್ಯವೆಂದು ಭಾವಿಸಿ, ಹೆಗ್ಗಪ್ಪನನ್ನು ಕಳಿಸಲು ಮನೆಯ ಮಟ್ಟಿಗೆ ಒಂದು ಸಣ್ಣ ಕಾರ್ಯಕ್ರಮವನ್ನು ಏರ್ಪಡಿಸುವರು.

ಹೆಗ್ಗಪ್ಪನನ್ನು ಕಳಿಸಲು ಏರ್ಪಡಿಸಿದ ಕಾರ್ಯಕ್ರಮಕ್ಕೆ ಒಬ್ಬಿಬ್ಬರು ಗೊರವರನ್ನು ಕರೆಸುವರು. ಜಾತ್ರೆಯಿಂದ ತಂದ ತೆಂಗಿನಕಾಯಿ ಪ್ರಸಾದ, ಹಣ್ಣು, ಭಂಡಾರ, ಕುಂಕುಮ, ಫರಾಳ[33]ಗಳನ್ನು ದೇವರ ಜಗುಲಿಯ ಮೇಲೆ ಇಡುವರು. ಗೊರವರ ಸಾಮಾನುಗಳಾದ ದೋಣಿ, ತ್ರಿಶೂಲ, ದೀವಟಿಗೆ, ಗೊರವಿಯರಿದ್ದರೆ ಚವುರ ಮೊದಲಾದವನ್ನು ಸಹ ದೇವರ ಜಗುಲಿಯ ಮೇಲೆ ಪೂಜೆಗೆ ಇಡುವರು. ತಮ್ಮ ಶಕ್ತಿಗೆ ಅನುಸಾರವಾಗಿ ಮನೆಯಲ್ಲಿ ಸಿಹಿ ಪದಾರ್ಥಗಳನ್ನು ಮಾಡಿ ಗೊರವರ ದೋಣಿ ತುಂಬಿಸುವರು. ಕಾಯಿಕೋಲು, ದೀವಟಿಗೆಗಳನ್ನು ಹೊತ್ತಿಸಿ ದೇವರಿಗೆ ಬೆಳಗುವರು. ಬಳಿಕ ಕಾಯಿ ಒಡೆದು ಏಳು ಕೋಟಿ, ಏಳು ಕೋಟಿ ಚಾಂಗಬಲೋ ಎಂದು ಹೇಳುವರು. ಈ ಸಮಯದಲ್ಲಿ ಗೊರವರು ತಮ್ಮ ಡಮರುಗಳನ್ನು, ಗಂಟೆಗಳನ್ನು ಬಾರಿಸುವರು. ಬಳಿಕ ಎಲ್ಲರೂ ತಮ್ಮ ಕೈಯ್ಯಲ್ಲಿರುವ ದೀವಟಿಗೆಗಳನ್ನು ಮೈಲಾರದ ದಿಕ್ಕಿಗೆ ಬೆಳಗುವರು. ಆನಂತರ ದೀವಟಿಗೆಗಳನ್ನು ದೇವರ ಜಗುಲಿಯ ಮೇಲೆ ಇಟ್ಟು, ಜಾತ್ರೆಯಿಂದ ತಂದ ವಸ್ತುಗಳನ್ನು ಎಲ್ಲರಿಗೂ ಹಂಚುವರು. ಮೊದಲು ಗೊರವರ ಊಟವಾಗುವುದು, ಬಳಿಕ ಎಲ್ಲರೂ ಊಟ ಮಾಡುವರು. ಆಮೇಲೆ ಗೊರವನಿಗೆ ತಮ್ಮ ಶಕ್ತಿ ಇರುವಷ್ಟು ಹಣವನ್ನು ದಕ್ಷಿಣೆಯ ರೂಪದಲ್ಲಿ ನೀಡುವರು. ಇಲ್ಲಿಗೆ ಹೆಗ್ಗಪ್ಪನನ್ನು ಕಳಿಸುವ ಕಾರ್ಯ ಮುಗಿದಂತಾಗುವುದು.

ಇದೇ ರೀತಿಯ ಸಂಪ್ರದಾಯವನ್ನು ಇತರ ಭಕ್ತವರ್ಗಗಳಲ್ಲಿಯೂ ನೋಡಬಹುದು. ಬದರಿಯಾತ್ರೆಗೆ ಹೋಗಿ ಬಂದವರು ಬದರಿಯ ಸಮಾರಾಧನೆ ಮಾಡಿದರೆ ಮಾತ್ರ ಯಾತ್ರೆಯ ಫಲ ದೊರೆಯುವುದಂತೆ. ಬಹುಶಃ ಹೆಗ್ಗಪ್ಪನನ್ನು ಕಳಿಸುವ ಕಾರ್ಯಕ್ರಮದ ಹಿಂದೆಯೂ ಇದೇ ರೀತಿಯ ಯಾವುದೋ ಉದ್ದೇಶವಿರಲಿಕ್ಕೂ ಸಾಕು.

## ೯. ವಿವಾಹ ಹಾಗೂ ಇತರೇ ಸಂದರ್ಭಗಳಲ್ಲಿನ ಆಚರಣೆಗಳು

ಮೈಲಾರನ ಒಕ್ಕಲಿರುವ ಮನೆಗಳಲ್ಲಿ ಮನೆದೇವರು ಯಾವುದೇ ಆಗಿದ್ದರೂ ಮೈಲಾರನಿಗೆ ಅಲ್ಲೊಂದು ವಿಶಿಷ್ಟ ಸ್ಥಾನವಿರುತ್ತದೆ. ಮೈಲಾರನ ಭಕ್ತರೆಲ್ಲ ತಮ್ಮ ಮನೆಯಲ್ಲಿ ದೇವರು ಕುದುರೆ ಏರಿದ ಮೂರ್ತಿಯನ್ನು ಇಟ್ಟುಕೊಂಡೇ ಇರುತ್ತಾರೆ. ಹಾಗೆಯೇ ತಮ್ಮ ಮನೆಯ ಸಂಪ್ರದಾಯದಂತೆ ದೀವಟಿಗೆ, ಕಾಯಿಕೋಲುಗಳನ್ನು ಇಟ್ಟಿರುವುದು ವಾಡಿಕೆ. ಅವರವರ ಮನೆಯ ಕ್ರಮದಂತೆ ಮೂರು, ಐದು, ಏಳು ದೀವಟಿಗೆಗಳನ್ನು ಇಡುವ ಕ್ರಮವಿದೆ.

ಭಕ್ತರ ಮನೆಗಳಲ್ಲಿ ಮದುವೆಯ ಸಂದರ್ಭಗಳಲ್ಲಿ, ಮುಂಜಿಗಳಲ್ಲಿ, ಗೃಹಪ್ರವೇಶಗಳಲ್ಲಿ ಹೀಗೆ ಪ್ರಮುಖ ಸಂದರ್ಭಗಳಲ್ಲಿ ಅಥವಾ ಹರಕೆ ಕೈಗೂಡದಿದ್ದರೆ ಹರಕೆಯ ಪೂರೈಕೆಗಾಗಿ ಮೈಲಾರನನ್ನು ಹೊರಡಿಸುವುದು, ಗಂಗಿ ತುಂಬಿಸುವುದು, ಗಂಗಿ ಪೂಜೆ, ಚಿಕ್ಕಯ್ಯ–ದೊಡ್ಡಯ್ಯ, ಚಿಕ್ಕಯ್ಯ ಜುಂಜಯ್ಯರ ಪೂಜೆ ಹೀಗೆ ವಿವಿಧ ಹೆಸರುಗಳಲ್ಲಿ ವಿಶಿಷ್ಟ ಆಚರಣೆಗಳನ್ನು ಕೈಗೊಳ್ಳುತ್ತಾರೆ. ವಿಶೇಷವಾಗಿ ಬ್ರಾಹ್ಮಣರಾಗಿದ್ದರೆ ಹೆಣ್ಣು ಮಗಳ ಮದುವೆಗೂ ಪೂರ್ವದಲ್ಲಿ, ಗಂಡು ಮಗನ ಮದುವೆಯ ನಂತರದಲ್ಲಿ ಈ ಆಚರಣೆ ನಡೆಯುತ್ತದೆ.[34]

ಮದುವೆಯ ಮನೆಯ ಸಿಂಗಾರದ ಜೊತೆ ಬಟ್ಟೆಬರೆಗಳನ್ನು ಒಗೆದು ಮಡಿಮಾಡುತ್ತಾರೆ ಮನೆಯಲ್ಲಿನ ಪೂಜಾಸಾಮಗ್ರಿಗಳಾದ ದೀವಟಿಗೆ, ಕಾಯಿಕೋಲು, ದೋಣಿ, ದೇವರ ಕುದುರೆ, ಶಿವಲಿಂಗ ಹೀಗೆ ಮೈಲಾರನಿಗೆ ಸಂಬಂಧಿಸಿದ ವಸ್ತುಗಳನ್ನು ಶುದ್ಧಗೊಳಿಸಿ ಪೂಜೆಗೆ ಅಣಿಗೊಳಿಸುವರು. ಸಮಾರಂಭದ ಹಿಂದಿನ ದಿನವೇ ಗೊರವರಿಗೆ ಆಮಂತ್ರಣ ನೀಡಿ ಬಂದಿರುತ್ತಾರೆ. ಗೊರವರು (ಸಾಮಾನ್ಯವಾಗಿ ಐದು ಜನ) ತಮ್ಮ ವಸ್ತುಗಳಾದ ಗಂಟೆ, ದೋಣಿ, ಭಂಡಾರದ ಬಕ್ಸ, ತ್ರಿಶೂಲ ಮೊದಲಾದವನ್ನು ಪೂಜೆಗೆ ಇಡುವರು. ಕರಿಯ ಕಂಬಳಿಯನ್ನು ಹಾಸಿ ಅದರ ಮೇಲೆ ಕುಳಿತುಕೊಂಡು ಮೈಲಾರನ ಮಹಿಮೆಯನ್ನು ಸಾರುವ ಹಾಡುಗಳನ್ನು ಹಾಡುವರು.

ಇದಲ್ಲದೇ ಊರಲ್ಲಿರುವ ಇತರ ಮೈಲಾರನ ಭಕ್ತರನ್ನು ಸಹ ಭಂಡಾರ ಕೊಟ್ಟು ಆಹ್ವಾನಿಸಿರುತ್ತಾರೆ. ಅವರೂ ಸಹ ತಮ್ಮ ಮನೆಯಲ್ಲಿನ ದೀವಟಿಗೆ ಹಾಗೂ ಕಾಯಿಕೋಲು, ದೋಣಿ ಮೊದಲಾದವನ್ನು ಪೂಜೆಗೆ ತಂದು ಇಡುವರು.

ಪೂಜೆಯ ಮೊದಲ ಹಂತವಾಗಿ ದೀವಟಿಗೆಗಳ ಸಿದ್ಧತೆಯನ್ನು ಮಾಡಿಕೊಳ್ಳುತ್ತಾರೆ. ತಲೆ ತಲಾಂತರದಿಂದ ಬಂದ ಹಿತ್ತಾಳೆಯ ಪೊದಿಕೆ ಹೊದಿಸಿದ ದೀವಟಿಗೆಗಳನ್ನು ತೊಳೆದು ಸಿದ್ಧಪಡಿಸಿದ ನಂತರ ಅದರ ಮೇಲ್ಭಾಗದಲ್ಲಿ ಬಟ್ಟೆಯನ್ನು ಸುತ್ತಿ ಸಾಕಷ್ಟು ಎಣ್ಣೆಯನ್ನು ಹೀರಿಕೊಳ್ಳಲು ಸಾಧ್ಯವಾಗುವಂತೆ ಸಿದ್ಧಗೊಳಿಸುತ್ತಾರೆ. ನಂತರ ಅವನ್ನು ಹೂವಿನ ಮಾಲೆಗಳಿಂದ ಅಲಂಕರಿಸಿ ಗೋಡೆಗೆ ಒರಗಿಸಿ ಇಡುತ್ತಾರೆ. (ಚಿತ್ರ – ೨೭) ಮನೆಯವರೆಲ್ಲ ಅಭ್ಯಂಜನ ಸ್ನಾನ ಮಾಡಿ ಶುಭ್ರ ವಸ್ತ್ರಧರಿಸಿ ಪೂಜಾದಿಗಳಿಗೆ ಸಿದ್ಧರಾಗುತ್ತಾರೆ. ಮನೆಯ ಯಜಮಾನನು ಕುದುರೆಯ ಮೇಲೆ ಕುಳಿತ ವೀರಪುರುಷನ ವಿಗ್ರಹವೊಂದನ್ನು ತಂದು ಇರಿಸುತ್ತಾರೆ. (ಚಿತ್ರ – ೨೫) ಈ ವೀರ ಪುರುಷನ ವಿಗ್ರಹದ ಅಕ್ಕಪಕ್ಕಗಳಲ್ಲಿ ದೀವಟಿಗೆಗಳನ್ನು ಇರಿಸುತ್ತಾರೆ. ಅದರ ಮುಂದೆ ಅಕ್ಕಿ, ಬೆಲ್ಲ, ತೆಂಗಿನ ಕಾಯಿ, ಹಣ್ಣು ಮೊದಲಾದವನ್ನು ಇಡುತ್ತಾರೆ. ಮೂರ್ತಿಗೆ ಹೂವಿನಿಂದ ಅಲಂಕಾರ ಮಾಡಿ ಪೂಜೆಗೆ ಅನುವು ಮಾಡಿಕೊಡುತ್ತಾರೆ. ಗೊರವಪ್ಪ ಎಲ್ಲರಿಗೂ ತನ್ನ ಕೈಯಾರೆ ಭಂಡಾರವನ್ನು ಹಚ್ಚಿ ದೇವರ ಮಹಿಮೆಯನ್ನು ಹಾಗೂ ಮೈಲಾರನ ಆವಿರ್ಭಾವವನ್ನು ಕುರಿತಾದ ಹಾಡನ್ನು ಹಾಡುತ್ತಾನೆ. ಮನೆಯವರೆಲ್ಲ ಶ್ರದ್ಧಾ ಭಕ್ತಿಗಳಿಂದ ಈ ಹಾಡನ್ನು ಕೇಳುತ್ತಾರೆ.

ಹಾಡು ಮುಗಿದ ನಂತರ ಮನೆಯ ಹೆಣ್ಣು ಮಗಳೊಬ್ಬಳು ನೀರು ತುಂಬಿದ ಬಿಂದಿಗೆಯೊಂದನ್ನು ಅಲಂಕರಿಸಿ ತಲೆಯ ಮೇಲೆ ಹೊತ್ತುಕೊಂಡು ಮುನ್ನಡೆಯುತ್ತಾಳೆ. ಅವಳನ್ನು ಅನುಸರಿಸಿ ಮನೆಯ ಗಂಡಸರು ತಮ್ಮ ಕೈಗಳಲ್ಲಿ ದೀವಟಿಗೆಗಳನ್ನು ಹಿಡಿದುಕೊಂಡು ಹೊರಗೆ ಬರುತ್ತಾರೆ. ಮನೆಯ ಯಜಮಾನನು ಮೈಲಾರನ ವಿಗ್ರಹವನ್ನು ತನ್ನ ಕೈಯ್ಯಲ್ಲಿ ಹಿಡಿದುಕೊಂಡು ಇವರನ್ನು ಹಿಂಬಾಲಿಸುತ್ತಾನೆ. (ಚಿತ್ರ – ೨೮) ಮನೆಯ ಹೊರಗಡೆ ಹಾಕಿದ ಹಂದರದ ಅಡಿಯಲ್ಲಿ ನಿಂತು ಎಲ್ಲರೂ ದೀವಟಿಗೆಗಳನ್ನು ಹೊತ್ತಿಸಿಕೊಳ್ಳುತ್ತಾರೆ. ಮನೆಯ ಪೈಕಿ ಒಬ್ಬರು ದೀವಟಿಗೆಗಳಿಗೆ ಎಣ್ಣೆಹಾಕಲು ಕಾಯಿಕೋಲು ಎಂಬ ಸಾಧನವನ್ನು ಹಿಡಿದುಕೊಳ್ಳುತ್ತಾರೆ. ನಂತರ ಎಲ್ಲರೂ ಗೊರವನ ಮಾರ್ಗದರ್ಶನದಲ್ಲಿ ಏಳು ಕೋಟಿಗ್ಯೋ ಏಳು ಕೋಟ್ಯೆಗ್ಯೋ ಎಂದು ಹೇಳುತ್ತ ಊರ ಹೊರಗಿನ ಭಾವಿಯ ಬಳಿ ಹೊರಡುತ್ತಾರೆ. ಬಾಜಾ ಭಜಂತ್ರಿಗಳ ಸದ್ದಿನ ನಡುವೆ ಗೊರವನು ಮೈಲಾರನ ಹಾಡುಗಳನ್ನು ಹಾಡುತ್ತ ಇವರನ್ನು ಕರೆದೊಯ್ಯುತ್ತಾನೆ. ಎಲ್ಲರೂ ಸೇರಿ ಬಾವಿಯ ಬಳಿಗೆ ಬಂದು ಅಲ್ಲಿ ಗದ್ದುಗೆಮಾಡಿ[35] ಅದರ ಮೇಲೆ ಮೈಲಾರನನ್ನು ಇರಿಸುತ್ತಾರೆ.

ಪಕ್ಕದಲ್ಲಿಯೇ ಗಂಗೆಯನ್ನು (ನೀರು ತುಂಬಿದ ಬಿಂದಿಗೆ) ಇರಿಸುತ್ತಾರೆ. ಬಳಿಕ ಗೊರವನ ನೇತೃತ್ವದಲ್ಲಿ ಎಲ್ಲರೂ ಪೂಜೆ ಸಲ್ಲಿಸುತ್ತಾರೆ. ದೀವಟಿಗೆ ಹಿಡಿದವರು ತಮ್ಮ ದೀವಟಿಗೆಗಳನ್ನು ಸರಿಮಾಡಿಕೊಂಡು ದೇವರಿಗೆ ರಕ್ಷೆ ನೀಡುತ್ತಾರೆ. (ಚಿತ್ರ – ೨೯) ಇದನ್ನು 'ಗಂಗಿ ತರುವುದು' ಎನ್ನುತ್ತಾರೆ. ಇಲ್ಲಿಗೆ ಕಾರ್ಯಕ್ರಮದ ಒಂದು ಹಂತ ಮುಗಿಯುತ್ತದೆ.

ಇತ್ತ ಪೂಜಾ ಕಾರ್ಯಗಳು ನಡೆಯುತ್ತಿದ್ದಂತೆಯೆ, ನೈವೇದ್ಯಕ್ಕೆ ಅಡುಗೆಯ ತಯಾರಿಕೆ ನಡೆಯುತ್ತಿರುತ್ತದೆ. ವಿಶೇಷವಾಗಿ ಮೈಲಾರನ ನೈವೇದ್ಯಕ್ಕೆ ಮೊಸರು ಅನ್ನದ ಬುತ್ತಿಯನ್ನು ಸಿದ್ಧಪಡಿಸುವರು. ಅನ್ನಕ್ಕೆ ಹಾಲು, ಮೊಸರುಗಳನ್ನು ಹಾಕಿ, ಅದರಲ್ಲಿ ಏಲಕ್ಕಿ, ಶುಂಠಿ, ಉಪ್ಪು, ಜಾಜಿಕಾಯಿ ಮೊದಲಾದವನ್ನು ಸೇರಿಸಿ ಚೆನ್ನಾಗಿ ಕಲೆಸಿ ಬುತ್ತಿ ತಯಾರಿಸುವರು. ಈ ಬುತ್ತಿಯನ್ನು ಹೊಸದಾಗಿ ತಂದ ಬಿದಿರಿನ ಬುಟ್ಟಿಯಲ್ಲಿ ಇರಿಸಿವರು. (ಬುಟ್ಟಿಯ ಮೇಲೆ ಮೊದಲೇ ಶಿಬಾರದ ಚಿತ್ರವನ್ನು ಬರೆದು ಬುಟ್ಟಿಯನ್ನು ಸಿದ್ಧವಾಗಿಟ್ಟಿರುತ್ತಾರೆ.) ಇದರ ಜೊತೆಗೆ ಕಡಲೇ ಬೇಳೆ ಹಾಗೂ ಅಕ್ಕಿಯನ್ನು ಸೇರಿಸಿ ಹಯಗ್ರೀವ[36] ಹಾಗೂ ಹೂರಣದಿಂದ ಮಾಡಿದ ಕಡುಬುಗಳನ್ನು ನೈವೇದ್ಯಕ್ಕೆ ಇಡುವರು. ಇದರ ಜೊತೆಗೆ ಹಿಂಡಿಪಲ್ಯ, ಬದನೆಕಾಯಿ ಭರತ ಅಥವಾ ಬಜ್ಜಿ, ಮಂಗರೊಳ್ಳಿಯ ಚಟ್ನಿ[37]ಯನ್ನು ಸಹ ನೈವೇದ್ಯಕ್ಕೆ ಇಡುವರು. ಅಡುಗೆಯನ್ನು ಅತ್ಯಂತ ಮಡಿಹುಡಿಯಿಂದ ಸಿದ್ಧಪಡಿಸಿದ ನಂತರ ನೈವೇದ್ಯಕ್ಕೆ ಎಲ್ಲ ಅಡಿಗೆಯನ್ನು ದೇವರ ಮುಂದೆ ತಂದು ಇಡುವರು.

ಇತ್ತ ಬಾವಿಯ ಕಡೆಯಿಂದ ಮತ್ತೆ ಮೆರವಣಿಗೆ ಸಾಗಿ ಮನೆಯ ಮುಂದಿನ ಚಪ್ಪರದ ಬಳಿ ಬರುತ್ತದೆ. ಅಲ್ಲಿ ಹೊರಸಿನ[38] ಮೇಲೆ ಕಂಬಳಿಯನ್ನು ಹಾಸಿ ಅದರ ಮೇಲೆ ಅಕ್ಕಿ, ಬೇಳೆ, ಬೆಲ್ಲ, ಹಿಟ್ಟು ಮೊದಲಾದ ಪದಾರ್ಥಗಳನ್ನು ಒಂದೊಂದು ಕೋನದಲ್ಲಿ ಹಾಗೂ ಹೊರಸಿನ ನಡುವೆ ಹಾಕುತ್ತಾರೆ. ನಂತರ ಅದರ ಮೇಲೆ ಭಂಡಾರವನ್ನು ಹಾಕಿ ಪೀಠವನ್ನು ಮಾಡುತ್ತಾರೆ. ಅದರ ಮೇಲೆ ಮೈಲಾರನ ಮೂರ್ತಿಯನ್ನು ಇಡುತ್ತಾರೆ. (ಚಿತ್ರ – ೩೦) ನಂತರ ದೀವಟಿಗೆ ಹಿಡಿದವರು ಹಾಗೂ ನವ ವಧೂವರರು ಗೊರವನನ್ನು ಅನುಸರಿಸಿ "ಏಳು ಕೋಟಿಗ್ಯೋ ಏಳು ಕೋಟಿಗ್ಯೋ......" ಎನ್ನುತ್ತ ಪ್ರದಕ್ಷಣೆ ಹಾಕುತ್ತಾರೆ. ನಂತರದಲ್ಲಿ ಗೊರವನು ಕಂಬಳಿಯ ಮೇಲೆ ಹಾಕಿದ ವಸ್ತುಗಳು ಹಾಗೂ ವಿಗ್ರಹದ ಸಮೇತ ಕಂಬಳಿಯನ್ನು ಗಂಟುಕಟ್ಟುತ್ತಾನೆ. ಅದನ್ನು ನೂತನ ಮದುವಣಿಗನ ತಲೆಯ

ಮೇಲೆ ಇಟ್ಟು ಪ್ರಮಾಣವಚನ ತೆಗೆದುಕೊಳ್ಳುತ್ತಾನೆ. ಅಲ್ಲಿನ ಒಂದೆರಡು ಮಾತುಗಳನ್ನು ನೋಡಬಹುದಾದರೆ.............

**ಗೊರವ :** ನೀವು ಮದುವೆಯಾದರೂ ನಿಮ್ಮ ತಂದೆ ತಾಯಿಗಳಿಗೆ ಮಗನೆಂಬುದನ್ನು ಮರೆಯದೇ ಅವರಿಗೆ ಗೌರವ ಕೊಡುವಿರಲ್ಲವೇ?

**ಮದುವಣಿಗ :** ಹೌದು.

**ಗೊರವ :** ಹೆಂಡತಿಯ ಮಾತು ಕೇಳಿ ಮನೆಯ ಹಿರಿಯರಿಗೆ ಎದುರಾಡಬಾರದು.

**ಮದುವಣಿಗ :** ಆಯ್ತು.

ಹೀಗೆಯೇ ಹತ್ತಾರು ಕರಾರುಗಳನ್ನು ಹಾಕಿದ ನಂತರ ಮದುವಣಗಿತ್ತಿಯಿಂದಲೂ ನಾಲ್ಕಾರು ವಚನತೆಗೆದುಕೊಳ್ಳುತ್ತಾನೆ. ನಂತರ ಮದುವಣಿಗ ಆ ಗಂಟನ್ನು ಹೊತ್ತುಕೊಂಡು ತನ್ನ ನೂತನ ಪತ್ನಿಯೊಂದಿಗೆ ಮನೆಯನ್ನು ಪ್ರವೇಶಿಸುತ್ತಾನೆ. ಅಲ್ಲಿ ವಿಗ್ರಹದೊಂದಿಗಿರುವ ಕಂಬಳಿಯನ್ನು ದೇವರ ಕಟ್ಟೆಯ ಮೇಲೆ ಇಟ್ಟು ದೇವರಿಗೆ, ತಂದೆ ತಾಯಿಗಳಿಗೆ ಹಾಗೂ ಗುರುಹಿರಿಯರಿಗೆ ನಮಸ್ಕರಿಸುತ್ತಾನೆ.

ನಂತರ ದೇವರ ನೈವೇದ್ಯಕ್ಕೆ ತಂದು ಇಟ್ಟ ನೈವೇದ್ಯವನ್ನು ದೇವರಿಗೆ ಅರ್ಪಿಸುವ ಕಾರ್ಯಕ್ರಮವಿರುತ್ತದೆ. ದೇವರಿಗೆ ಮಂಗಳಾರತಿಮಾಡಿ ಕಾಯಿಕೋಲು ದೀವಟಿಗೆ ಬೆಳಗಿ ಜೋಡಿಕಾಯಿಗಳನ್ನು ಒಡೆಯುವರು. ಎಲ್ಲರೂ ದೇವರಿಗೆ ನಮಸ್ಕಾರ ಮಾಡುವರು. ಆಮೇಲೆ ದೇವರನ್ನು ಇಟ್ಟ ಕೋಣೆಯ ಕಿಟಕಿ, ಬಾಗಿಲುಗಳನ್ನು ಸಂಪೂರ್ಣವಾಗಿ ಮುಚ್ಚಿ ಬಿಡುತ್ತಾರೆ. ಸುಮಾರು ಹತ್ತು ನಿಮಿಷಗಳ ಕಾಲ ಸಂಪೂರ್ಣ ಮೌನವಾಗಿರುತ್ತಾರೆ. ನಂತರ ಬಾಗಿಲು ತೆಗೆದು ಒಳಗೆ ಹೋಗಿ ನೋಡಿದರೆ ಬಿದಿರಿನ ಬುಟ್ಟಿಯಲ್ಲಿರುವ ಬುತ್ತಿಯ ಮೇಲೆ ಹಾಗೂ ಇತರ ಪದಾರ್ಥಗಳ ಮೇಲೆ ಕೈ ಊರಿದಂತೆ, ಅಥವಾ ಕುದುರೆಯ ಹೆಜ್ಜೆ ಮೂಡಿದಂತೆ ಗುರುತು[39] ಕಾಣುವುದು. ಈ ಗುರುತನ್ನು ಕಂಡು ದೇವರು ತಮ್ಮ ಸೇವೆಯನ್ನು ಒಪ್ಪಿಸಿಕೊಂಡನೆಂದು ಭಕ್ತರೆಲ್ಲ ಧನ್ಯತೆಯ ಭಾವ ತಾಳುವರು. ಆನಂತರದಲ್ಲಿ ಕರ್ಪೂರಾರತಿ ಮಾಡಿ, ಕಾಯಿ ಒಡೆದು ಗೊರವನ ದೋಣಿ ತುಂಬುವರು. ಒಂದು ವೇಳೆ ಗೊರವರು ಅಲ್ಲಿರದಿದ್ದರೆ ಹಸಿರೆಲೆ ದೋಣಿ ತುಂಬಿ ಅದನ್ನು ಪ್ರತ್ಯೇಕವಾಗಿರಿಸಿ ನಂತರ ಅದನ್ನು ಗೊರವರಿಗೆ ನೀಡುವರು.

ಮನೆಯವರ ಊಟಕ್ಕಿಂತ ಮುಂಚೆ ನೈವೇದ್ಯದ ಅಡಿಗೆಯ ಕೆಲಭಾಗವನ್ನು ಮಾರನೆಯ ದಿನದ ದೊಡ್ಡಯ್ಯನ ಪೂಜೆಗೆಂದು ತೆಗೆದಿಡುವರು. ಆಮೇಲೆ ಮನೆಯವರೆಲ್ಲ ಸೇರಿ ಊಟ ಮಾಡುವರು. ಪೂಜೆ ಮಾಡಿಸಿದ ಗೊರವಪ್ಪನಿಗೆ ನೀಡಿದ ಅಡುಗೆಯನ್ನು ಯಾವುದೇ ಕಾರಣಕ್ಕೂ ಹೊರಗೆ ಕೊಡುವುದಿಲ್ಲ. ಒಂದು ವೇಳೆ ಅದು ಹೆಚ್ಚಾಗಿ ಉಳಿದರೆ ಅದನ್ನು ಹಸುವಿಗೆ ತಿನ್ನಿಸುವರು.

ಮಾರನೆಯ ದಿನ ದೊಡ್ಡಯ್ಯನ ಪೂಜೆ. ಹಿಂದಿನ ದಿನ ತೆಗೆದಿಟ್ಟ ಬುತ್ತಿಯ ಜೊತೆಗೆ ಇನ್ನಿತರ ಪದಾರ್ಥಗಳನ್ನು ಸಿದ್ಧಪಡಿಸಿ ಅಪ್ತೇಷ್ಟರೆನ್ನೆಲ್ಲ ಕರೆಸಿ ಊಟಹಾಕುವರು. ಚಿಕ್ಕಯ್ಯನ ಪೂಜೆಗೆ ಬಂದವರೆಲ್ಲ ದೊಡ್ಡಯ್ಯನ ಪೂಜೆಗೆ ಬರಲೇಬೇಕು ಎಂಬ ನಿಯಮವಿದೆ. ಹೀಗಾಗಿ ಹಿಂದಿನ ದಿನ ಬಂದವರು ಕರೆಯದಿದ್ದರೂ ಈ ದಿನ ಬಂದು ಊಟಮಾಡಿ ಹೋಗುವುದು ವಾಡಿಕೆ.

ಬ್ರಾಹ್ಮಣರು ಹಾಗೂ ಇತರ ಸಸ್ಯಾಹಾರಿಗಳು ಮಾಡುವ ಆಚರಣೆ ಈ ರೀತಿಯದಾದರೆ, ಮಾಂಸಾಹಾರಿಗಳು ಮಾಡುವ ಆಚರಣೆಯ ವಿಧಾನಗಳೇ ಬೇರೆ. ನನಗೆ ದೊರೆಯದ ಈ ವಿವರಗಳನ್ನು ಡಾ. ಎಂ. ಬಿ. ನೇಗಿನಹಾಳರು ಹೀಗೆ ವಿವರಿಸಿದ್ದಾರೆ.[40]

ಮಾಂಸಾಹಾರಿಗಳಲ್ಲಿ ಚಿಕ್ಕಯ್ಯ ಜುಂಜಯ್ಯರ ಆರಾಧನೆ ವಿಭಿನ್ನವಾಗಿರುತ್ತದೆ. ಇವರು ನಿರ್ದಿಷ್ಟ ದಿನದಂದು ಮನೆಯನ್ನು ಸಾರಿಸಿ ಬಳಿದು ಮಡಿಮಾಡುತ್ತಾರೆ. ಆರಾಧನೆಯ ದಿನದಂದು ಬೆಳಗಿನ ಹೊತ್ತು ತಮ್ಮ ಮನೆಯಿಂದ ಎಲೆ, ಅಡಿಕೆ ಮತ್ತು ಭಂಡಾರಗಳನ್ನು ಒಯ್ದು ಗೊರವರಿಗೆ ಹಾಗೂ ಈ ವಸ್ತುಗಳ ಜೊತೆಗೆ ಒಳ್ಳೆಣ್ಣೆಯನ್ನು ಕೊಟ್ಟು ಆಹ್ವಾನ ನೀಡಿ ಬರುತ್ತಾರೆ. ಇದನ್ನು ಈಳೇವು (ವೀಳ್ಯ) ಕೊಡುವುದು ಎನ್ನುತ್ತಾರೆ. ಹೀಗೆ ಆಹ್ವಾನ ಪಡೆದ ಗೊರವ ಗೊರವಿಯರು ತಮ್ಮಲ್ಲಿರುವ ದೇವರ ಸಂಬಂಧಿಯಾದ ಕಾಯಿಕೋಲು, ದೀವಟಿಗೆ, ದೋಣಿ, ಗಂಟೆ, ತ್ರಿಶೂಲ, ಭಂಡಾರದ ಬಕ್ಸ ಮೊದಲಾದವನ್ನು ತೆಗೆದುಕೊಂಡು ಬರುತ್ತಾರೆ. ಮನೆಯವರು ಬಂದವರನ್ನು ಕಾಲಿಗೆ ನೀರುಕೊಟ್ಟು ಒಳಗೆ ಬರಮಾಡಿಕೊಂಡು ದೇವರ ಸಂಬಂಧಿ ವಸ್ತುಗಳನ್ನು ದೇವರ ಜಗುಲಿಯ ಮೇಲೆ ಇಡುತ್ತಾರೆ. ಅವುಗಳಿಗೆ ಎರಡು ಎಲೆ, ಅರಿಷಿಣಕೊಂಬು ಸೇರಿಸಿ ದಾರದಿಂದ ಕಟ್ಟುತ್ತಾರೆ. ಇದನ್ನು ಕಂಕಣ ಕಟ್ಟುವುದು ಎನ್ನುತ್ತರೆ. ಇದೇ ಸಮಯದಲ್ಲಿ ಬಂದ ಆಮಂತ್ರಿತರಿಗೆಲ್ಲ ಎರಡು ಎಲೆ, ಅಡಿಕೆ, ಬಾಳೆಯ ಹಣ್ಣು, ಅರಿಷಿಣದ ಬೇರು, ಉತ್ತತ್ತಿ, ಕೊಬ್ಬರಿಚೂರು, ಒಂದು

ಲಿಂಬಿಯ ಹಣ್ಣು, ವಾಲಿಜೋಡು (ಒಲೆಗರಿ ಅಥವಾ ತೆಂಗಿನ ಗರಿಯ ಸುರುಳಿ) ಹಾಗೂ ಐದು ಮುಷ್ಟಿ ಅಕ್ಕಿ ಹಾಕಿ ಉಡಿತುಂಬುತ್ತಾರೆ.

ಇತರ ಎಲ್ಲ ಸಿದ್ಧತೆಗಳಾದ ಮೇಲೆ ದೀವಟಿಗೆಗಳನ್ನು ಹಚ್ಚಿ ಬೆಳಕುಮಾಡಿ ದೇವರಿಗೆ ಬೆಳಗುತ್ತಾರೆ. ನಂತರ ಎಲ್ಲರೂ ಸೇರಿ ದೇವರನ್ನು ಉಗ್ಗಡಿಸುತ್ತಾರೆ. ಗೊರವರು ಗಂಟೆ, ಡಮರು ಬಾರಿಸುತ್ತ – "ಏಳುಕೋಟಿ ಏಳುಕೋಟಿ, ಚಾಂಗಬಲೋ, ಹರಹರಾ ಮೈಲಾರಲಿಂಗ, ಮಾರ್ತಾಂಡಾ" ಮೊದಲಾಗಿ ಘೋಷಣೆ ಕೂಗುತ್ತಾರೆ. ಬಳಿಕ ಮಂಗಳಾರತಿ ಮಾಡಿ ದೇವರಿಗೆ ಜೋಡುಕಾಯಿ ಒಡೆಯುತ್ತಾರೆ. ಇದಾದ ಬಳಿಕ ಬಂದವರಿಗೆಲ್ಲ ಫಲಾಹಾರ ನೀಡಲಾಗುತ್ತದೆ.

ಇನ್ನೊಂದು ಕಡೆ ಪೂಜೆಗೆಂದು ನಿಗದಿಕೊಂಡ ಗೊರವನು ಸ್ನಾನಮಾಡಿ ಒದ್ದೆ ಬಟ್ಟೆಯಿಂದಲೇ ಒಂದು ಕೊಡ ನೀರನ್ನು ತರುತ್ತಾನೆ. ಇವನು ಮನೆಯವರಿಂದ ಅಡುಗೆಯ ಪದಾರ್ಥಗಳನ್ನು ಪಡೆದು, ಪ್ರತ್ಯೇಕ ಒಲೆಗುಂಡು ಹೂಡಿ ಅದರ ಮೇಲೆ ಅಡಿಗೆಯನ್ನು ಸಿದ್ಧಪಡಿಸುತ್ತಾನೆ. ಈ ಅಡುಗೆಗೆ ಒಮ್ಮೆ ಹೊತ್ತಿಸಿದ ಉರಿ ಆರುವಂತಿಲ್ಲ. ಆದ್ದರಿಂದ ಅದು ಆರದಂತೆ ನೋಡಿಕೊಳ್ಳಲು ಸುಲಭವಾಗುವಂತೆ ಪುಂಡಿಯ ಕಟ್ಟಿಗೆಗಳನ್ನು ಬಳಸುವುದು ವಾಡಿಕೆ. ಈ ಪದಾರ್ಥಗಳ ಜೊತೆಗೆ ಕರಿಗೆಡಬು, ಕರಚೀಕಾಯಿ ಮೊದಲಾದ ಐದು ಬಗೆಯ ಸಿಹಿತಿಂಡಿಗಳು ಹಾಗೂ ಬದನೆಕಾಯಿ ಮೊದಲಾದ ಐದು ಬಗೆಯ ಕಾಯಿಪಲ್ಲೆಯನ್ನು ಸಿದ್ಧಪಡಿಸುತ್ತಾನೆ.

ಇತ್ತ ಪೂಜೆಗಾಗಿ ಇಬ್ಬರು ಸ್ನಾನಮಾಡಿ ಮಡಿಯಿಂದ ಎರಡು ಮಣ್ಣಿನ ಕೊಡಗಳನ್ನು ತುಂಬಿ ತಂದು ನಿರ್ದಿಷ್ಟ ಜಾಗದಲ್ಲಿ ಜೊತೆಯಾಗಿ ಸ್ಥಾಪಿಸುವರು. ಆ ಮಡಿಕೆಗಳನ್ನು ಪುರುಷರಂತೆ ಹೊಸಬಟ್ಟೆಗಳಿಂದ ಅಲಂಕರಿಸಿ, ದೋತರ, ಅಂಗಿ ತೊಡಿಸಿ ತಲೆಯ ಮೇಲೆ ಮುಂಡಾಸು ಸುತ್ತುವರು. ಕೊರಳಲ್ಲಿ ಆಭರಣಗಳನ್ನು ಹಾಕುವರು.[41]

ಈ ರೀತಿ ಚಿಕ್ಕಯ್ಯ ಜುಂಜಯ್ಯರ ಪ್ರತಿಷ್ಠಾಪನೆಯಾದ ಬಳಿಕ ಚಿಕ್ಕಯ್ಯನ ಬದಿಗೆ ಅಕ್ಕಿಯ ಹುಗ್ಗಿಯನ್ನು ರಾಶಿಹಾಕುವರು. ಅದರ ಮೇಲೆ ಒಂದು ಗಡಿಗೆ ಕೆನೆಮೊಸರು ಹೊಯ್ಯುವರು. ಇನ್ನೊಂದು ಬದಿಗೆ ಬಿಳಿಯನ್ನದ ರಾಶಿಹಾಕಿ ಅದರ ಮೇಲೆ ತುಪ್ಪ ಹಾಕುವರು. ಆಮೇಲೆ ಕರಿಗಡಬು, ಕರಚೀಕಾಯಿ, ಮೊದಲಾದ ಸಿಹಿ ಅಡಿಗೆಯನ್ನು

ಕರಿದ ಕಾಯಿಪಲ್ಲೆಗಳನ್ನು ಹೊಂದಿಸುವರು. (ಕೆಲವರು ಇವುಗಳ ಜೊತೆಗೆ ಹಸಿ ಈರುಳ್ಳಿಯನ್ನು ಇಡುವರು. ಇನ್ನೂ ಕೆಲವರು ಹುರುಳಿಯ ಗುಗ್ಗರಿ ನೀಡುವರು. ಕೆಲವೆಡೆ ಸಜ್ಜೆಯ ರೊಟ್ಟಿ ಬದನೆಕಾಯಿ ಭರತ ಅಥವಾ ಬಜ್ಜಿಯನ್ನು ಇಡುವರು) ಹೀಗೆ ತುಂಬಿದ ಆಹಾರ ಪದಾರ್ಥಗಳನ್ನು ದೋಣಿಗೆ ಹಾಕಿ, ಪ್ರತ್ಯೇಕವಾಗಿ ಕಾಣಿಕೆ, ವೀಳಯದೆಲೆ, ಅಡಿಕೆ, ಬಾಳೆಯಹಣ್ಣು ಮತ್ತು ಲಿಂಬೆಯಹಣ್ಣುಗಳನ್ನು ಇಟ್ಟು, ಭಂಡಾರ, ಕುಂಕುಮ, ವಿಭೂತಿ, ಹೂವು ಮೊದಲಾದವುಗಳಿಂದ ಪೂಜಿಸುವರು. ಬಳಿಕ ಎಲ್ಲ ದೇವರಿಗೆ ಹಾಗೂ ದೋಣಿಗಳಿಗೆ ಆರತಿ ಬೆಳಗಿ ಮಂಗಳಾರತಿ ಹಾಡು ಹೇಳಿ ಕಾಯಿ ಒಡೆಯುವರು. ಕೊನೆಗೆ ಮತ್ತೊಮ್ಮೆ ದೇವರನ್ನು ಉಗ್ಗಡಿಸುವರು.

ಆಮೇಲೆ ಬಂದವರೆಲ್ಲ ಊಟ ಮಾಡುವರು. ಮನೆಯವರು ಊಟ ಮಾಡುವಾಗ ಗೊರವಪ್ಪ ಗೊರವಮ್ಮರು ತಮ್ಮ ದೋಣಿಗಳಿಂದ ಸ್ವಲ್ಪ ಆಹಾರದ ವಸ್ತುಗಳನ್ನು ತೆಗೆದು ಪ್ರಸಾದವೆಂಬಂತೆ ನೀಡುವರು. ಆದರೆ ಈ ಸಂದರ್ಭದಲ್ಲಿ ದೀವಟಿಗೆ ಕಾಯುವ ಗೊವರಪ್ಪ ಮಾತ್ರ ಊಟ ಮಾಡುವಂತಿಲ್ಲ. ಮನೆಯವರೆಲ್ಲರ ಊಟವಾದ ಮೇಲೆ ಬೆಳಗಿನವರೆಗೆ ಹಾಡುಹೇಳುವ ಕಾರ್ಯಕ್ರಮವಿರುತ್ತದೆ. ಜೊತೆಯಲ್ಲಿಯೇ ಚಿಕ್ಕಯ್ಯ, ಜುಂಜಯ್ಯರಿಗೆ ಹೂವು, ಭಂಡಾರ, ಕುಂಕುಮಗಳಿಂದ ಪೂಜಿಸಿ ಆರತಿ ಎತ್ತುವ ನೇಮ ಬೆಳಗಿನವರೆಗೆ ನಡೆಯುತ್ತಿರುತ್ತದೆ. ಇದು ಐದು ಸಲ, ಹನ್ನೊಂದು ಸಲ – ಹೀಗೆ ಅವರು ಹರಸಿಕೊಂಡಷ್ಟು ಸಲ ಈ ಆರತಿ ಎತ್ತುವ ಕಾರ್ಯಕ್ರಮ ನಡೆಯುತ್ತದೆ.

ಮೊದಲ ಹಂತದ ಪೂಜೆಮುಗಿಯುತ್ತಿದ್ದಂತೆ ಮನೆಯಲ್ಲಿ ಬಲಿಗಾಗಿ ಜೋಡು ಕುರಿಗಳನ್ನು ಸಿದ್ಧವಾಗಿರಿಸಲಾಗುತ್ತದೆ. ಮನೆಯ ಒಳಭಾಗದಲ್ಲಿ, ಚಿಕ್ಕಯ್ಯ ಜುಂಜಯ್ಯರ ಸ್ಥಾನದಿಂದ ಕನಿಷ್ಟ ಐದು ಮೊಳ ದೂರದಲ್ಲಿ ಗುಂಡಿಯೊಂದನ್ನು ತೋಡುವರು. ಇದನ್ನು ಭೂತಾಳಗುಂಡಿ ಎನ್ನುವರು. ಕೆಲವರು ಭೂತಾಳ ಗುಂಡಿಯನ್ನು ದನದ ಕೊಟ್ಟಿಗೆಯಲ್ಲಿಯೇ ತೋಡುವರು. (ಇದನ್ನು ಮನೆಯ ಒಳಭಾಗದಲ್ಲಿ ತೋಡುವುದು ಮುಖ್ಯ) ಬಲಿ ಕೊಡುವ ಮೊದಲು ಒಮ್ಮೆ ಪೂಜೆ, ಮಂಗಳಾರತಿಯಾಗಿ ಕರ್ಪೂರ ಬೆಳಗಿ ಕಾಯಿ ಒಡೆಯುವರು. ಆ ಬಳಿಕ ದೇವರ ಸುತ್ತ ಮೊದಲೇ ಸಿದ್ಧ ಪಡಿಸಿಕೊಂಡಿರುವ ಪರದೆಯನ್ನು ಇಳಿಬಿಡುವರು. ದೀಪಕಾಯುವ ಗೊವರಪ್ಪ ಮಾತ್ರ ಈ ಪರದೆಯ ಒಳಗಡೆಯೇ ಇರಬೇಕು.

ಬೆಳಗಿನ ಜಾವದಲ್ಲಿ ಭೂತಾಳಗುಂಡಿಯಲ್ಲಿ ಜೋಡು ಕುರಿಗಳ ಬಲಿ ನಡೆಯುವುದು. ಕುರಿಗಳ ಬಲಿಯಾದ ಬಳಿಕ ಮನೆಯಿಂದ ಯಾರೂ ಹೊರಗೆ ಹೋಗುವಂತಿಲ್ಲ ಹಾಗೂ ಯಾವ ವಸ್ತುವನ್ನೂ ಹೊರಗೆ ಕೊಡುವಂತಿಲ್ಲ. ಒಳಗಿನದು ಒಳಗೇ ಇರಬೇಕು; ಹೊರಗಿನದು ಹೊರಗೇ ಇರಬೇಕು. ಆ ನಂತರದಲ್ಲಿ ಮಾಂಸದ ನೈವೇದ್ಯ ಸಿದ್ಧಪಡಿಸಿ ಅದನ್ನು ದೂರದಿಂದಲೇ ದೇವರಿಗೆ ಎಡೆ ಮಾಡುವರು. ಇಷ್ಟರಲ್ಲಿ ಬೆಳಗಿನ ಜಾವವಾಗಿರುತ್ತದೆ. ಎಲ್ಲರೂ ಸೇರಿ ಊಟಮಾಡುವರು.

ಅಂದು ಸಂಜೆಯವರೆಗೆ ಪೂಜೆ, ಮಂಗಳಾರತಿಗಳು ಆಗುತ್ತಲೇ ಇರುತ್ತವೆ. ಸಂಜೆ ಮತ್ತೆ ಎರಡನೆಯ ಬಲಿಯ ಅಡಿಗೆಯನ್ನು ಎಲ್ಲರೂ ಸೇರಿ ಊಟಮಾಡುವರು. ಬಳಿಕ ಮುಸುರೆ, ಕಸ, ಉಳಿದ ಅಡಿಗೆ ಏನಿದ್ದರೂ ಅದನ್ನೆಲ್ಲವನ್ನೂ ಭೂತಾಳಗುಂಡಿಗೆ ಸೇರಿಸಿ ಮುಚ್ಚಿಬಿಡುವರು. ಏನೇ ಉಳಿದಿದ್ದರೂ ಅದನ್ನು ಹೊರಗೆ ಚೆಲ್ಲುವಂತಿಲ್ಲ. ಅಂದಿನ ರಾತ್ರಿ ಸಹ ಜಾಗರಣೆಮಾಡಿ ದೇವರ ಪೂಜೆಮಾಡುತ್ತ ಕಾಲಕಳೆಯುವರು.

ಮರುದಿನ ಬೆಳಗಿನ ಜಾವ ಮನೆಯನ್ನೆಲ್ಲ ಪುನಃ ಸಾರಿಸಿ, ಬಳಿದು ಮಡಿಮಾಡಿ ಎಲ್ಲರೂ ಸ್ನಾನ ಮಾಡಿ ಬರುವುರು. ಕೆಲವು ಬಾರಿ ಈ ಎಲ್ಲ ಕಾರ್ಯಕ್ರಮಗಳನ್ನು ಒಂದೇ ರಾತ್ರಿಯಲ್ಲಿ ಮಾಡಿ ಮುಗಿಸುವುದೂ ಉಂಟು.

**ಈ. ಗೊರವಟಿಗೆಯಾಡುವುದು :**

ಮನೆಯ ಶುದ್ಧಿ ಹಾಗೂ ಎಲ್ಲರ ಸ್ನಾನದ ಬಳಿಕ ಕಾಯಿಕೋಲು, ದೀವಟಿಗೆ, ಗಂಟೆ, ಭಂಡಾರ ಬಕ್ಸ, ತ್ರಿಶೂಲ, ದೋಣಿ ಮೊದಲಾದ ದೇವರಿಗ ಸಂಬಂಧಿಸಿದ ವಸ್ತುಗಳನ್ನು ಸಜ್ಜುಗೊಳಿಸಿಕೊಂಡು ದೇವರನ್ನು ಹೊರಡಿಸುವರು. ಇವುಗಳಲ್ಲಿ ಮೈಲಾರಲಿಂಗ – ಗಂಗಿಮಾಳಮ್ಮರ ಮೂರ್ತಿ ಅಥವಾ ಅಚ್ಚೊಂದು ಇರುತ್ತದೆ. ಮೊದಲು ಕಾಯಿಕೋಲು ದೀವಟಿಗೆಯನ್ನು ಹೊತ್ತಿಸಿ ಎಲ್ಲರೂ ಉಗ್ಗಡಿಸುತ್ತ ಮನೆಯ ಹೊರಗೆ ಬರುವರು. ಅಲ್ಲಿ ಮೊದಲನೆಯದಾಗಿ ಜಾಡಿ ಹಾಸುವ ಕಾರ್ಯಕ್ರಮವಿರುತ್ತದೆ. ಜಾಡಿ ಹಾಸುವುದು ಎಂದರೆ ಕಂಬಳಿಯ ಗದ್ದುಗೆ ಹಾಸಿ ಅದರ ಮೇಲೆ ಗೊರವರು ಮತ್ತು ಇತರ ಭಕ್ತರು ತಂದ ದೇವರ ಸಂಬಂಧಿಯಾದ ವಸ್ತುಗಳನ್ನು ಇಡುವರು. ದೋಣಿಗಳನ್ನು ಹೂಡಿ

ಅವುಗಳಲ್ಲಿ ಬಾಳಿಯಹಣ್ಣು, ಹಾಲು, ತುಪ್ಪ, ಸಕ್ಕರೆಗಳನ್ನು ಹಾಕುವರು. ಕಾಯಿಕೋಲು ದೀವಟಗೆಗಳನ್ನು ಹೊತ್ತಿಸಿಕೊಂಡು ಕೈಯಲ್ಲಿ ಹಿಡಿದುಕೊಳ್ಳುವರು. ಗೊರವರು, ಭಕ್ತರು, ಮದುಮಕ್ಕಳು, ಹಾಗೂ ಅವರ ಮನೆಯವರು ಹೀಗೆ ಎಲ್ಲರೂ ಸೇರಿ ಏಳು ಕೋಟಿ ಏಳುಕೋಟಿ ಚಾಂಗಬಲೋ ಎನ್ನುತ್ತ, ಡಮರು, ಗಂಟೆ ಬಾರಿಸುತ್ತ ಜಾಡಿಯ ಸುತ್ತ ಪ್ರದಕ್ಷಣೆ ಬರುವರು. ಹೀಗೆ ಐದು ಸುತ್ತು ಬಂದ ಮೇಲೆ ಗೊರವರನ್ನು ಬಿಟ್ಟು ಉಳಿದವರೆಲ್ಲ ಹಿಂದೆ ಸರಿಯುವರು. ಗೊರವರು ಮಾತ್ರ ಸುತ್ತಿನಲ್ಲಿ ಹೋ... ಹಾ... ರ್... ಬ್... ಎಂದು ಕೂಗುತ್ತ ಪರಸ್ಪರ ಎದುರು ಬದಿರಾಗಿ ನಾಯಿಗಳಂತೆ ಜಗಳವಾಡುವರು. ಅವರಲ್ಲಿ ಇಬ್ಬಿಬ್ಬರಂತೆ ಜೊತೆಯಲ್ಲಿ ನಿಂತು ಜಗಳದ ಅಣಕವನ್ನು ಮಾಡುತ್ತ ಒಬ್ಬೊಬ್ಬರು ಮೊಣಕಾಲೂರಿ ದೋಣಿಗೆ ಹಾಕಿದ ಸಕ್ಕರೆ ಹಾಲುಗಳನ್ನು ಬಾಯಿಂದಲೇ ತಿನ್ನುವರು. ನೆರೆದ ಜನ ದೋಣಿಗಳಿಗೆ ಮತ್ತೆ ಮತ್ತೆ ಸುಲಿದ ಬಾಳೆಯ ಹಣ್ಣು ಹಾಲನ್ನು ಹಾಕಿ ಗೊರವರು ತಿನ್ನುವ ಮೋಜನ್ನು ನೋಡುವರು. ದೋಣಿಗೆ ನೀಡಿದ್ದನ್ನೆಲ್ಲ ಈ ಗೊರವರು ಬಾಯಿಂದಲೇ ತಿಂದು ಮುಗಿಸಬೇಕು. ಕೈಯಿಂದ ಮುಟ್ಟುವಂತಿಲ್ಲ. ದೋಣಿಯಲ್ಲಿ ಏನನ್ನೂ ಉಳಿಸ ಬಾರದು. ಇದನ್ನು ಗೊರವಟಿಗೆಯಾಡುವುದು ಎನ್ನುವರು.

ಕೆಲವು ಬಾರಿ ಈ ರೀತಿಯಾಗಿ ಗೊರವಟಿಗೆಯಾಡುವಾಗ ಗೊರವಪ್ಪ ಅಥವಾ ಗೊರವಮ್ಮಗಳ ಮೈಮೇಲೆ ಆವೇಶವಾಗುವುದುಂಟು. ಅಂಥವರಲ್ಲಿ ಸಾಮಾನ್ಯವಾಗಿ ಬಾಯಿ ಬೀಗದ (ಪವಾಡದ) ಚಿಕ್ಕ ಶಸ್ತ್ರವೊಂದು ಇರುತ್ತದೆ. ಅವರು ಕುಣಿದು ಕುಪ್ಪಳಿಸುತ್ತ ಕೊನೆಯಲ್ಲಿ ಬಾಯಿಗೆ ಆ ಶಸ್ತ್ರವನ್ನು ಹಾಕಿಕೊಳ್ಳುವರು. ಹೀಗೆ ಶಸ್ತ್ರ ಪವಾಡವಾದ ಬಳಿಕ ಅವರ ಆವೇಶ ಇಳಿಯುತ್ತದೆ. ನೆರೆದಿರುವ ಭಕ್ತರು ಜಾಡಿಗೆ ಕಾಣಿಕೆ ಹಾಕುತ್ತಾರೆ.

ಈ ರೀತಿ ಮನೆಯ ಮುಂದೆ ಆದಂತಹ ಗೊರವಟಿಗೆಯಾಡುವ ಕಾರ್ಯಕ್ರಮ ಊರಲ್ಲಿ ಮತ್ತೆರಡು ಕಡೆ ಆಗುತ್ತದೆ. ಕೊನೆಯದನ್ನು ದೇವಾಲಯವೊಂದರ ಮುಂದೆ ಮಾಡುತ್ತಾರೆ. ಮೈಲಾರಲಿಂಗನ ದೇವಾಲಯ ಅಥವಾ ಶಿಬಾರ ಇದ್ದುದಾದರೆ ಕೊನೆಯ ಕಾರ್ಯಕ್ರಮವನ್ನು ಅದರ ಎದುರಿಗೆ ಮಾಡುತ್ತಾರೆ.

ಕೊನೆಯ ಗೊರವಟಿಕೆಯಾಡುವ ಅಥವಾ ಜಾಡಿ ಹಾಸುವ ಕಾರ್ಯಕ್ರಮ ಮುಗಿದ ಮೇಲೆ ಬಂದ ಗೊರವರಿಗೆ, ಗೊರವಮ್ಮಗಳಿಗೆ ಹಾಗೂ ಜೋಗಮ್ಮಗಳಿಗೆ ಮನೆಯವರು ತಮ್ಮ ಶಕ್ತ್ಯನುಸಾರ ಕಾಣಿಕೆ ಕೊಡುತ್ತಾರೆ. ದೀವಟಿಗೆ ಕಾಯ್ದ ಗೊರವಪ್ಪನಿಗೆ ವಿಶೇಷ

ಕಾಣಿಕೆ ಸಲ್ಲುತ್ತದೆ. ಎಲ್ಲರೂ ಸೇರಿ ಮನೆಯವರಿಗೆ ಹರಕೆ ಕೊಡುತ್ತಾರೆ. ಹರಕೆ ಸಾಮಾನ್ಯವಾಗಿ ಈ ರೀತಿ ಇರುತ್ತದೆ.

ಹರ ಹರಾ.............................. ಕರಿಯಾಲದಯ್ಯಾ......................
ಕಾರಣಿಕದಯ್ಯಾ........................ ನೀಡಿದ ಕೈ...............................
ನಿದಾನ ಕೊಡೋ.................... ಬೇಡಿದ ಕೈ..............................
ಭಾಗ್ಯ ಕೊಡೋ...................... ಆಡು ಮಕ್ಕಳ ಕೊಡೊ...............
ತೂಗು ತೊಟ್ಲ ಕೊಡೋ ........ ಬೆಳ್ಳಿ ಬಟ್ಲ ಕೊಡೊ..................
ಹರ ಹರಾ ............................ ಮೈಲಾರಲಿಂಗ..........................
ಮಾರ್ತಾಂಡ........................... ಏಳುಕೋಟಿ .............................
ಶಿವ ಶಿವಾ.............................. ಶಿವ ಶಿವಾ..................................

ಹೀಗೆ ದೇವಾಲಯದ ಮುಂದೆ ಹರಕೆಕೊಟ್ಟಾದ ನಂತರ ಬಂದವರೆಲ್ಲ ತಮ್ಮ ತಮ್ಮ ಕಾಯ್‌ಕೋಲು, ದೀವಟಿಗೆ ಮೊದಲಾದ ಸಾಮಾನುಗಳನ್ನು, ದೇವರುಗಳನ್ನು ತೆಗೆದುಕೊಂಡು ಹೋಗುತ್ತಾರೆ. ಮನೆಯವರು ತಮ್ಮ ಸಲಕರಣೆಗಳೊಂದಿಗೆ ತಮ್ಮ ಮನೆಗೆ ಹೊರಡುತ್ತಾರೆ.

ಇಷ್ಟಾದರೆ ಚಿಕ್ಕಯ್ಯ, ಜುಂಜಯ್ಯರಿಗೆ ಮಾಡುವ ಕಾರ್ಯಕ್ರಮ ಮುಗಿದಂತೆ. ಮುಂದೆ ತಮ್ಮ ಮನೆಯಲ್ಲಿ ಹಮ್ಮಿಕೊಂಡಿರುವ ಲಗ್ನದ ಕಾರ್ಯಕ್ರಮದ ಏರ್ಪಾಡಿಗೆ ತೊಡಗುತ್ತಾರೆ. ಸಾಮಾನ್ಯವಾಗಿ ಲಗ್ನದ ವಿಧಿಗಳೆಲ್ಲ ಮುಗಿದಮೇಲೆ ಮನೆಯಲ್ಲಿ ಪ್ರತಿಷ್ಠಾಪಿಸಿದ ಚಿಕ್ಕಯ್ಯ ಜುಂಜಯ್ಯ ದೇವರಿಗೆ ಮಂಗಳಾರತಿ ಮಾಡಿ ಕಾಯಿ ಒಡೆದು ಅವರನ್ನು ವಿಸರ್ಜಿಸುತ್ತಾರೆ.

**ಉ. ಕಂಕಣ ಬಿಚ್ಚುವುದು :**

ಮೈಲಾರಲಿಂಗನ ಒಕ್ಕಲಿನವರಾಗಿದ್ದರೆ, ಹೊಸದಾಗಿ ಮದುವೆಯಾದ ಗಂಡಹೆಂಡಿರು ಮೈಲಾರಲಿಂಗನ ದೇವಾಲಯಕ್ಕೆ ಹೋಗಿ, ತಮಗೆ ಕಟ್ಟಿದ ಕಂಕಣವನ್ನು ಬಿಚ್ಚಿಬರುತ್ತಾರೆ. ಇದನ್ನು ಕಳಸದರ್ಶನ ಎಂದು ಕರೆಯುತ್ತಾರೆ. ದೇವಾಲಯದಲ್ಲಿ ಅಭಿಷೇಕಾದಿ ಪೂಜಾ

ಕಾರ್ಯಗಳನ್ನು ಮಾಡಿಸಿ, ತಮ್ಮ ಮುಂದಿನ ಜೀವನವು ಸುಖಮಯವಾಗಿರಲೆಂದು ಮೈಲಾರಲಿಂಗನಲ್ಲಿ ಬೇಡಿಕೊಂಡು ತಮ್ಮ ಕೈಗೆ ಕಟ್ಟಿದ್ದ ಕಂಕಣಗಳನ್ನು ಬಿಚ್ಚುತ್ತಾರೆ. ಬಳಿಕ ದೇವಾಲಯದಲ್ಲಿರುವ ಗೊರವರಿಗೆ, ಪೂಜಾರಿಗಳಿಗೆ ಹಾಗೂ ಒಡೆಯರಿಗೆ ಕಾಣಿಕೆ ಸಲ್ಲಿಸಿ ಬರುತ್ತಾರೆ. ಕೆಲ ಬಾರಿ ಅನುಕೂಲವಿದ್ದಲ್ಲಿ ನವ ದಂಪತಿಗಳು ಮೈಲಾರಲಿಂಗನ ದೇವಾಲಯದಲ್ಲಿ ನಡೆಯುವ ಲಗ್ನದ ಅಥವಾ ಓಕುಳಿಯ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಾರೆ. ಹೀಗೆ ಕಳಸದರ್ಶನವಾದ ಬಳಿಕವೇ ತಮ್ಮ ವೈವಾಹಿಕ ಜೀವನವನ್ನು ಆರಂಭಿಸುವುದು ಮೈಲಾರಲಿಂಗನ ಸಂಪ್ರದಾಯದಲ್ಲಿರುವ ಕ್ರಮವಾಗಿದೆ.

ಲಿಂಗಾಯತರಲ್ಲಿಯೂ ಈ ಕ್ರಮವನ್ನು ನಾವು ನೋಡಬಹುದು. ಅವರು ಇದನ್ನು ಬಾಸಿಂಗಬಿಡುವುದು ಎಂದು ಕರೆಯುತ್ತಾರೆ. ಶೈವ ದೇವಾಲಯಗಳಿಗೆ ಹೋಗಿ (ವಿಶೇಷವಾಗಿ ನದೀ ದಡದಲ್ಲಿರುವ) ಅಲ್ಲಿ ಪೂಜೆ ಸಲ್ಲಿಸಿ, ಬಾಸಿಂಗವನ್ನು ನದಿಗೆ ಬಿಡುವುದು ಅವರಲ್ಲಿನ ಸಂಪ್ರದಾಯ. ಬಾಸಿಂಗ ಬಿಟ್ಟ ಬಳಿಕವೇ ಅವರಲ್ಲಿ ವೈವಾಹಿಕ ಜೀವನ ಆರಂಭಿಸುವುದು ವಾಡಿಕೆ.

## ಅಡಿಟಿಪ್ಪಣಿಗಳು :

1. *ದೇ. ಜ. ಗೌ; ಜಾನಪದ ವಾಹಿನಿ; ೧೯೮೬ – ೧೦೩*
2. *ಪ್ರೊ. ಎ. ವಿ. ನಾವಡ; ಜಾನಪದ ಸಾಹಿತ್ಯ ದರ್ಶನ –೨೩, ಪುಟ – ೧೭*
3. *ಇದನ್ನು ಚಂಪಾ ಷಷ್ಠಿಯೆಂದು, ಮಹಾರಾಷ್ಟ್ರದಲ್ಲಿ ವಾಂಗೀ ಛಟೀ ಎಂದು ಕರೆಯುತ್ತಾರೆ.*
4. *ಈಗಿನ ಆಂಧ್ರಪ್ರದೇಶದಲ್ಲಿರುವ ಗ್ರಾಮ.*
5. *ಅರಿಷಿಣಕೊಂಬುಗಳನ್ನು ಕರಿಯೆಳೆ, ನೆಗ್ಗಲಿಮುಳ್ಳು ಮೊದಲಾದವುಗಳೊಡನೆ ಬೆರೆಸಿ ಸಿದ್ಧಪಡಿಸಿದ ಪುಡಿಯನ್ನು ಭಂಡಾರವೆಂದು ಕರೆಯುತ್ತಾರೆ.*
6. *ಎಂ. ಬಿ. ನೇಗಿನಹಾಳ; ಮೈಲಾರಲಿಂಗ ಖಂಡೋಬಾ; ಪುಟ ೨೩೬*
7. *ಢೇರೇ; ಖಂಡೋಬಾ ; ಪುಟ – ೯೨*
8. *ವಿವರಣೆಗಾಗಿ ನೋಡಿ – ಇದೇ ಮಹಾಪ್ರಬಂಧದ ಮೈಲಾರಲಿಂಗನನನ್ನು ಕುರಿತ ಸಾಹಿತ್ಯ; ಪುಟ – ೧೬೫*
9. *ಇದೇ ರೀತಿಯ ಆಚರಣೆ ಉತ್ತರಕನ್ನಡ ಜಿಲ್ಲೆಯ ಸೋದೆಯ ವಾದಿರಾಜ ಸ್ವಾಮಿಯ ಮಠದಲ್ಲಿಯೂ ಕಾಣಬಹುದು. ಅಲ್ಲಿ ಭೂತರಾಜರಿಗೆ ಕಾಯಿ ಉರುಳಿಸಿದ ಬಳಿಕವಷ್ಟೇ ವೃಂದಾವನಗಳ ದರ್ಶನ ಮಾಡಬೇಕು.*

10. ಇದನ್ನು ಸ್ಥಳೀಯರು ಸಕ್ಕರೆ ಎನ್ನುವರು

11. ಬಾಳೆಯ ಎಲೆಯಲ್ಲಿ ದೋಣಿಗೆ ತುಂಬಬೇಕಾದ ಎಲ್ಲ ಪದಾರ್ಥಗಳನ್ನು ನೀಡುವುದನ್ನು ಹಸಿರು ದೋಣಿ ಎನ್ನುವರು.

12. ಕೆಲವರು ಮದುವೆಯಾದ ನಂತರವೂ ಪಡೆಯುವರು.

13. ಮಂಡಕ್ಕಿ, ಸೇವು, ಚಿವುಡಾ, ಹುರಿಗಾಳು, ಹುರಿಗಡಲೆ ಮೊದಲಾದವುಗಳನ್ನು ಸೇರಿಸಿದ ಪರಾಳ.

14. ಆದರೆ ಕೆಲವರು ತಮ್ಮ ಮೊದಲ ತಾಳಿ ತೆಗೆದು ಶಿಬಾರವಾಳಿ ಕಟ್ಟಿಕೊಳ್ಳುವರು.

15. ನೋಡಿ; ಇದೇ ಮಹಾಪ್ರಬಂಧ; ಕಂಕಣ ಬಿಚ್ಚುವುದು; ಪುಟ : ೧೪೪–೧೪೫

16. ನಾಯಾಗಿ ಬೊಗಳುವ ಕಂಡೆ.... ಬಸವಣ್ಣನವರ ಷಟ್‌ಸ್ಥಲದ ವಚನಗಳು; ಸಂ. ಶಿ. ಶಿ. ಬಸವನಾಳ; ವಚನ ಸಂ – ೫೬೮

17. ಆದರೆ ಮೈಲಾರ ಕ್ಷೇತ್ರದಲ್ಲಿ ಮಾತ್ರ ನಾಪಿದನ್ನು ಕಾಣುವುದಿಲ್ಲ. ಬದಲಾಗಿ ಇತ್ತೀಚೆಗೆ ನಿರ್ಮಿಸಿದ ದೇವಸ್ಥಾನದ ಗೋಪುರದಲ್ಲಿ ಇದೇ ರೀತಿಯ ಚಿತ್ರವೊಂದನ್ನು ಮಾಡಿದ್ದಾರೆ.

18. ಪವಾಡಗಳಲ್ಲಿ ಶಿರಸ್‌ಪವಾಡವೆಂಬ ಪವಾಡವೂ ಇತ್ತಂತೆ. ಕಂಚಾವೀರರು ತಮ್ಮ ತಲೆಯನ್ನು ಕತ್ತರಿಸಿ, ಆರತಿ ಬೆಳಗಿ ನಂತರ ಅದನ್ನು ತನ್ನ ಮುಂಡಕ್ಕೆ ಮೊದಲಿನಂತೆ ಅಂಟಿಸಿಕೊಳ್ಳುತ್ತಿದ್ದರಂತೆ. ಆದರೆ ಒಮ್ಮೆ ದೇವರು ಒಬ್ಬನ ಮೈಮೇಲೆ ಬಂದು ಇದು ಕಲಿಯುಗ. ಇನ್ನು ಮುಂದೆ ಶಿರಸ್‌ಪವಾಡ ಬೇಡ ಎಂದು ಹೇಳಿದನಂತೆ. ನೋಡಿ : ಇದೇ ಪ್ರಬಂಧದ – ಪವಾಡಗಳು; ಪುಟ – ೧೩೦ – ೧೩೧

19. ಕಟ್ಟಿಗೆಯ ಪಾದುಕೆಯ ಮೇಲೆ ಮೊಳೆಗಳನ್ನು ಸಾಲಾಗಿ ನೆಟ್ಟು ಮಾಡಿದ ವಿಶಿಷ್ಟ ಬಗೆಯ ಪಾದುಕೆ.

20. ಈಚೆಗೆ ಬಾದಾಮಿಯ ಬಳಿಯ ಆಡ್ಗೂರು ಗ್ರಾಮದ ವ್ಯಕ್ತಿಯೊಬ್ಬ ತನ್ನೆರಡೂ ಕಣ್ಣುಗಳನ್ನು ದೇವರಿಗೆ ಅರ್ಪಿಸಿದ ವಿಷಯವನ್ನು ಪತ್ರಿಕೆಗಳಲ್ಲಿ ಗಮನಿಸಬಹುದು.

21. ಡಾ. ಎಂ. ಬಿ. ನೇಗಿನಹಾಳ; ಮೈಲಾರಲಿಂಗ ಖಂಡೋಬಾ; ಪುಟ – ೧೫೭

22. ಡಾ. ಎಂ. ಎಸ್. ವೆಂಕಟೇಶ್; ಮೈಲಾರದ ಜಾತ್ರೆಗಳು ಒಂದು ಪ್ರದರ್ಶನ ಅಧ್ಯಯನ; ಪುಟ – ೫೨

23. ದಕ್ಷಯಜ್ಞದ ಸಂದರ್ಭದಲ್ಲಿ ವೀರಭದ್ರನ ಅವತಾರವೂ ಇದೇ ರೀತಿ ಆಗಿತ್ತು. ಶಿವನು ತನ್ನ ಜಟೆಯನ್ನು ನೆಲಕ್ಕೆ ಅಪ್ಪಳಿಸಿದಾಗ ಅಲ್ಲಿ ವೀರಭದ್ರ ಹುಟ್ಟಿ ಬಂದಿದ್ದನು.

24. ಶಸ್ತ್ರ, ಇದು ಸುಮಾರು ಮುಕ್ಕಾಲು ಇಂಚು ಅಗಲದ ಚೂಪಾದ ಆಯುಧ. ಇದನ್ನು ಬೆಳ್ಳಿ ಬಂಗಾರ ಸೇರಿಸಿ ಮಾಡಿರುತ್ತಾರೆ ಎಂಬ ಪ್ರತೀತಿಯಿದೆ.

25. ಬಗನಿ ಮರದ ಭಾಗವನ್ನು ಕೆತ್ತಿ ಚೂಪಾದ ಭಾಗವನ್ನು ಮಾಡಿದ ಸುಮಾರು ಒಂದು ಮೊಳ ಉದ್ದದ ಕಟ್ಟಿಗೆಯ ತುಂಡು. ಸಾಮಾನ್ಯವಾಗಿ ಟೆಂಟ್‌ಗಳನ್ನು ಹಾಕುವಾಗ, ಬಯಲಿನಲ್ಲಿ ದನಗಳನ್ನು ಕಟ್ಟುವಾಗ ಈ ರೀತಿಯ ಗೂಟಗಳನ್ನು ಬಳಸುವರು.

26. ಸ್ವಲ್ಪ ದಪ್ಪಗೆ ಹಾಗೂ ಸ್ವಲ್ಪ ಉದ್ದವಾಗಿರುವ ಮರದ ಸಾಧನ. ಸಾಮಾನ್ಯವಾಗಿ ಕಟ್ಟಿಗೆಯ ಕೆಲಸಮಾಡುವವರು ಇದನ್ನು ಬಳಸುತ್ತಾರೆ.

27. ಮಿಣಿ ಎಂದರೆ ಚರ್ಮದಿಂದ ಮಾಡಿದ ಹಗ್ಗದಂತಿರುವ ಸಾಧನ. ರೈತಾಪಿ ಜನರು ಇದನ್ನು ತಮ್ಮ ಕೃಷಿ ಸಂಬಂಧಿ ಕಾರ್ಯಗಳಲ್ಲಿ ಬಳಸುತ್ತಾರೆ. ಆದರೆ ಪವಾಡದ ಸಂದರ್ಭದಲ್ಲಿ ಬಳಸುವ ಮಿಣಿ ಜಿಂಕೆಯ ಚರ್ಮದ್ದು ಎಂದು ಹೇಳುತ್ತಾರೆ.

28. ಪೂಜೆಗೆ ಮೊದಲು ತೆಗೆದ ಹೂ ಮೊದಲಾದ ಅಲಂಕಾರದ ಪದಾರ್ಥಗಳು.

29. ಇಲ್ಲಿ ಕಲ್ಲಿನ ಹಲಗೆಯೊಂದನ್ನು ನೆಟ್ಟು ಅದಕ್ಕೆ ಸರಪಳಿಯ ಒಂದು ತುದಿಯನ್ನು ಕಟ್ಟುವ ವ್ಯವಸ್ಥೆಮಾಡಿರುತ್ತರೆ.

30. ಕೈ ಪವಾಡ ಹಾಗೂ ಕಾಲು ಪವಾಡಗಳನ್ನು ಕಂಚಾವೀರರು ಮಾಡುತ್ತಾರೆ.

31. ಅಬ್ಬಲೂರಿನ ಏಕಾಂತ ರಾಮಯ್ಯನು ಜೈನರೊಡನೆ ಜಗಳ ಬಂದಾಗ ತನ್ನ ಶಿರಸ್ಸನ್ನು ಕತ್ತರಿಸಿ ಪುನಃ ಜೋಡಿಸಿ ಕೊಂಡು ಶಿವನು ಇರುವುದನ್ನು ಸ್ಪಷ್ಟ ಪಡಿಸಿದ್ದನೆಂಬ ಉಲ್ಲೇಖ ಅಬ್ಬಲೂರಿನ ಏಕಾಂತರಾಮಯ್ಯನ ಶಾಸನದಿಂದ ತಿಳಿದುಬರುತ್ತದೆ. ಈ ಅಬ್ಬಲೂರು ಇರುವುದು ಈಗಿನ ಹಾವೇರಿ ಜಿಲ್ಲೆಯಲ್ಲಿ.

32. ಈ ಟಿ. ವಿ. ಕನ್ನಡ; ವಿಸ್ಮಯ ಕಾರ್ಯಕ್ರಮ; ವಕ್ತೃ – ಸದಿಯಪ್ಪ
(ದಿನಾಂಕ ೨೧–೦೯–೨೦೦೮)

33. ಚುರುಮುರಿ, ಬೆಂಡು, ಬತ್ತಾಸು, ಖಾರ, ಸೇವು, ಜಿಲೇಬಿ ಮೊದಲಾದವು.

34. ನಮ್ಮ ಅಣ್ಣನ ಮಗನ ಮದುವೆಯ ಸಂದರ್ಭದಲ್ಲಿ ಕ್ಷೇತ್ರ ಕಾರ್ಯದ ದೃಷ್ಟಿಯಿಂದ ನಾನು ಪ್ರತ್ಯಕ್ಷ ದರ್ಶಿಯಾಗಿದ್ದೆ.

35. ಕಂಬಳಿ ಹಾಸಿ, ಅದರ ಮೇಲೆ ಅಕ್ಕಿಯನ್ನು ಹಾಕಿ ಮಾಡಿದ ಪೀಠ

36. ಚೆಲ್ಲದ ಬೇಳೆ ಎಂದು ಗ್ರಾಮ್ಯ ಭಾಷೆಯಲ್ಲಿ ಕರೆಯುವರು

37. ಮಂಗರೊಳ್ಳಿ ಒಂದು ತರಹದ ಬಳ್ಳಿ. ಇದನ್ನು ಕತ್ತರಿಸಿ, ಹುರಿದು, ಕುಟ್ಟಿ ಪುಡಿಮಾಡಿ ಚಟ್ನಿ ತಯಾರಿಸುವರು.

38. ಹಗ್ಗದ ಮಂಚ (ಇದನ್ನು ಉತ್ತರ ಕರ್ನಾಟಕದ ಮನೆ ಮನೆಗಳಲ್ಲಿ ನೋಡಬಹುದು)

39. ನಮ್ಮ ಸ್ನೇಹಿತ ಶ್ರೀ ಡಿ. ಎನ್. ಗುತ್ತಲ್ ಅವರ ಮನೆಯಲ್ಲಿ ನಡೆದ ಅವರ ಅಣ್ಣನ ಮದುವೆಯಲ್ಲಿ ಬುತ್ತಿಯ ಮೇಲೆ ಕುದುರೆಯ ಪಾದ ಮೂಡಿದ್ದನ್ನು ಕಣ್ಣಾರೆ ಕಂಡವರಿದ್ದಾರೆ.

40. ಡಾ. ಎಂ. ಬಿ. ನೇಗಿನಹಾಳ; ಮೈಲಾರಲಿಂಗ ಖಂಡೋಬಾ; ಪುಟ – ೧೭೭

41. ಇನ್ನೂ ಕೆಲವರು ಮಡಿಕೆಗಳ ಬದಲಾಗಿ ೧೧ ಜೋಳದ ಅಥವಾ ಕಬ್ಬಿನ ಜಲ್ಲೆಗಳನ್ನು ಬಳಸುವರು. ಇಲ್ಲಿಯೂ ಮಡಿಕೆಗೆ ಮಾಡಿದಂತೆ ಜೋಳದ ಅಥವಾ ಕಬ್ಬಿನ ಜಲ್ಲೆಗೆ ಅಲಂಕಾರ ಮಾಡುವರು.

* * *

# ಅಧ್ಯಾಯ ೮ : ಮೈಲಾರಲಿಂಗನನ್ನು ಕುರಿತ ಸಾಹಿತ್ಯ

## (ಶಿಷ್ಟ ಹಾಗೂ ಜಾನಪದ)

೧. ಪುರಾಣ

೨. ಐತಿಹ್ಯ

೩. ಭಾಷಿಕ ಜಾನಪದ

೪. ಜನಪದಗೀತೆ ಹಾಗೂ ಒಡಪು

೫. ಮೈಲಾರಲಿಂಗನ ಕಾವ್ಯ

೬. ಗೊರವರ ಕುಣಿತ

೭. ದೃಶ್ಯ ಮಾಧ್ಯಮ

# ಅಧ್ಯಾಯ : ೮

# ಮೈಲಾರಲಿಂಗನನ್ನು ಕುರಿತ ಸಾಹಿತ್ಯ

## (ಶಿಷ್ಟ ಹಾಗೂ ಜಾನಪದ)

## ೮.೧ ಪುರಾಣ

ಭಾರತೀಯ ಸಂಸ್ಕೃತಿಯಲ್ಲಿ ಪುರಾಣಗಳಿಗೆ ವಿಶೇಷವಾದ ಸ್ಥಾನವಿದೆ. ಭಾರತೀಯ ಸಂಸ್ಕೃತಿ ಹಾಗು ನಾಗರಿಕತೆಯನ್ನು ಸಾಮಾನ್ಯ ಜನರಿಗೆ ತಲುಪಿಸಿದ ಶ್ರೇಯಸ್ಸು ಪುರಾಣಗಳದ್ದು.

**ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ।**

**ಬಿಭೇತ್ಯಲ್ಪಶ್ರುತಾದ್ವೇದೋ ಮಾಮಯಂ ಪ್ರಹರಿಷ್ಯತಿ ॥**[1]

ಎಂದು ಪುರಾಣಗಳ ವೈಶಿಷ್ಟ್ಯವನ್ನು ಕುರಿತು ಹೇಳಲಾಗಿದೆ. ಈಗಲೂ ಸಹ ಹಿಂದೂ ಧರ್ಮಕ್ಕೆ ಈ ಪುರಾಣಗಳೇ ಮೂಲಾಧಾರಗಳು.

'ಪುರಾಣಂ ಆಖ್ಯಾನಂ' ಎಂಬಂತೆ ಪುರಾಣ ಎಂದರೆ 'ಪುರಾತನ ಕಥೆಗಳು' ಎಂದರ್ಥ. ಬಹುಶಃ ಪುರಾಣಗಳು ಪ್ರಾಚೀನವಾದುದರಿಂದ ಈ ಹೆಸರು ಬಂದಿದೆಯೆನ್ನಬಹುದು. ಭಾರತೀಯ ಸಾಹಿತ್ಯದಲ್ಲಿ ಪುರಾಣಗಳ ಜೊತೆಯಲ್ಲಿ ಇತಿಹಾಸದ ಹೆಸರೂ ಬರುತ್ತದೆ. ಆದರೆ ಪುರಾಣಗಳ ವಿಷಯ ಇತಿಹಾಸಕ್ಕಿಂತ ಅಧಿಕ ವ್ಯಾಪಕವಾಗಿಯೂ ವಿಸ್ತೃತವಾಗಿಯೂ ಇದೆ.

ಕೆಲವರ ಪ್ರಕಾರ ಪುರಾಣಗಳೇ ಪ್ರಾಮಾಣಿಕ ಮತ್ತು ಆದರ್ಶವಾದ ಇತಿಹಾಸ. ಯಾವುದೇ ಸಮಾಜದ ಬೆಳವಣಿಗೆಯು ಪೂರ್ಣರೂಪದಲ್ಲಿದ್ದು ವರ್ತಮಾನ ಕಾಲದವರಿಗೆ ಅದು ಕ್ರಮರೂಪದಲ್ಲಿದ್ದರೆ ಅದನ್ನು ಇತಿಹಾಸವೆಂದು ಸ್ವೀಕರಿಸಬೇಕು[2].

ಪುರಾಣಗಳು ಅನೇಕ ದೃಷ್ಟಿಗಳಲ್ಲಿ ವಿಶೇಷ ಸ್ಥಾನವನ್ನು ಪಡೆಯುತ್ತವೆ. ಧಾರ್ಮಿಕ ದೃಷ್ಟಿಯಿಂದ ನೋಡಿದಲ್ಲಿ ವೇದಗಳಲ್ಲಿ ವಿಹಿತವಾದ ಧರ್ಮದ ಸರಳ ವರ್ಣನೆಯಿದೆ. ಪುರಾಣಗಳಲ್ಲಿ ಭೌಗೋಳಿಕ ವಿಷಯಗಳೂ ಇವೆ. ಭಾರತದ ಸಮಗ್ರ ತೀರ್ಥಗಳ

ವಿಸ್ತಾರವಾದ ವರ್ಣನೆಯಿದೆ. ಇದರಿಂದ ನಮಗೆ ಆಯಾ ಸ್ಥಾನಗಳ ಭೌಗೋಳಿಕ ಪರಿಸರದ ಜ್ಞಾನ ಪ್ರಾಪ್ತವಾಗುತ್ತದೆ.

ಭಾರತೀಯ ಸಂಸ್ಕೃತಿಯಲ್ಲಿ ಒಟ್ಟು ಹದಿನೆಂಟು ಪುರಾಣಗಳ[3] ಉಲ್ಲೇಖವಿದೆ. ಈ ಪುರಾಣಗಳನ್ನು ರಚಿಸಿದವನು ವೇದವ್ಯಾಸನೆಂಬ ಪ್ರತೀತಿ ಇದೆ. ಸತ್ಯವತೀ ಪರಾಶರರ ಪುತ್ರನಾದ ವ್ಯಾಸನು ಮಹಾಭಾರತ, ಪುರಾಣಗಳನ್ನು ರಚಿಸಿದನೆಂಬ ಕಲ್ಪನೆಯಿದ್ದರೂ ಪುರಾಣಗಳ ಕಥಾವಸ್ತುವನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಅವುಗಳ ರಚನಾಕಾಲದಲ್ಲಿ ಬಹಳಷ್ಟು ವ್ಯತ್ಯಾಸಗಳಿರುವುದು ಕಂಡುಬರುತ್ತದೆ. ಹೀಗಾಗಿ ಈ ಪುರಾಣಗಳನ್ನು ರಚಿಸಿದವನು ಒಬ್ಬನೇ ಎಂಬುದು ಸಂದೇಹಾಸ್ಪದವಾಗಿದೆ. ಆದರೂ ಪರಂಪರಾನುಗತವಾಗಿ ಬಂದಿರುವ ನಂಬಿಕೆಯನ್ನು ತಳ್ಳಿಹಾಕುವುದು ಉಚಿತವಲ್ಲ. ಹೀಗಾಗಿ ಪುರಾಣಗಳ ಪ್ರಾಮುಖ್ಯತೆ ಹಾಗೂ ನಂಬಿಕೆಯ ದೃಷ್ಟಿಯಿಂದ ನಾವು ವ್ಯಾಸ ಕರ್ತೃತ್ವವನ್ನು ಒಪ್ಪಿಕೊಳ್ಳಬಹುದು.

ಏಳುಕೋಟಿ ಮೈಲಾರಲಿಂಗನನ್ನು ಕುರಿತ ಉಲ್ಲೇಖವಾದ ಮಲ್ಲಾರಿ ಮಹಾತ್ಮ್ಯೆಯು ಬ್ರಹ್ಮಾಂಡ ಪುರಾಣದಲ್ಲಿ ಕಂಡು ಬರುತ್ತದೆ. ಆದರೆ ಎಲ್ಲ ಆವೃತ್ತಿಗಳಲ್ಲಿ ಮಲ್ಲಾರಿ ಮಹಾತ್ಮ್ಯೆ ಇರುವುದು ಕಂಡುಬರುವುದಿಲ್ಲ. ಮೈಲಾರನ ಉಪಾಸನೆ ಇರುವ ಭೂಪ್ರದೇಶಗಳಲ್ಲಿನ ಆವೃತ್ತಿಗಳಲ್ಲಿ ಈ ಭಾಗ ಕಂಡು ಬರುತ್ತದೆ.

ಬ್ರಹ್ಮಾಂಡ ಪುರಾಣದ ರಚನೆಯ ಕಾಲವನ್ನು ನಿಶ್ಚಿತವಾಗಿ ಹೇಳಲು ಸಾಧ್ಯವಿಲ್ಲ. ವ್ಯಾಸನೇ ಈ ಪುರಾಣವನ್ನು ಬರೆದಿರುವುದಾದರೆ, ದ್ವಾಪರಯುಗವನ್ನು ಈ ಪುರಾಣದ ಕಾಲವೆಂದು ನಿರ್ಧರಿಸಬಹುದು. ಅಂದರೆ ಈಗ್ಗೆ ಸರಿ ಸುಮಾರು ೫೦೦೦ ವರ್ಷಗಳ ಹಿಂದೆ ಈ ಪುರಾಣದ ರಚನೆಯಾಗಿದೆ ಎಂದು ಹೇಳಬಹುದು. ಮೂಲತಃ ಬ್ರಹ್ಮಾಂಡ ಪುರಾಣದ ಕ್ಷೇತ್ರ ಖಂಡದಲ್ಲಿ ಮೈಲಾರನ ಅವತಾರಕ್ಕೆ ಸಂಬಂಧಿಸಿದಂತೆ ಒಟ್ಟು ಇಪ್ಪತ್ತೆರಡು ಅಧ್ಯಾಯಗಳಿವೆ ಹಾಗೂ ಒಂಬೈನೂರ ಮೂವತ್ತು (೯೩೦) ಶ್ಲೋಕಗಳಿವೆ[4]. ಬ್ರಹ್ಮಾಂಡ ಪುರಾಣದ ಕ್ಷೇತ್ರಖಂಡದಲ್ಲಿ ಮೈಲಾರನ ಅವತಾರಕ್ಕೆ ಕಾರಣವಾದ ಕಥೆಯನ್ನು ವಿವರಿಸಲಾಗಿದ್ದು ಇದನ್ನು ಮಲ್ಲಾರಿ ಮಹಾತ್ಮ್ಯೆ ಎಂದು ಕರೆಯಲಾಗಿದೆ. ಈ ಗ್ರಂಥವು ಬ್ರಹ್ಮಾಂಡ ಪುರಾಣದ ಕ್ಷೇತ್ರ ಖಂಡಾಂತರ್ಗತವಿರುವ ಬಗ್ಗೆ ಪ್ರತಿ ಅಧ್ಯಾಯದ ಸಮಾಪ್ತಿ ಮುದ್ರೆಯಲ್ಲಿ ಉಲ್ಲೇಖವನ್ನು ಕಾಣಬಹುದಾಗಿದೆ.

ಮೊದಲಾದವರೊಡನೆ ಬಂದನು. ಎರಡೂ ಸೈನ್ಯಗಳ ನಡುವೆ ಘೋರ ಯುದ್ಧ ಪ್ರಾರಂಭವಾಯಿತು. ಗುಹನು ಖಡ್ಗದಂಷ್ಟ್ರನನ್ನು, ಗಣಪತಿಯು ಉಲ್ಕಾಮುಖನನ್ನು ಹಾಗೂ ನಂದಿಯು ಕುಂತಲೋಮನನ್ನು ಸಂಹರಿಸಿದನು.

ಇತ್ತ ಮಣಿಕ ಹಾಗೂ ಮಾರ್ತಾಂಡ ಭೈರವನ ನಡುವೆ ಭೀಕರ ಯುದ್ಧ ನಡೆಯಿತು. ಕೊನೆಗೆ ಭೈರವನು ಉಗ್ರರೂಪ ತಾಳಿ ತನ್ನ ಶೂಲದಿಂದ ಮಣಿಕನ ಎದೆಯನ್ನು ಸೀಳಿ, ತಲೆಯ ಮೇಲೆ ತನ್ನ ಪಾದವನ್ನಿಟ್ಟನು. ತಕ್ಷಣ ಮಣಿಕಾಸುರನಿಗೆ ಜ್ಞಾನೋದಯವಾಯಿತು. ಅವನು ಶಿವನನ್ನು ನಾನಾ ರೀತಿಯಲ್ಲಿ ಸ್ತುತಿಸಿದನು. ಇದರಿಂದ ಸುಪ್ರೀತನಾದ ಶಿವನು ಏನು ವರ ಬೇಕು? ಎಂದು ಕೇಳಿದನು. ಆಗ ಮಣಿಕನು ನಿನ್ನ ಪಾದದ ಕೆಳಗೆ ಯಾವಾಗಲು ನನ್ನ ಶಿರವಿರಲಿ ಎಂದೂ, ತನ್ನನ್ನು ನಿನ್ನ ವಾಹನವಾಗಿ ಸ್ವೀಕರಿಸಬೇಕು ಎಂದೂ ಪ್ರಾರ್ಥನೆ ಮಾಡಿದನು. ಶಿವನು ಅದಕ್ಕೆ ಒಪ್ಪಿದನು. ಅಂದಿನಿಂದ ಮಣಿಕಾಸುರನು ಕುದುರೆಯ ರೂಪದಲ್ಲಿ ಶಿವನ ವಾಹನವಾದನು.

ಮಣಿಕಾಸುರನ ವರ್ತನೆಯಿಂದ ಮನಕರಗಿದ ಶಿವನು ಅವನ ಅಣ್ಣ ಮಲ್ಲಾಸುರನನ್ನು ಕ್ಷಮಿಸುವ ಉದ್ದೇಶದಿಂದ ಅವನ ಜೊತೆ ಸಂಧಿಗಾಗಿ ವಿಷ್ಣುವನ್ನು ಕಳಿಸಿದನು. ಆದರೆ ಅದನ್ನು ತಿರಸ್ಕರಿಸಿದ ಮಲ್ಲನು ಯುದ್ಧಕ್ಕೆ ಮುಂದಾದನು. ಇಬ್ಬರ ನಡುವೆ ಭಯಂಕರ ಯುದ್ಧ ಪ್ರಾರಂಭವಾಯಿತು. ಘೃತಮಾರಿ ಮಲ್ಲಾಸುರನ ಸೈನ್ಯದ ಮೇಲೆ ಕಲ್ಲಿನ ಮಳೆಯನ್ನೇ ಕರೆದಳು. ಕೊನೆಗೆ ಶಿವನು ಮಲ್ಲಾಸುರನನ್ನು ಸಂಹರಿಸಿ ತನ್ನ ಪಾದದಿಂದ ತುಳಿಯ ಹೋದನು. ಆಗ ಮಲ್ಲಾಸುರನು ತನ್ನ ತಪ್ಪನ್ನು ತಿಳಿದು ಕ್ಷಮೆ ಯಾಚಿಸಿದನು. ಇದರಿಮ್ದ ಹರ್ಷಗೊಂಡ ಶಿವನು ನಿನಗೆ ಏನು ವರಬೇಕು ಎಂದು ಕೇಳಿದನು. ಆಗ ಮಲ್ಲನು ಭಕ್ತರು ನಿನ್ನ ಹೆಸರಿಗೂ ಮುಂಚೆ ನನ್ನ ಹೆಸರನ್ನು ಹೇಳಬೇಕು ಎಂದು ಕೋರಿಕೊಂಡನು. ಶಿವನು ಹಾಗೆಯೇ ಆಗಲಿ ಎಂದನು. ಅಂದಿನಿಂದ ಶಿವನು ಮಲ್ಲಾರಿ ಎಂದು ಪ್ರಸಿದ್ಧನಾದನು[5].

ಬಳಿಕ ಮಲ್ಲಾಸುರನ ಐದು ಜನ ಮಕ್ಕಳು ಶಿವನ ಮೇಲೆ ಯುದ್ಧಕ್ಕೆ ಬಂದರು. ಭೈರವರೂಪಿಯಾದ ಶಿವನು ಅವರನ್ನು ಕಲ್ಲಾಗಿ ಬೀಳುವಂತೆ ಶಪಿಸಿದನು. ಕೂಡಲೇ ಅವರೆಲ್ಲ ಕಲ್ಲುಗುಡ್ಡಗಳಾಗಿ ಬಿದ್ದರು.

**ಮಲ್ಲಾರಿ ಮಹಾತ್ಮೆಯ ಕಥಾ ಸಾರಾಂಶ :**

ಧರ್ಮಪುತ್ರರೆಂದು ಪ್ರಸಿದ್ಧರಾಗಿದ್ದ ಏಳುಜನ ಋಷಿಗಳು ಮಣಿಚೂಲ ಪರ್ವತದಲ್ಲಿ ತಮ್ಮ ಪತ್ನಿಯರೊಂದಿಗೆ ವಾಸವಾಗಿದ್ದರು. ಯಜ್ಞಯಾಗಾದಿಗಳಲ್ಲಿ ತೊಡಗಿದ್ದು ಜನರ ನೆಮ್ಮದಿಗೆ ಕಾರಣರಾದ ಇವರಿಗೆ ಯಾವ ರೀತಿಯ ಸಂಕಷ್ಟಗಳೂ ಇರಲಿಲ್ಲ.

ಹೀಗಿರಲು ಒಮ್ಮೆ ಮಣಿಕಾಸುರನೆಂಬ ದೈತ್ಯನು ಮಣಿಚೂಲ ಪರ್ವತ ಪ್ರದೇಶಕ್ಕೆ ಬೇಟೆಗೆಂದು ಬಂದು ಇಲ್ಲಿನ ಋಷಿಮುನಿಗಳ ಮೇಲೆ ದಾಳಿ ಮಾಡಿದನು. ಅವರು ಅಲ್ಲಿಂದ ಹೇಗೋ ತಪ್ಪಿಸಿಕೊಂಡು ಸನತ್ಕುಮಾರನಲ್ಲಿಗೆ ಹೋಗಿ ತಮ್ಮ ಕಷ್ಟವನ್ನು ತೋಡಿಕೊಂಡರು. ಅದಕ್ಕೆ ಸನತ್ಕುಮಾರನು – ಮಲ್ಲಾಸುರನು ಏಕಪಾದದಲ್ಲಿ ನಿಂತುಕೊಂಡು ತಪಸ್ಸು ಮಾಡಿ ವರವನ್ನು ಪಡೆದಿದ್ದಾನೆ. ನೀವು ಸಹಾಯಕ್ಕಾಗಿ ಇಂದ್ರನನ್ನು ಪ್ರಾರ್ಥಿಸಿರಿ ಎಂದು ಸೂಚಿಸಿದನು.

ಅಂತೆಯೇ ಇಂದ್ರಲೋಕಕ್ಕೆ ಹೋದ ಋಷಿಗಳು ದೇವೇಂದ್ರನನ್ನು ಕಂಡು ತಮ್ಮ ಕಷ್ಟವನ್ನು ಹೇಳಿಕೊಂಡರು. ಇಂದ್ರನು ಮಲ್ಲಾಸುರನನ್ನು ಮಣಿಸುವುದು ನನ್ನಿಂದ ಸಾಧ್ಯವಿಲ್ಲ ಎಂದು ತಿಳಿಸಿ, ವಿಷ್ಣುವಿನ ಬಳಿಗೆ ಅವರನ್ನು ಕರೆದೊಯ್ದನು. ವಿಷ್ಣುವೂ ಸಹ ತನ್ನ ಅಸಹಾಯಕತೆಯನ್ನು ತೋರಿಸಿ, ಅವರನ್ನೆಲ್ಲ ಪರಶಿವನ ಬಳಿ ಕರೆದೊಯ್ದನು. ಶಿವನು ತನ್ನ ಭಕ್ತರಿಗೆ ಬಂದ ಕಷ್ಟವನ್ನು ಕಂಡು ಮಣಿಕನನ್ನು ಸಂಹರಿಸುವುದಾಗಿ ಹೇಳಿ ಅವರಿಗೆ ಅಭಯವಿತ್ತನು.

ಬಳಿಕ ತನ್ನ ಜಟೆಯಿಂದ ಘೃತ ಮಾರಿಯನ್ನು ಸೃಷ್ಟಿಸಿ, ಅವಳನ್ನು ತನ್ನ ಸಹಾಯಕ್ಕೆ ಬರುವಂತೆ ತಿಳಿಸಿದನು. ಅದೇ ರೀತಿ ತನ್ನ ಮಕ್ಕಳಾದ ಗಣಪತಿ, ಷಣ್ಮುಖರನ್ನು ಹಾಗೂ ನಂದಿ ಮೊದಲಾದ ದೇವಗಣವನ್ನು ಕರೆದುಕೊಂಡು ಮಾರ್ತಾಂಡ ಭೈರವನ ರೂಪ ತಾಳಿ ಅಶ್ವಾರೋಹಿಯಾಗಿ ಖಡ್ಗ ಮೊದಲಾದ ಅಸ್ತ್ರಗಳಿಂದ ಕೂಡು ಯುದ್ಧಕ್ಕೆ ಹೊರಟನು. ಪಾರ್ವತಿಯೂ ಸಹ ಅವನ ಜೊತೆ ಮ್ಹಾಲಸಿಕಾ ರೂಪ ಧರಿಸಿ ಹೊರಟಳು. ವಿಷ್ಣುವು ಹೆಗ್ಗಡೆ ಪ್ರಧಾನಿಯಾಗಿ ಸೈನ್ಯವನ್ನು ಮುನ್ನಡೆಸಿದನು.

ಈ ರೀತಿ ಬಂದ ಶಿವನ ಸೈನ್ಯದೊಡನೆ ಯುದ್ಧಮಾಡಲು ಮಲ್ಲಾಸುರನು ತನ್ನ ತಮ್ಮ ಮಣಿಕ ಹಾಗೂ ಸೇನಾಪತಿಗಳಾದ ಖಡ್ಗದಂಷ್ಟ್ರ, ಉಲ್ಕಾಮುಖ, ಕುಂತಲೋಮ

ಮಣಿಕ ಮಲ್ಲರ ನಾಶದಿಂದ ಋಷಿಗಳಿಗೆ ಪರಮಾನಂದವಾಯಿತು. ಅವರು ಮಾರ್ತಾಂಡಭೈರವನನ್ನು ನಾನಾ ವಿಧವಾಗಿ ಸ್ತುತಿಸಿ ಕೊಂಡಾಡಿದರು. ಶಿವನು ಅವರಿಗೆ ಅಭಯವಿತ್ತು ಕೈಲಾಸಕ್ಕೆ ಹೋದನು.

ಮುಂದೆ ಕಲಿಯುಗ ಬರಲು ಋಷಿಗಳು ಮತ್ತೆ ಪರಮಾತ್ಮನನ್ನು ಪ್ರಾರ್ಥಿಸಿ, ಈ ಯುಗದಲ್ಲಿ ನಾವು ನಿತ್ಯ ತಾಪತ್ರಯಗಳನ್ನು ಅನುಭವಿಸಬೇಕಾಗುತ್ತದೆ. ಆದ್ದರಿಂದ ನೀನು ಯಾವಗಲು ನಮ್ಮೊಂದಿಗೆ ಇರಬೇಕು, ಎಂದು ಬೇಡಿಕೊಂಡರು. ಶಿವನು ಅದಕ್ಕೆ ಒಪ್ಪಿ ಮಲ್ಲಾಸುರನನ್ನು ಸಂಹರಿಸಿದ ಮಣಿಚೂಲ ಪರ್ವತದ ಬಳಿ ಕರಿಯಾಲದ ಕೆಳಗಿನ ಹುತ್ತದಲ್ಲಿ ಲಿಂಗರೂಪದಲ್ಲಿ ಪ್ರಕಟನಾದನು[6]. (ಚಿತ್ರ – ೧) ಮುನಿಗಳು ಅದೇ ಹುತ್ತದ ಮಣ್ಣಿನಿಂದ ಶಿವನ ಭೋಗಮೂರ್ತಿಯನ್ನು ರಚಿಸಿ, ಪುಷ್ಪ, ಭಂಡಾರ ಮೊದಲಾದ ವಸ್ತುಗಳಿಂದ ಪೂಜಿಸಿ ಕೃತಾರ್ಥರಾದರು. (ಚಿತ್ರ – ೨) ಅಂದಿನಿಂದ ಭೂಲೋಕದ ಜನರು ಮೈಲಾರದಲ್ಲಿರುವ ಸ್ವಯಂಭೂ ಲಿಂಗಸ್ವರೂಪಿ ಮಲ್ಲಾರಿಯನ್ನು ಪ್ರಾರ್ಥಿಸಿ ತಮ್ಮ ಇಷ್ಟಸಿದ್ಧಿ ಮಾಡಿಕೊಳ್ಳತೊಡಗಿದರು[7].

ಮಲ್ಲಾರಿ ಮಹಾತ್ಮ್ಯಂ ಕೃತಿಯು ಮರಾಠಿ ಭಾಷೆಯಲ್ಲಿ ಹೆಚ್ಚು ಅನುವಾದಗೊಂಡಿದೆ. ಮೊದಲ ಬಾರಿಗೆ ಸಿದ್ಧಕಲಾ ಕೇಸರಿ ಎಂಬ ಕವಿ ಕ್ರಿ. ಶ. ೧೫೮೫ರಲ್ಲಿ ಓವೀ ಛಂದಸ್ಸಿನಲ್ಲಿ ಅನುವಾದಿಸಿದ್ದಾನೆ. ನಂತರದಲ್ಲಿ ಗಂಗಾಧರನೆಂಬ ಕವಿಯು ೧೮೨೫ರಲ್ಲಿ ಶ್ರೀಮಾರ್ತಾಂಡ ವಿಜಯ ಎಂಬ ಹೆಸರಿನಲ್ಲಿ ಅನುವಾದಿಸಿದ್ದಾನೆ.

ಕನ್ನಡದಲ್ಲಿ ಶ್ರೀ ಮಲ್ಲಾರಿ ಮಹಾತ್ಮ್ಯೆ ಎಂಬ ಹೆಸರಿನಲ್ಲಿ ಶ್ರೀ ವೈ. ಜಿ. ಕುಲಕರ್ಣಿ ಯವರು ಇದನ್ನು ಅನುವಾದಿಸಿದರು. ಅನುವಾದಗೊಂಡ ಸುಮಾರು ೭೦ ವರ್ಷಗಳ ಬಳಿಕ ಈ ಕೃತಿಯನ್ನು ಕ್ರಿ. ಶ. ೧೯೯೮ರಲ್ಲಿ ದಾವಣಗೆರೆಯ ಶ್ರೀ ಗೋಪಾಲರಾವ್ ಕೃಷ್ಣಾಜಿ ನಾಡಿಗೇರ ಎಂಬುವವರು ಪ್ರಕಟಿಸಿದರು. ಈ ಕೃತಿಯಲ್ಲಿ ವಿಶೇಷವಾಗಿ ಸಂಸ್ಕೃತ ಶ್ಲೋಕಗಳ ಕನ್ನಡ ಭಾವಾನುವಾದವನ್ನು ಶ್ಲೋಕಗಳ ಅನುಕ್ರಮಣಿಕೆಯ ಆಧಾರದಲ್ಲಿಯೇ ನೀಡಲಾಗಿದೆ. ಕೊನೆಯಲ್ಲಿ ಮಲ್ಲಾರಿಯ ಪ್ರಸಾದ ವಾಕ್ಯವನ್ನು ಒಳಗೊಂಡಂತೆ ಬ್ರಹ್ಮಾಂಡ ಪುರಾಣದ ಭಾಗವೆಂಬಂತೆ – "ಇತಿ ಶ್ರೀ ಬ್ರಹ್ಮಾಂಡ ಪುರಾಣೇ ಕ್ಷೇತ್ರ ಖಂಡೇ ಶ್ರೀಮನ್ ಮಲ್ಲಾರಿ ಮಹಾತ್ಮೆ ಸಂಪೂರ್ಣಂ" ಎಂದು ಮುಕ್ತಾಯಗೊಂಡಿದೆ.

ಇದಲ್ಲದೇ ವಿರೂಪಾಕ್ಷ ಸೂರಿ ಎಂಬ ಕವಿ ೧೯ನೆಯ ಶತಮಾನದ ಪೂರ್ವಾರ್ಧದಲ್ಲಿ ವಾರ್ಧಕ ಷಟ್ಪದಿಯಲ್ಲಿ ಮಲ್ಲಾರಿ ಮಹಾತ್ಮ್ಯಂ ಕೃತಿಯನ್ನು ಅನುವಾದಿಸಿದ್ದಾನೆ. ಈ ಕೃತಿಯಲ್ಲಿ ವಿಶೇಷವಾಗಿ ಕರ್ನಾಟಕದ ದೇವರಗುಡ್ಡ ಹಾಗೂ ಮೈಲಾರ ಕ್ಷೇತ್ರಗಳನ್ನು ಪ್ರಮುಖವಾಗಿರಿಸಿರುವುದು ಕಂಡುಬರುತ್ತದೆ.

ಕನ್ನಡದಲ್ಲಿ ರಚಿತವಾದ ಇನ್ನೊಂದು ಕೃತಿ ಮ್ಹಾಲಸಾ ಮಾರ್ತಾಂಡ ಬೈರವ ಪುರಾಣಂ – ಎಂಬುದು. ಸುಮಾರು ಎರಡು ಸಾವಿರದ ಇಸವಿಯಲ್ಲಿ ಶ್ರೀ ನಿಂಗಭಟ್ ಜೋಷಿ ಅವರಿಂದ ಸರಳ ಭಾಮಿನೀ ಷಟ್ಪದಿಯಲ್ಲಿ ಈ ಕೃತಿಯ ರಚನೆಯಾಗಿದೆ. ಈ ಗ್ರಂಥದಲ್ಲಿ ಒಟ್ಟು ಇಪ್ಪತ್ತೈದು ಸಂಧಿಗಳನ್ನು ಮಾಡಿಕೊಳ್ಳಲಾಗಿದ್ದು, ಮಲ್ಲರಿ ಮಹಾತ್ಮ್ಯೆಯನ್ನು ಅನುಸರಿಸಿರುವುದು ಕಂಡುಬರುತ್ತದೆ. ಕೃತಿಯ ಭಾಷೆ ಹಾಗೂ ಶೈಲಿಯು ಸರಳವಾಗಿದ್ದು ಸಾಮಾನ್ಯರೂ ಸಹ ಓದಿ ಅರ್ಥಮಾಡಿಕೊಳ್ಳುವಂತಿದೆ. ಅಲ್ಲಲ್ಲಿ ಕಠಿಣ ಪದಗಳಿಗೆ ಅರ್ಥಗಳನ್ನು ನೀಡಲಾಗಿದೆ. ಕೃತಿಗೆ ಸಂಬಂಧಿಸಿದ ರೇಖಾ ಚಿತ್ರಗಳನ್ನು ಅಳವಡಿಸಿರುವುದು ಈ ಕೃತಿಯ ವೈಶಿಷ್ಟ್ಯ.

## ೮.೨ ಐತಿಹ್ಯ

ವಾಸ್ತವವಾಗಿ ನಡೆದಿದೆ ಎಂದು ನಂಬಿಕೊಂಡು ಬಂದಿರುವ ಅಸಾಮಾನ್ಯ ಘಟನೆಯೊಂದರ ಕಥೆಯೇ ಐತಿಹ್ಯವೆನಿಸುತ್ತದೆ. ಪ್ರಾಚೀನ ಕಾಲದ ಯಾವುದೋ ಒಂದು ಸಣ್ಣ ಚಾರಿತ್ರಿಕ ಘಟನೆಯ ಸುತ್ತ ಅದ್ಭುತವಾದ ಸನ್ನಿವೇಶಗಳು ಬೆಳೆದು ತಲೆಮಾರುಗಳ ಮೂಲಕ ಹರಿಯುವಾಗ ಕಥೆಯಾಗಿ ರೂಪುಗೊಂಡರೆ ಅದನ್ನು ಐತಿಹ್ಯ ಎನ್ನುವರು.

ಐತಿಹ್ಯಗಳು ಪ್ರಾರಂಭದಲ್ಲಿ ಸಂಕ್ಷಿಪ್ತವೂ, ಸರಳವೂ ಆಗಿದ್ದು, ಕ್ರಮೇಣ ಉತ್ಪ್ರೇಕ್ಷಿತ ವಿವರಣೆಗಳಿಂದ ಕೂಡಿ, ದೀರ್ಘವೂ, ಕಾಲ್ಪನಿಕವೂ ಆಗುತ್ತವೆ. ಇವು ಬಹುಮಟ್ಟಿಗೆ ಪುರಾಣ ಕಥೆಗಳ ಸಂಪರ್ಕವನ್ನು ಪಡೆದವು ಅಥವಾ ಅತಿಮಾನುಷ ವ್ಯಕ್ತಿಗಳನ್ನು ಕುರಿತವಾಗಿರುತ್ತವೆ.

ಮೈಲಾರನಿಗೆ ಸಂಬಂಧಿಸಿದಂತೆ ಪುರಾಣಕ್ಕೆ ಮೊದಲ ಸ್ಥಾನವಿದೆಯಾದರೂ ಐತಿಹ್ಯಗಳಿಗೇನೂ ಕೊರತೆಯಿಲ್ಲ. ಪುರಾಣವು ವಿಶೇಷವಾಗಿ ಮಣಿಕ ಮಲ್ಲರ ಮರ್ದನಕ್ಕೆ

ಮೀಸಲಾಗಿದ್ದರೆ, ಐತಿಹ್ಯಗಳು ಮೈಲಾರನ ಲೀಲೆಗಳು, ಪವಾಡಗಳು, ಮದುವೆ, ವಿವಾಹೇತರ ಸಂಬಂಧಗಳಿಗೆ ಮೀಸಲಾಗಿರುವುದನ್ನು ನಾವು ಕಾಣಬಹುದು. ಮೈಲಾರ ದೇವರ ಸಂಪ್ರದಾಯದಲ್ಲಿ ಐದು ಐತಿಹ್ಯಗಳು ಹೆಚ್ಚು ಪ್ರಚಲಿತವಿವೆ.[8]

೧. ಗಂಗಿ ಮಾಳಮ್ಮನ ಜೊತೆ ಮದುವೆ

೨. ಕೋಮಾಲಿ ಕಥೆ

೩. ಕುರುಬತೆವ್ವನ ಕಥೆ

೪. ರಡ್ಡೇರ ನೀಲವ್ವನ ಕಥೆ

೫. ದೋಣಿ ಕಥೆ

**೧. ಗಂಗಿ ಮಾಳಮ್ಮನ ಜೊತೆ ಮದುವೆ :**

ಜನಸಾಮಾನ್ಯರಲ್ಲಿ ನೆಲೆಯೂರಿರುವಂತೆ ಮೈಲಾರನಿಗೆ ಇಬ್ಬರು ಹೆಂಡಿರು. ಒಬ್ಬಳು ಗಂಗಿಮಾಳವ್ವ ಹಾಗೂ ಇನ್ನೊಬ್ಬಳು ಅಡವೀ ಕೋಮಾಲಿ. ಇವರಿಬ್ಬರ ಜೊತೆಗಿನ ವಿವಾಹಕ್ಕೆ ಸಂಬಂಧಿಸಿದಂತೆ ಅನೇಕ ನಂಬಿಕೆಗಳಿವೆ. ಈ ನಂಬಿಕೆಗಳು ಕಾವ್ಯಗಳ, ಕಥೆಗಳ ರೂಪದಲ್ಲಿ ಹರಿದು ಬಂದಿವೆ. ಅವುಗಳಲ್ಲಿ ತಿರುಪತಿ ತಿಮ್ಮಪ್ಪನ ಉಲ್ಲೇಖ, ಮಲ್ಲನ ಗೌಡನ ಉಲ್ಲೇಖಗಳು ವಿಶೇಷವಾಗಿ ಕಂಡುಬರುತ್ತವೆ. ಈ ರೀತಿಯ ಐತಿಹ್ಯಗಳಿಗೆ ವಿಶೇಷ ಮಹತ್ವವಿಲ್ಲವಾದರೂ ಇವು ಜನರ ಮನಸ್ಸಿನಲ್ಲಿ ಗಟ್ಟಿಯಾಗಿ ನೆಲೆಯೂರಿ ನಿಂತಿವೆ.

ಮೈಲಾರನಿಗೆ ಒಮ್ಮೆ ಮದುವೆಯಾಗಬೇಕೆಂಬ ಬಯಕೆಯುಂಟಾಗಿ ಹೆಣ್ಣು ಹುಡುಕಲು ಹೊರಟನು. ಆಗ ತಿಮ್ಮಪ್ಪನಿಗೆ ಮದುವೆ ವಯಸ್ಸಿನ ಹೆಣ್ಣುಮಕ್ಕಳಿದ್ದಾರೆ ಎಂಬ ಸಮಾಚಾರ ತಿಳಿದು ತಿರುಪತಿಗೆ ಹೋಗಿ ಅಲ್ಲಿ ತಿಮ್ಮಪ್ಪನ ಅರಮನೆಯ ಮುಂದೆ ಬಂದು ಗಂಟೆ ಬಾರಿಸಿ, ಡಮರುಗ ನುಡಿಸಿ ಭಿಕ್ಷೆ ಕೇಳಿದನು. ಆಗ ತಿಮ್ಮಪ್ಪನ ಹಿರಿಯ ಮಗಳು ಗಂಗಮ್ಮ ಗೊರನಿಗೆ ಭಿಕ್ಷೆ ನೀಡಲು ಮೊರದಲ್ಲಿ ಮುತ್ತು ರತ್ನಗಳನ್ನು ತುಂಬಿಕೊಂಡು ಹೊರಗೆ ಬಂದಳು. ಅವಳ ಚಲುವಿಕೆಯನ್ನು ಕಂಡು ಮೈಲಾರ ಅವಳನ್ನೇ ಮದುವೆಯಾಗ ನಿರ್ಧರಿಸಿ ಅವಳ ಕೈಯ್ಯನ್ನು ಹಿಡಿದ. ಅವಳು ಗಾಬರಿಯಾಗಿ ಜೋರಾಗಿ ಕಿರುಚಿದಳು.

ಮಗಳು ಚೀರಿದ್ದನ್ನು ಕಂಡು ಕೇಳಿದ ತಿಮ್ಮಪ್ಪ ಹೊರಗೆ ಬಂದು, ಯಾಕೆ ನನ್ನ ಮಗಳ ಕೈ ಹಿಡಿದಿರುವೆ ಎಂದು ಕೇಳಿದನು. ಆಗ ಮೈಲಾರಪ್ಪ ಇವಳು ನನಗೆ ಹಿಡಿಸಿದ್ದಾಳೆ,

ಇವಳನ್ನು ನನಗೆ ಕೊಟ್ಟು ಮದುವೆ ಮಾಡು ಎಂದು ಕೇಳಿದ. ಇವನ ಅವತಾರವನ್ನು ಕಂಡ ತಿಮ್ಮಪ್ಪ ಮದುವೆ ಮಾಡಲು ಇಷ್ಟಪಡಲಿಲ್ಲ. ಆದರೆ ಇವನು ಮಾಯದ ಗೊರವ, ಶಪಿಸಿಬಿಟ್ಟಾನು ಎಂದು ಹೆದರಿ ಏಳು ಕೋಟಿ ಹಣವನ್ನು ತೆರವು ರೂಪದಲ್ಲಿ ನೀಡಿದಲ್ಲಿ ನನ್ನ ಮಗಳನ್ನು ನಿನಗೆ ಕೊಡುತ್ತೆನೆ ಎಂದು ಹೇಳಿದ.

ಅದಕ್ಕೆ ಮೈಲಾರ ನನ್ನ ಊರು ಇಲ್ಲಿಂದ ಸುಮಾರು ದೂರ. ಅಲ್ಲಿಗೆ ಹೋಗಿ ಬರುವಷ್ಟರಲ್ಲಿ ಆಷಾಢ ಮಾಸ ಬಂದಿರುತ್ತದೆ. ಆಷಾಢದಲ್ಲಿ ಮದುವೆಗಳಿರುವುದಿಲ್ಲ. ನನ್ನೂರಿಗೆ ಹೋದ ತಕ್ಷಣ ನಿನ್ನ ಹಣವನ್ನು ಬಡ್ಡಿ ಸಮೇತ ಕೊಡುತ್ತೇನೆ ಎಂದು ಹೇಳಿದ. ಬಡ್ಡಿಯ ಆಸೆಗೆ ಒಪ್ಪಿದ ತಿಮ್ಮಪ್ಪ ಮದುವೆಗೆ ಒಪ್ಪಿದ. ಮುಂದೆ ಮದುವೆಯ ಖರ್ಚಿಗೆ ಹಣವಿಲ್ಲದಾಗ ಮೈಲಾರ ತಿಮ್ಮಪ್ಪನಿಗೆ ಮೊದಲಿನಂತೆಯೇ ಹೇಳಿದ. ತಿಮ್ಮಪ್ಪ ಆ ಖರ್ಚನ್ನೂ ತಾನೇ ವಹಿಸಿಕೊಂಡು ಅದ್ದೂರಿಯಾಗಿ ಮದುವೆ ಮಾಡಿದ. ಬಳಿಕ ನಿಬ್ಬಣ ಹೊರಟಿತು. ಅದರ ಉಪಚಾರಕ್ಕೂ ತಿಮ್ಮಪ್ಪನೇ ಹಣ ಖರ್ಚು ಮಾಡಿದ. ಕೊನೆಗೆ ತಿಮ್ಮಪ್ಪನ ಕಡೆಯವರೇ ಮೈಲಾರದವರೆಗೂ ಬಂದು ತಾವೇ ಆತಿಥೇಯರಾಗಿ, ಅತಿಥಿಗಳೂ ಆಗಿ ಉಪಚಾರಪಡೆದರು

ಮದುವೆಯ ಸಂಭ್ರಮವೆಲ್ಲ ಮುಗಿದ ಬಳಿಕ ತಿಮ್ಮಪ್ಪ ತನ್ನ ಊರಿಗೆ ಹೊರಡಲು ಸಿದ್ಧನಾದ. ಆದರೂ ಮೈಲಾರ ತೆರದ ಹಣ ಹಾಗೂ ಮದುವೆಯ ಖರ್ಚಿನ ಹಣವನ್ನು ಕೊಡಲಿಲ್ಲ. ತಿಮ್ಮಪ್ಪ ಆ ಹಣವನ್ನು ಕೇಳಿದಾಗ ಮೈಲಾರ, ನನ್ನ ಬಳಿ ಹಣವಿಲ್ಲ. ಭಾರತ ಹುಣ್ಣಿಮೆಗೆ ನನ್ನ ಜಾತ್ರೆಯಿದೆ. ಅಂದಿನ ಕಾಣಿಕೆಯ ಹಣವೆಲ್ಲ ನಿನ್ನದೇ ಎಂದು ಹೇಳಿದ. ತಿಮ್ಮಪ್ಪ ಅದಕ್ಕೆ ಒಪ್ಪಿದ. ಆದರೆ ಜಾತ್ರೆಯಂದು ಮೈಲಾರ ತನ್ನ ಮಾಯೆಯಿಂದ ಕಾಣಿಕೆ ಸಿಗದಂತೆ ಮಾಡಿದ. ತನ್ನ ಹಣ ಸಿಗದ ತಿಮ್ಮಪ್ಪ ಮೈಲಾರನೊಂದಿಗೆ ಜಗಳಕ್ಕೆ ನಿಂತ. ಜನರೆಲ್ಲ ಸೇರಿ ನ್ಯಾಯ ತೀರ್ಮಾನ ಮಾಡಲು ಮುಂದಾದರು. ಅವರ ತೀರ್ಮಾನದಂತೆ ಮೈಲಾರನು ತಮ್ಮ ಗುಡಿಯ ಸುತ್ತಲಿನ ಐನೂರು ಹುಣಸೆಮರಗಳ ಒಂದು ವರ್ಷದ ಫಸಲನ್ನು ತಿಮ್ಮಪ್ಪನಿಗೆ ಬಿಟ್ಟುಕೊಟ್ಟ. ಆದರೆ ಹುಣಸೆ ಹಣ್ಣು ಬಿಡುವ ಸಮಯಕ್ಕೆ ಸರಿಯಾಗಿ ಮೈಲಾರ ತನ್ನ ಮಾಯೆಯಿಂದ ಆ ಹಣ್ಣುಗಳೂ ಸಹ ತಿಮ್ಮಪ್ಪನಿಗೆ ದಕ್ಕದಂತೆ ಮಾಡಿದ.

ಇದರಿಂದ ಕೋಪಗೊಂಡ ತಿಮ್ಮಪ್ಪ ನನ್ನ ಏಳು ಕೋಟಿ ಹಣ ತಿಂದು ಹಾಕಿದೆ, ಇನ್ನು ಮುಂದೆ ನೀನು ಏಳು ಕೋಟಿ, ಏಳು ಕೋಟಿ ಎಂದು ಹೇಳುತ್ತ ಹೋಗು. ನಿನಗೆ ಎಂದಿಗೂ ಬಡತನ ತಪ್ಪದಿರಲಿ ಎಂದು ಶಾಪ ಹಾಕಿದ[9].

**೨. ಕೋಮಾಲಿ ಕಥೆ**

ಅಚನೂರು[10] ಪಟ್ಟಣದಲ್ಲಿ ಮಲ್ಲನಗೌಡನೆಂಬ ಅರಸನಿದ್ದ. ಅವನಿಗೆ ಹಲವು ಜನ ತಮ್ಮಂದಿರು ಹಾಗೂ ಒಬ್ಬಳೇ ತಂಗಿ. ಅವಳ ಹೆಸರು ಮಲ್ಲವ್ವ. ಅವರು ಬಹಳ ಮಡಿವಂತರು. ಮನೆಯಲ್ಲಿ ನಿತ್ಯವೂ ಶಿವಪೂಜೆ. ಮಲ್ಲನಗೌಡ ಬಹಳ ಶ್ರೀಮಂತನಿದ್ದ. ಅವನಿಗೆ ಅಹಂಕಾರವೂ ಇತ್ತು. ಗೊರವ, ಜೋಗತಿ, ಜೋಗಪ್ಪರನ್ನು ಕಂಡರೆ ಅವನಿಗೆ ಬಹಳ ಅಸಡ್ಡೆ.

ಅವನ ಮನೆಯಲ್ಲಿ ಒಂದು ಪಂಚಕಲ್ಯಾಣಿ ಆಕಳು ಇತ್ತು. ಅದರಿಂದಾಗಿಯೇ ಮಲ್ಲನಗೌಡನಿಗೆ ಸಂಪತ್ತು ದೊರೆತಿತ್ತು. ಆದರೆ ಆ ಹಸುವಿಗೆ ಸಂತಾನವಿರಲಿಲ್ಲ. ಆ ಕೊರಗಿನಿಂದ ಆ ಹಸು ಕರಿಯಾಲದ ಬುಡದಲ್ಲಿದ್ದ ಹುತ್ತದಲ್ಲಿನ ಶಿವನಲ್ಲಿ ಪ್ರಾರ್ಥಿಸಿಕೊಂಡಿತು. ಶಿವನು ಅವಳಿಗೆ ಮಗುವನ್ನು ಕೊಡುವುದಾಗಿ ಹೇಳಿ – ನೀನು ಇಂದಿನಿಂದ ಹೊಡೆ ಹುಲ್ಲು ಮೇಯಬೇಕು, ಮಡಿನೀರು ಮಾತ್ರ ಕುಡಿಯಬೇಕು. ಅಂದರೆ ನಿನಗೆ ಒಬ್ಬಳು ಮಗಳು ಹುಟ್ಟುತ್ತಾಳೆ ಅವಳಿಗೆ ಅಡವಿ ಕೋಮಾಲಿ ಎಂದು ಹೆಸರಿಡಬೇಕು. ಅವಳು ದೊಡ್ಡವಳಾದ ಮೇಲೆ ಕೋರಿ ಗೊರವನಿಗೆ ಕೊಟ್ಟು ಮದುವೆ ಮಾಡಬೇಕು ಎಂದು ಶರತ್ತು ಹಾಕಿದ. ಹಸು ಅದಕ್ಕೆ ಒಪ್ಪಿಕೊಂಡಿತು.

ಶಿವನ ವರಪ್ರಸಾದದಿಂದ ಆ ಹಸುವಿನಲ್ಲಿ ಒಂದು ಹೆಣ್ಣು ಶಿಶು ಜನಿಸಿತು. ಎಲ್ಲರಿಗೂ ಇದನ್ನು ಕಂಡು ಆಶ್ಚರ್ಯವಾಯಿತು. ಮಲ್ಲನ ಗೌಡ ಜೋಯಿಸರನ್ನು ಕರೆಸಿ, ವಿಚಾರ ತಿಳಿಯಬೇಕೆಂದು ಬಯಸಿದ. ಆ ಸಮಯದಲ್ಲಿ ಮೈಲಾರನೆ ದೋಸಿಗನ ವೇಷದಲ್ಲಿ ಬಂದು ಇವಳು ಅಡವಿಯಲ್ಲಿ ಹುಟ್ಟಿದ್ದರಿಂದ ಇವಳಿಗೆ ಅಡವಿ ಕೋಮಾಲಿ ಎಂದು ಹೆಸರಿಡಿ. ಇವಳು ದೊಡ್ಡವಳಾದ ಮೇಲೆ ಇವಳನ್ನು ಕೋರಿಗೊರವನಿಗೆ ಕೊಟ್ಟು ಮದುವೆಮಾಡಿ, ಹಾಗೆ ಮಾಡದೇ ಬೇರೆಯವರಿಗೆ ಕೊಟ್ಟರೆ ಮಾಡಿಕೊಂಡ ಗಂಡನ ಬೆನ್ನಿಗೆ "ಬ್ಯಾತಾಳದ ಹುಣ್ಣು ಹೊಡೆಯುತ್ತದೆ, ಕೈಗೆ ಗಿಣ್ಣಿಹುಣ್ಣು"[11] ಹುಟ್ಟುತ್ತದೆ.

ಗೊರವನಿಗೆ ಕೊಡದಿದ್ದರೆ ಅವನು ಇವಳನ್ನು ಕದ್ದಾದರೂ ಒಯ್ಯುತ್ತಾನೆ ಎಂದು ತಿಳಿಸಿದ. ಗೊರವರನ್ನೇ ತಿರಸ್ಕರಿಸುವ ಗೌಡ ಈ ಮಾತನ್ನು ಒಪ್ಪಲಿಲ್ಲ. ಗೊರವನಿಗೆ ನಾನು ಹೆಣ್ಣು ಕೊಡುವುದುಂಟೇ? ಅದು ಸಾಧ್ಯವಿಲ್ಲ ಎಂದ. ಮೈಲಾರಪ್ಪ ನಾನು ಹೊತ್ತಿಗೆಯಲ್ಲಿ ಇದ್ದುದನ್ನು ಹೇಳಿದ್ದೇನೆ ಎಂದು ಅಲ್ಲಿಂದ ಹೊರಟನು.

ಮೈಲಾರನ ತಂಗಿ ಎಲ್ಲಮ್ಮ ಊರಾಡಲು ಅಚನೂರಿಗೆ ಬಂದಾಗ ಮಲ್ಲನಗೌಡ ಅವಳ ಪಡ್ಡಲಿಗೆಯನ್ನು ಸುಡಿಸಿ, ಅವಳಿಗೆ ಹುಣಸೆ ಬರಲಿನಿಂದ ಹೊಡೆಸಿದ. ಈ ಸಮಾಚಾರವನ್ನು ಕೇಳಿ ಮೈಲಾರನಿಗೆ ಕೋಪ ಬಂದಿತು. ಅವನು ದತ್ತೂರಿ ಬೀಜ, ಜವಬೂದಿಗಳನ್ನು ಸೆರಗಿನಲ್ಲಿ ಕಟ್ಟಿಕೊಂಡು ಕುದುರೆಯನ್ನೇರಿ, ಮಲ್ಲನಗೌಡನ ಸೊಕ್ಕು ಮುರಿಯಲು ಅಚನೂರಿಗೆ ಹೊರಟ.

ಅಲ್ಲಿ ಮಲ್ಲನಗೌಡನ ಮನೆಯ ಮುಂದೆ ನಿಂತು ಭಿಕ್ಷೆ ಬೇಡಿದ. ಮನೆಯಲ್ಲಿ ಯಾರೂ ಇರದ್ದರಿಂದ ಕೋಮಾಲಿ ಭಿಕ್ಷೆ ನೀಡಲು ಬಂದಳು. ಅವಳು ಅಕ್ಕಿ, ಇತರೆ ಕಾಳುಕಡಿ ಮುತ್ತು ರತ್ನಗಳನ್ನು ಭಿಕ್ಷೆ ನೀಡಲು ತಂದರೂ ಅದನ್ನು ಪಡೆಯದ ಮೈಲಾರ ನಾನು ಹರಕೆಯ ಗೊರವ. ನಿಮ್ಮ ಮನೆಯಲ್ಲಿ ನಾನು ಹೆಣ್ಣಿನ ಭಿಕ್ಷೆಗೆ ಬಂದಿದ್ದೇನೆ. ನಿಮ್ಮ ಮನೆಯೊಳಗೆ ನನ್ನನ್ನು ಕರೆದು ಪೂಜೆಮಾಡಿ, ನನ್ನ ಹರಕೆ ಮುಟ್ಟಿಸಬೇಕು ಎಂದು ಹೇಳಿದ. ಇದನ್ನು ಕೇಳಿದ ಕೋಮಾಲಿ ಹೆದರಿ ತನ್ನ ಅತ್ತೆ ಮಲ್ಲಮ್ಮನಿಗೆ ಈ ವಿಷಯವನ್ನು ತಿಳಿಸಿದಳು. ಅವಳು ಕೋಪದಿಂದ ಮೈಲಾರನಿಗೆ ಹೊಡೆಯಲು ಬಂದಾಗ ಅವನು ಮೂರು ಹಿಡಿ ಭಂಡಾರ ತೂರಿ – ನಿನ್ನ ಸೊಸೆಯನ್ನು ಗೊರವನೊಬ್ಬ ಕದ್ದೊಯ್ಯಲಿ ಎಂದು ಶಾಪ ನೀಡಿದ.

ಮೈಲಾರ ಹೊರಹೋದ ಬಳಿಕ ಮಲ್ಲವ್ವನಿಗೆ ಭೂತಚೇಷ್ಟೆ ಆರಂಭವಾಯಿತು. ಮಲ್ಲನಗೌಡ ಬಂದು ವಿಚಾರಿಸಿದಾಗ ಗೊರವ ಬಂದಿದ್ದ ಸಮಾಚಾರ ತಿಳಿಯಿತು. ಅವನೇ ಏನೋ ಮಾಟ ಮಾಡಿಸಿದ್ದಾನೆ ಎಂದು ತಿಳಿದು, ಆ ಗೊರವನನ್ನು ಹುಡುಕಲು ಜನರನ್ನು ಕಳಿಸಿದ. ಆದರೆ ಅವನು ಎಲ್ಲಿಯೂ ಸಿಗಲಿಲ್ಲ.

ಬಳಿಕ ಮಲ್ಲನಗೌಡ ಪೂಜೆ ಮಾಡಬೇಕು ಎಂದು ತೀರ್ಮಾನಿಸಿ, ಜಂಗಮರನ್ನು ಕರೆತರಲು ಮಲ್ಲವ್ವನನ್ನು ಕಳುಹಿಸಿದರು. ಅವಳು ದಾರಿಯಲ್ಲಿ ಹುಡುಕುತ್ತ ಹೊರಟಾಗ ಮಲ್ಲಯ್ಯ ಜಂಗಮನ ವೇಷಧರಿಸಿ ನಿಂತಿದ್ದ. ಮಲ್ಲವ್ವ ಇವನನ್ನೇ ಕರೆದುಕೊಂಡು

ಬಂದು ಪೂಜೆ ಮಾಡಿ, ಊಟ ಹಾಕಿ, ತನಗೆ ಬಂದ ತೊಂದರೆಯನ್ನು ನಿವಾರಿಸಬೇಕು ಎಂದು ಕೇಳಿಕೊಂಡಳು. ಅವನು ಕೋಮಾಲಿಯನ್ನು ಗೊರವನಿಗೆ ಕೊಟ್ಟು ಮದುವೆ ಮಾಡಬೇಕು, ಇಲ್ಲವೇ ಅವಳನ್ನು ಕಾಡಿಗೆ ಒಯ್ದು ಬಿಡಬೇಕು ಎಂದು ಹೇಳಿ ಅಲ್ಲಿಂದ ಹೊರಟು ಹೋದನು.

ಇಷ್ಟಲ್ಲ ಆದರೂ ಬುದ್ದಿಬರದ ಮಲ್ಲನಗೌಡ ಅಚನೂರಿನಲ್ಲಿ ಕೋಮಾಲಿಯನ್ನು ಸೋಮನಗೌಡನಿಗೆ ಕೊಟ್ಟು ಮದುವೆ ಮಾಡಲು ಸಿದ್ಧತೆ ನಡೆಸಿದರು. ಮಲ್ಲನಗೌಡ ಎಲ್ಲ ಕಡೆ ಕಾವಲು ಹಾಕಿದ. ಆದರೆ ಮಲ್ಲಯ್ಯ ಜೋಯಿಸನ ವೇಷದಲ್ಲಿ ಬಂದು ಅವರಿಗೆ ಕಾವಲುಗಾರರಿಗೆಲ್ಲ ಗಾಂಜಾ ನೀಡಿ ಅವರಿಗೆ ಅಮಲೇರುವಂತೆ ಮಾಡಿ ಅಲ್ಲಿಂದ ಊರೊಳಕ್ಕೆ ಬಂದು ಮಲ್ಲನಗೌಡನಿಗೆ ತಿಳಿಹೇಳಿದ. ಆದರೆ ಯಾರೂ ಅವನ ಮಾತು ಕೇಳಲಿಲ್ಲ. ಮದುವೆ ಮುಗಿದುಹೋಯಿತು. ಸೋಮನಗೌಡ ಕೋಮಾಲಿಯನ್ನು ಮುಟ್ಟ ಹೋದ ತಕ್ಷಣ ಗೊರವಯ್ಯ ಹೇಳಿದ್ದ ಭವಿಷ್ಯ ನಿಜವಾಯಿತು. ಅವನ ಬೆನ್ನಿಗೆ ಬ್ಯಾತಾಳದ ಹುಣ್ಣು ಹುಟ್ಟಿತು. ಕೈಗೆ ಗಿಣ್ಣೆ ಹುಣ್ಣು ಹುಟ್ಟಿದವು. ಇದರಿಂದ ಕೋಪಗೊಂಡ ಸೋಮನಗೌಡ ಕೋಮಾಲಿಯನ್ನು ಕರೆದುಕೊಂಡು ಹೋಗುವಂತೆ ಮಲ್ಲನಗೌಡನಿಗೆ ಹೇಳಿದ. ಅದಕ್ಕೆ ಮಲ್ಲನಗೌಡ ಕೊಟ್ಟ ಹೆಣ್ಣು ಕುಲಕ್ಕೆ ಹೊರಗು, ನಿನ್ನ ಹೆಂಡತಿಯನ್ನು ನಾನೇಕೆ ಕರೆದುಕೊಂಡು ಹೋಗಲಿ ಎಂದು ಹೇಳಿದ. ಸೋಮನಗೌಡ ಕೋಪದಿಂದ ಕೋಮಾಲಿಯನ್ನು ಕಾಡಿಗೆ ಒಯ್ದು ಕೊಂದುಹಾಕುವಂತೆ ತನ್ನ ಭಂಟರಿಗೆ ಸೂಚಿಸಿದ. ಭಂಟರು ಅವಳ ಕಣ್ಣುಕಟ್ಟಿ ಕಾಡಿಗೆ ಎಳೆದೊಯ್ದರು. ಆದರೆ ಅವರಿಗೆ ಕೋಮಾಲಿಯನ್ನು ಕೊಲ್ಲುವ ಮನಸ್ಸಾಗಲಿಲ್ಲ. ಅವರು ಕೋಮಾಲಿಯನ್ನು ಅಲ್ಲಿಯೇ ಬಿಟ್ಟು ಹೊನ್ನಿಯ ಮರವೊಂದನ್ನು ಕತ್ತರಿಸಿ ಅದರ ಕೆಂಪನೆಯ ರಸವನ್ನು ಕತ್ತಿಗಳಿಗೆ ಸವರಿಕೊಂಡು ಹೋಗಿ ಗೌಡನಿಗೆ ತೋರಿಸಿದರು.

ಈಗ ಮತ್ತೆ ಮೈಲಾರ ಅವಳ ಮುಂದೆ ಕಾಣಿಸಿಕೊಂಡು, ತನ್ನ ಮಾತನ್ನು ಮೀರುವುದಿಲ್ಲವಾದರೆ ಸೋಮನಗೌಡನ ಜೊತೆ ಸೇರಿಸುವುದಾಗಿ ಹೇಳಿದ. ಕೋಮಾಲಿ ಸಂತೋಷದಿಂದ ಗೊರವ ಹೇಳಿದ್ದಕ್ಕೆಲ್ಲ ಒಪ್ಪಿ, ಆಣೆ ಮಾಡಿದಳು. ಗೊರವ ಅವಳನ್ನು ಸೋಮನಗೌಡನ ಬಳಿ ಕರೆದೊಯ್ದು – ತಪ್ಪದೇ ತನ್ನ ಗಿರಿಗೆ ಐದು ಹುಣ್ಣಿಮೆ ನಡೆದುಕೊಳ್ಳಬೇಕು, ಗಂಡು ಹುಟ್ಟಿದರೆ ಗುಡದಯ್ಯ ಎನ್ನಬೇಕು, ಹೆಣ್ಣು ಹುಟ್ಟಿದರೆ

ಗಂಗಿಮಾಳಿ ಎಂದು ಹೆಸರಿಡಬೇಕು ಎಂದು ಕರಾರು ಹಾಕಿದ. ಗಂಡ ಹೆಂಡಿರು ಇದಕ್ಕೆ ಒಪ್ಪಿಕೊಂಡರು.

ಕೆಲಕಾಲದ ಬಳಿಕ ಕೋಮಾಲಿ ಗರ್ಭಿಣಿಯಾದಳು. ಗಿರಿಗೆ ಹೋಗುವುದು ಕಠಿಣವಾಗ ತೊಡಗಿತು. ಅವಳು ಮಲ್ಲಯ್ಯನಿಗೆ ತನ್ನ ಸ್ಥಿತಿಯನ್ನು ತಿಳಿಸಿದಳು. ಮಲ್ಲಯ್ಯ ಅವಳಿದ್ದಲ್ಲಿಗೇ ಬಂದು ಅವಳಿಂದ ಸೂಸಲು – ಮೀಸಲು ಪಡೆಯುವುದಾಗಿ ತಿಳಿಸಿದ. ಕೋಮಾಲಿ ಅದಕ್ಕೆ ಒಪ್ಪಿದಳು. ಕೆಲದಿನಗಳ ಬಳಿಕ ಅವಳಿಗೆ ಒಂದು ಗಂಡು ಮಗು ಜನಿಸಿತು.

ಮುಂದೆ ತನಗೆ ಸಲ್ಲಬೇಕಾದ ಸೇವೆಪಡೆಯಲು ಮಲ್ಲಯ್ಯ ಕೋಮಾಲಿಯ ಊರಿಗೆ ಬಂದಾಗ ಅವಳು ಅವನನ್ನು ಕಾಳವ್ವನ ಗುಡಿಯಲ್ಲಿ ಇರಲು ಹೇಳಿದಳು. ವಸ್ತುತಃ ಕಾಳವ್ವನ ಗುಡಿಯಲ್ಲಿರುವ ಕಾಳಸರ್ಪ ಅವನನ್ನು ಕಚ್ಚಲಿ ಎಂಬುದು ಅವಳ ಉದ್ದೇಶವಾಗಿತ್ತು. ಇದರಿಂದ ಅವಳು ಗೊರವನ ಚಿಂತೆಬಿಟ್ಟು ಗಂಡನ ಜೊತೆ ಹಾಯಾಗಿ ಕಳೆದಳು.

ಇತ್ತ ಕೋಮಾಲಿ ಬರದಿದ್ದುದಕ್ಕೆ ಬೇಸರಗೊಂಡ ಗೊರವ ಸಿಟ್ಟು ಬಂದು ದೋಣಿಯನ್ನು ಒಂದು ದಿಕ್ಕಿಗೆ, ಗಂಟೆಯನ್ನು ಒಂದು ದಿಕ್ಕಿಗೆ ಎಸೆದು ತಾನು ಸತ್ತವರಂತೆ ಒಂದು ಕಡೆ ಬಿದ್ದುಕೊಂಡ. ಬೆಳಗ್ಗೆ ಗೌಡ ಬಂದು ನೋಡಿ, ಯಾರೋ ಅನಾಥ ಗೊರವ ಸತ್ತಿದ್ದಾನೆ ಎಂದು ಸುದ್ದಿಮಾಡಿದ.

ಜನ ಬಂದು ನೋಡಿದರು. ಬಳಿಕ ಗೊರವನ ಹೆಣಕ್ಕೆ ಅಂತ್ಯ ಕಾಣಿಸುವ ವಿಚಾರ ಬಂತು. ಎಲ್ಲರೂ ಸೇರಿ ಆ ಹೆಣವನ್ನು ಎತ್ತಿಕೊಂಡು ಹೋಗಿ ಸೋಮನಗೌಡನ ಮನೆಯ ಹಿತ್ತಲಿನಲ್ಲಿ ಮಣ್ಣು ಮಾಡಿದರು.

ಬೆಳಗ್ಗೆ ಕೋಮಾಲಿ ಕಸಚೆಲ್ಲಲು ತಿಪ್ಪೆಯ ಬಳಿಗೆ ಬಂದಾಗ ಗೊರವ ಅವಳ ಸೆರಗು ಹಿಡಿದು ನೀನು ಕೊಟ್ಟ ಮಾತು ಏನಾಯಿತು? ಎಂದು ಕೇಳಿದ. ಅವಳು ಜೋರಾಗಿ ಕಿರುಚಿದಳು. ಅದನ್ನು ಕೇಳಿ ಅಲ್ಲಿಗೆ ಬಂದ ಸೋಮನಗೌಡ ಅವಳನ್ನು ಒಳಗೆ ಕರೆದೊಯ್ದ. ಗೊರವ ಅಲ್ಲಿಂದ ಎದ್ದು ಕುಳುಬಾನದಲ್ಲಿ ಸೇರಿಕೊಂಡನು. ಬೆಳಗ್ಗೆ ಕೋಮಾಲಿ ಕುಳ್ಳು ತರಲು ಬಂದಾಗ ಗೊರವ ಮತ್ತೆ ಅವಳನ್ನು ನಿನ್ನ ಮಾತು ಏನಾಯಿತು? ಎಂದು ಕೇಳಿದ. ಅವಳು, ನಾನು ಗಂಡುಳ್ಳ ಬಾಲೆ, ಮನೆಯಲ್ಲಿ ಮಂದಿ ಇದ್ದಾರೆ, ಸೆರಗು ಬಿಡು,

ನಿನ್ನ ಅಪೇಕ್ಷೆಯಂತೆ ನಿನಗೆ ಸೂಸಲು ಮೀಸಲು ತರುತ್ತೇನೆ, ನೀನು ಊರ ಹೊರಗಿನ ಬಾವಿಯ ದಡದಲ್ಲಿ ಕಾಯುತ್ತಿರು ಎಂದಳು. ಗೊರವಪ್ಪ ಅವಳ ಮಾತಿಗೆ ಒಪ್ಪಿ ಬಾವಿಯ ಬಳಿಗೆ ಹೋದನು.

ಆದರೆ ಕೋಮಾಲಿಗೆ ಮಧ್ಯಾನ್ಹದವರೆಗೂ ಬಾವಿಗೆ ಹೊಗುವ ಪ್ರಮೇಯವೇ ಬರಲಿಲ್ಲ. ಮಧ್ಯಾನ್ಹದ ಬಳಿಕ ಅವಳು ಬಾವಿಗೆ ಬರುತ್ತಿರುವಾಗ ಮುದಿಗೊರವ ಅವಳನ್ನು ಕಂಡು ಸಂತೋಷಗೊಂಡ. ಐದು ಹರಳು ಮಂತ್ರಿಸಿ ಬಾವಿಯಲ್ಲಿ ಎಸೆದ. ಕೋಮಾಲಿ ಬಂದು ನೀರಿನಲ್ಲಿ ಬಿಂದಿಗೆ ಮುಳುಗಿಸಿ ನೀರೆತ್ತಿಕೊಳ್ಳಲು ಹೋದಾಗ ಅದು ಮೇಲೆ ಬರಲಿಲ್ಲ. ಅವಳು ಅಲ್ಲೇ ಇದ್ದ ಗೊರವನ ಸಹಾಯವನ್ನು ಕೋರಿದಳು. ಅವನು ಸಹಾಯ ಮಾಡಿ, ನನ್ನನ್ನು ಇಷ್ಟು ಬೇಗ ಮರೆತೆಯಾ? ಎಂದು ಕೇಳಿದನು. ಅವಳು ನಿನಗೆ ಸಂಜೆ ಸೂಸಲು ಮೀಸಲು ತರುತ್ತೇನೆ ಎಂದು ಭರವಸೆಯಿತ್ತಳು. ಅವನು ಕೋಮಾಲಿಯ ಮಗನಿಗೆ ತಂದಿದ್ದ ಅಂಗಿ ಉಂಗುರವನ್ನು ಕೊಟ್ಟು ಕಳಿಸಿದ.

ಸಂಜೆ ಕೋಮಾಲಿಯ ಮನೆಗೆ ಬಂದ ಗೊರವಯ್ಯ ಕುಳುಬಾನದಲ್ಲಿ ಕುಳಿತು ಸೂಸಲು ಮೀಸಲು ಪಡೆದ. ಮುಂದೆಯೂ ಹಾಗೆಯೇ ನೀಡಬೇಕೆಂದು ಹೇಳಿದ. ಅವಳು ತನ್ನ ಮನೆಯ ಆಕಳು ಕಾಯ್ದು ತರುವಂತೆ ತಿಳಿಸಿದಳು. ಅದರಂತೆ ಇವನು ಮೇಯಿಸಿ ತಂದ. ಇವಳೂ ಸಹ ದಿನಾಲು ತನ್ನ ಮನೆಯಲ್ಲಿ ಆಳಾಗಿ ದುಡಿಯುತ್ತಿದ್ದ ಮೈಲಾರನಿಗೆ ಬುತ್ತಿ ಕೊಟ್ಟು ತನ್ನ ಮಾತು ನಡೆಸಿದಳು.

ಕೊನೆಗೊಂದು ದಿನ ಮೈಲಾರನು – ನಿನಗೆ ಈ ಮನೆಯ ರಿಣ ತೀರಿತು. ನಡೆ ನನ್ನ ಗಿರಿಗೆ, ಎಂದು ಹೇಳು ಅವಳನ್ನು ಕರೆದುಕೊಂಡು ತನ್ನ ಗಿರಿಗೆ ನಡೆದ.

**೩. ಕುರುಬರ ಮಾಳವ್ವನ ಕಥೆ**

ಒಂದು ದಿನ ಮೈಲಾರಲಿಂಗ ಊರಾಡಿ ಬಂದ. ಅಂದು ಅವನ ಮೈ, ಕೈ, ಗಲ್ಲಗಳು ಪರಚಿಕೊಂಡಿದ್ದವು. ಈ ಸ್ಥಿತಿಯಲ್ಲಿ ಅವನು ಬಂದದ್ದು ತಿಳಿದ ಗಂಗಮ್ಮ ತನ್ನ ಅರಮನೆಯ ಏಳು ಬಾಗಿಲುಗಳನ್ನು ಮುಚ್ಚಿ ಒಳಗೆ ಕುಳಿತಿದ್ದಳು. ಇವರು ಹೊರಗೆ ನಿಂತು ಬಾಗಿಲು ತೆಗೆಯಲು ಬಹಳ ಗೋಗರೆದ ಮೇಲೆ ಅವಳು ಸಿಟ್ಟಿನಿಂದ ಲಟಗಿ ಮುರಿಯುತ್ತ ಬಂದು ಏಳು ತಳಸಗಳನ್ನು ತೆರೆದಳು. ಬಳಿಕ ಅವಳು ಮಲ್ಲಯ್ಯನನ್ನು ಎಲ್ಲಿಗೆ ಹೋಗಿದ್ದೆ

ಎಂದು ತರಾಟೆಗೆ ತೆಗೆದುಕೊಂಡಳು. ಅವನಿಂದ ಸರಿಯಾದ ಉತ್ತರ ಬಾರದೇ ಇದ್ದಾಗ ಅವನಿಗೆ ಒಂದು ಪರೀಕ್ಷೆ ಒಡ್ಡಿದಳು.

ಗಂಗಮ್ಮ ಸರಸರನೆ ನಡೆದು ಹೋಗಿ ಸಮೀಪದ ಹುತ್ತದಲ್ಲಿ ಕೈಹಾಕಿ ಏಳು ಹೆಡೆಯ ಸರ್ಪವೊಂದನ್ನು ತಂದು, ಅದನ್ನು ಮುಟ್ಟಿ ಬೇರೆ ಯಾವ ಹೆಂಗಸಿನ ಹತ್ತಿರವೂ ಹೋಗಲಿಲ್ಲವೆಂದು ಪ್ರಮಾಣಮಾಡುವಂತೆ ಹೇಳಿದಳು.

ಅವಳ ಮಾತು ಕೇಳಿದ ನಿಂಗಣ್ಣನಿಗೆ ಕೋಪ ಬಂದಿತು. ಅವನು ಹೆಂಡತಿಯಾದವಳು ಹೀಗೆ ಎದುರುನಿಲ್ಲುವುದೇ? ಇದು ತೀರ್ಮಾನವಾಗಬೇಕು. ನಿನ್ನ ಅಣ್ಣ ಹೆಗ್ಗಣ್ಣ ಪ್ರಧಾನಿಯನ್ನು ಕರೆಯೆಂದು ಹೇಳಿದ. ಅವಳು ಅದೇ ರೀತಿ ಕರೆಸಿದಳು. ಸರ್ಪದ ತಲೆಯ ಕಡೆ ಪ್ರಧಾನಿ ಹಿಡಿಯಲಿ, ಬಾಲದ ಕಡೆ ನೀನು ಹಿಡಿ. ನಡುವೆ ಮುಟ್ಟಿ ನಾನು ಪ್ರಮಾಣ ಮಾಡುತ್ತೇನೆ ಎಂದು ಮಲ್ಲಯ್ಯ ಒಗರಾಗಿ ಹೇಳಿದ. ಗಂಡ ಹೆಂಡಿರ ಜಗಳ ಬಗೆಹರಿಯಲಾರದ್ದೆಂದು ತಿಳಿದ ಪ್ರಧಾನಿ ತಂಗಿಗೆ ಸಮಾಧಾನ ಹೇಳಿದ. ಅದರಿಂದ ಅವಳು ಅಣ್ಣನ ಮೇಲೂ ಕೋಪಿಸಿಕೊಂಡು ಅವನನ್ನು ಶಪಿಸತೊಡಗಿದಳು. ಮೈಲಾರಲಿಂಗ ಹೆಗ್ಗಣ್ಣನಿಗೆ ನಿನ್ನ ತಂಗಿಯನ್ನು ನಿನ್ನ ಮನೆಗೆ ಕರೆದುಕೊಂಡು ಹೋಗು, ಎಂದು ಹೇಳಿಬಿಟ್ಟ. ಹೆಗ್ಗಣ್ಣ, ನಿನಗೆ ಬೇಡಾದ ಹೆಣ್ಣು ನನಗೂ ಬೇಡ, ಬೇಡಾದರೆ ಅರಣ್ಯಕ್ಕೆ ಒಯ್ದು ತಲೆ ಹೊಡೆ ಎಂದು ಪ್ರತಿ ಹೇಳಿದ. ಇದರಿಂದ ಅವಮಾನಿತಳಾದ ಗಂಗಮ್ಮ ಹೆಗ್ಗಣ್ಣನನ್ನು ಬಯ್ದು "ಇನ್ನೊಮ್ಮೆ ನನ್ನ ಮನೆಗೆ ಕಾಲುಹಾಕಿದರೆ ಚಂಡಹಿಡಿದು ಹೊರಿಯಾಕೆ ಒಗಸೇನು" ಎಂದು ಖಾರವಾಗಿ ಹೇಳಿದಳು. ಮೈಲಾರಲಿಂಗ ಮನೆಯೊಳಗೆ ಹೋದ.

ಮರುದಿನ ಗೊರವ ತನ್ನ ಹೆಂಡತಿಗೆ – "ನನ್ನ ರನ್ನ ಬೆತ್ತ ತಾ, ಹಸಿರು ಜೋಳಿಗೆ ತಾ, ಗೋದಿಯ ಸೀಮೆಗೆ ಹೋಗಿ ಬರುತ್ತೇನೆ" ಎಂದು ಹೇಳಿದ.

ಮನೆಯಿಂದ ಹೊರಟುಬಂದ ನಿಂಗಣ್ಣ ಕುರುಬರ ದಡ್ಡಿಗೆ ಬಂದ. ಅಲ್ಲಿ ಗುಡ್ಡದ ದಾರಿಯಲ್ಲಿ ಗೊಬ್ಬರ ಬಳಿಯುತ್ತ ಕುರಿಗಳನ್ನು ಕರೆಯುತ್ತ ಕುರಿಜಿಡ್ಡಿನಿಂದ ನಾರುತ್ತಿದ್ದ ಕುರುಬತಿಯನ್ನು ಕಂಡು ಅವಳಿಗೆ ಮನಸೋತು ಹೋದ. ಅವಳು ನೀರಿಗೆ ಹೋದರೆ ಅಲ್ಲಿಗೂ ಹೋದ. ಬಳೆಗಾರನ ವೇಷ ತೊಟ್ಟುಬಂದು ಬಳೆ ಇಡಿಸುವ ನೆಪದಲ್ಲಿ ಅವಳ ಕೈ ಮುಟ್ಟಿದ. ಕೊನೆಯಲ್ಲಿ ಅವಳ ಹಿಂದಿನಿಂದ ಹಟ್ಟಿಗೆ ಹೋಗಿ ಅಲ್ಲಿಯೇ ಜೀತದ

ಆಳಾಗಿ ದುಡಿಯತೊಡಗಿದ. ಕುರಿಗೆ ಎಣಿಕೆ ಹಾಕಿದ. ಗೋವಿಗೆ ಕಣ್ಣಿ ಹೊಸೆದ. ನಾಯಿಗೆ ನುಚ್ಚು ಒಡೆದ. ಅವರು ಕೊಟ್ಟ ಅಂಬಲಿಯನ್ನು ಊಟ ಮಾಡಿದ.

ಹೀಗೆ ಎಂಟು ದಿನಗಳು ಕಳೆದ ಮೈಲಾರಲಿಂಗ ಕುರುಬರ ಜೊತೆಗೆ ಜಗಳವಾಡಿ ದಡ್ಡಿಬಿಟ್ಟು ಹೊರನಡೆದ. ಸ್ವಲ್ಪ ದೂರ ಬಂದು ಕರಿಯ ಕಂಬ್ಳಿ ಮುರಿದು ಗದ್ದಿಗೆ ಮಾಡಿ ಕುಳಿತುಕೊಂಡ. ತನ್ನೊಂದಿಗೆ ತಂದಿದ್ದ ಭಟ್ಟಿ ಭಂಡಾರ, ದತ್ತೂರಿಬೀಜ ಮತ್ತು ಜವಬೂದಿಗಳನ್ನು ಸೇರಿಸಿ ಕುರುಬರ ಮಾಳೀಜೆಡ್ಡು ಎಂದ. ಅಂದಿನಿಂದ ಕುರುಬರ ಮಾಳಮ್ಮನಿಗೆ ಜೆಡ್ಡು ಪ್ರಾರಂಭವಾಯಿತು. ದಡ್ಡಿಯಲ್ಲಿ ಲೆಕ್ಕವಿಲ್ಲದಷ್ಟು ಕುರಿಗಳು ಸಾಯತೊಡಗಿದವು. ಇದರಿಂದ ಕುರುಬತಿಯ ಅಣ್ಣನಿಗೆ ಗಾಬರಿಯಾಯಿತು.

ಅವರ ಪ್ರಧಾನಿ ಹೊತ್ತಿಗೆ ಕೇಳಲು ಜೋಯಿಸರನ್ನು ಹುಡುಕುತ್ತ ಹೊರಟ. ಅಷ್ಟರಲ್ಲಿ ಮಲ್ಲಯ್ಯ ಜೋಯಿಸನ ರೂಪತಾಳಿ ಊರಲ್ಲಿ ತಿರುಗುತ್ತಿದ್ದ. ಪ್ರಧಾನಿ ಅವನನ್ನು ಕಂಡು ತನ್ನ ಕಷ್ಟ ತೋಡಿಕೊಂಡ. ಜ್ಯೋತಿಷಿ ಆದನ್ನೆಲ್ಲ ನಿವಾರಿಸುವುದಾಗಿ ಭರವಸೆ ಕೊಟ್ಟ. ನಿಮ್ಮ ತಂಗಿಯ ಅಂಗೈ ಗೆರೆಗಳನ್ನು ನೋಡಬೇಕು ಎಂದ.

ಇಬ್ಬರೂ ಹೊರಟು ದಡ್ಡಿಗೆ ಬಂದರು. ಮಲ್ಲಯ್ಯ ಅವಳ ಅಂಗೈ ನೋಡಿ ಭಂಡಾರವನ್ನು ಔಷಧ ಮಾಡಿ ಕುಡಿಸಿದ. ಇವಳನ್ನು ಒಬ್ಬ ಗೊರವನಿಗೆ ಕೊಡಬೇಕು ಎಂದು ತಿಳಿಸಿದ. ಕುರಿದಡ್ಡಿಯ ಮೇಲೆ ಭಂಡಾರ ತೂರಿದ. ಸತ್ತ ಕುರಿಗಳು ಜೀವಗೊಂಡವು.

ಇತ್ತ ಈ ಕಪಟ ಜೋತಿಷಿ ದಡ್ಡಿಬಿಟ್ಟು ಹೊರನಡೆದ. ಆದರೆ ಇವನು ಕುಡಿಸಿದ ಔಷಧದ ಪ್ರಭಾವದಿಂದಾಗಿ ಕುರುಬತಿ ಇವನ ಬೆನ್ನು ಹತ್ತಿದಳು. ದಾರಿಯಲ್ಲಿ ಒಂದಡೆ ತನ್ನ ತ್ರಿಶೂಲ ಜಡಿದು ನೆಲದಲ್ಲಿ ನೀರು ಚಿಮ್ಮಿಸಿದ. ಅಲ್ಲಿಯೇ ಅಕ್ಕಿಯ ಬಾನ ಬಸಿದ. ಬಾಳೆಯ ಎಲೆ ತಂದು ಹರಡಿ ಅದರಲ್ಲಿ ಮಲ್ಲಿಗೆ ಹೂವಿನಂತಹ ಬಾನ ನೀಡಿ ತುತ್ತು ಮಾಡಿ ಉಣಿಸಿದ. ಜೊತೆಯಲ್ಲಿ ಕರೆದುಕೊಂಡು ಸಿಡಗನಹಾಳಕ್ಕೆ ಬಂದ.

ಅಲ್ಲಿ ಅರಮನೆಯಲ್ಲಿದ್ದ ಗಂಗಮ್ಮನಿಗೆ ಬಾಗಿಲು ತೆಗೆಯಲು ಹೇಳಿದ. ಅವಳು ಬಾಗಿಲು ತೆಗೆದು ನೋಡಿದರೆ ಗಂಡನ ಜೊತೆಯಲ್ಲಿ ಮತ್ತೊಬ್ಬಳು ಸುಂದರಿ ನಿಂತಿದ್ದಾಳೆ. ಇದನ್ನು ಕಂಡು ಗಂಗಿ ಮಾಳವ್ವ ಸಿಟ್ಟು ಬೆಂಕಿಯಾದಳು. ಇಬ್ಬರಿಗೂ ಕದನ ಹತ್ತಿತು.

ನಾನೇನು ಮಾಡಲಿ ನಿನ್ನ ಗಂಡ ಮೈಲಾರಲಿಂಗ, ಈ ಗುಡ್ಡದ ಗೂಳಿ ನನ್ನನ್ನು ತಾನಾಗಿಯೇ ಕರೆದು ತಂದಿದ್ದಾನೆ, ನಾನಾಗಿ ಬಂದವಳಲ್ಲ ಎಂದು ಕುರುಬರ ಮಾಳವ್ವ ವಾದ ಮಾಡಿದಳು. ಅಂತೂ ಮೈಲಾರಲಿಂಗ ಇಬ್ಬರಿಗೂ ಹೀಗೆ ಕದನ ಹಚ್ಚಿ ಮೋಜು ನೋಡಿದ.

ಕೊನೆಯಲ್ಲಿ ಅರಮನೆಯ ಭಾಗದಲ್ಲಿ ಗಂಗಿ ಮಾಳಮ್ಮ ಇರಬೇಕೆಂದೂ ಹೊರಗಡೆ ಕುರುಬರ ಮಾಳಮ್ಮ ಇರಬೇಕೆಂದೂ ನಿರ್ಧಾರವಾಯಿತು. ಅನ್ನ ಬೇಡುವ ಭಕ್ತರು ಒಪ್ಪತ್ತಿನ ಬರಿಗಾಲಲ್ಲಿ ಬರುತ್ತಾರೆ, ಅವರಗೆ ಅನ್ನ ಕೊಡು ಎಂದು ಮೈಲಾರ ಗಂಗಿ ಮಾಳಮ್ಮನಿಗೆ ಆಜ್ಞಾಪಿಸಿದ ; ಅದೇ ರೀತಿ ಮಕ್ಕಳನ್ನು ಬೇಡುವ ಭಕ್ತರು ಬರುತ್ತಾರೆ. ಆ ನನ್ನ ಭಕ್ತರಿಗೆ ಮಕ್ಕಳನ್ನು ಕೊಡು ಎಂದು ಕುರುಬರ ಮಾಳವ್ವನನ್ನು ನಿಯಮಿಸಿದ.

ಮಹಾರಾಷ್ಟ್ರದಲ್ಲಿ ಕುರುಬತೆವ್ವನನ್ನು ಬಾಣಾಯಿ ಎಂದು ಕರೆಯುತ್ತಾರೆ. ಅಲ್ಲಿಯೂ ಅವಳನ್ನು ಕುರುಬರ ಕನ್ಯೆ ಎಂದು ತಿಳಿಯುತ್ತಾರೆ. ಆದರೆ ಅವಳ ಕಥೆ ಕರ್ನಾಟಕದ ಕಥೆಗಿಂತ ಹೆಚ್ಚು ಭಿನ್ನವಾಗಿದೆ.

ಮೂಲತಃ ಇವಳು ಇಂದ್ರನ ಏಳು ಜನ ಪುತ್ರಿಯರಲ್ಲಿ ಒಬ್ಬಳು. (ಇನ್ನೊಂದು ಕಥೆಯ ಪ್ರಕಾರ ಇವಳು ಬಾಣಾಸುರನ ಮಗಳು. ಹುಟ್ಟುತ್ತಲೇ ಇವಳು ಬಾಣ ಸಹಿತವಾಗಿ ಹುಟ್ಟಿದ್ದಳು) ಒಂದು ಸಲ ತಂದೆಯಾದ ಇಂದ್ರನ ಜೊತೆಗೆ ಇವಳು ತನ್ನ ಸಾಮರ್ಥ್ಯದ ಬಗ್ಗೆ ಹೇಳಿಕೊಂಡಳು. ಇದರಿಂದ ಇಂದ್ರನಿಗೆ ಸಿಟ್ಟುಬಂತು. ಅವನು ಒಬ್ಬ ಬಾಲಕನ ರೂಪ ತಾಳಿದ, ಮಗಳಾದ ಬಾಣಬಾಯಿಯನ್ನು ಒಂದು ಪೆಟ್ಟಿಗೆಯಲ್ಲಿ ಹಾಕಿ ಭದ್ರಪಡಿಸಿ ಭೂಲೋಕಕ್ಕೆ ಬಂದ. ಚಂದನಪುರದ ಸಮೀಪದ ಅಡವಿಯಲ್ಲಿ ಆ ಪೆಟ್ಟಿಗೆ ಇಟ್ಟು ಹೋದ.

ಅಲ್ಲಿ ಕುರಿ ಕಾಯುತ್ತಿದ್ದ ಕುರುಬನಿಗೆ ಆ ಪೆಟ್ಟಿಗೆ ಸಿಕ್ಕಿತು. ಅವರು ತೆರೆದು ನೋಡಿದಾಗ ಅದರಲ್ಲಿ ನವಜಾತ ಹೆಣ್ಣು ಕೂಸೊಂದು ಕಂಡುಬಂತು. ಆತ ಕೂಸನ್ನು ತೆಗೆದುಕೊಂಡು ಪ್ರೀತಿಯಿಂದ ಜೋಪಾನ ಮಾಡಿ ಅವಳಿಗ ಬಾನ ಎಂದು ಹೆಸರಿಟ್ಟ.

ಅಲ್ಲಿ ಬಾಣಾ ದೊಡ್ಡವಳಾದ ಮೇಲೆ ಶಿವನನ್ನು ಕುರಿತು ತಪಸ್ಸುಮಾಡಿದಳು. ಅವಳ ತಪಸ್ಸಿಗೆ ಮೆಚ್ಚಿದ ಶಿವ ಪ್ರತ್ಯಕ್ಷನಾದ. ಅವಳಿಗೆ ಒಂದು ಕಡಗವಿತ್ತು, ಅದನ್ನು

ಕಾಲಲ್ಲಿ ಧರಿಸಿದರೆ ಅವಳ ಇಚ್ಛೆ ಪೂರೈಸುತ್ತದೆಂದೂ ತಕ್ಕ ವರ ದೊರೆಯುವನೆಂದೂ ಹೇಳಿ ಮಾಯವಾದನು.

ಅವಳು ಆ ಕಡಗವನ್ನು ಧರಿಸಿ ಜೆಜೂರಿಗೆ ಬಂದಳು. ಅಲ್ಲಿ ಅರಮನೆಯಲ್ಲಿ ಮಾಳಸಾ ದೇವಿಯ ಜೊತೆಗಿದ್ದ ಖಂಡೋಬಾ (ಮಹಾರಾಷ್ಟ್ರದಲ್ಲಿ ಮೈಲಾರನನ್ನು ಖಂಡೋಬಾ ಎಂದು ಕರೆಯುತ್ತಾರೆ) ಕಂಡುಬಂದ. ತಕ್ಷಣ ಅವಳಿಗೆ ಅವನ ಮೇಲೆ ಪ್ರೇಮ ಅಂಕುರಿಸಿತು. ತನ್ನ ಕಣ್ಣ ಕಾಡಿಗೆಯಿಂದ ಪ್ರೇಮಪತ್ರವೊಂದನ್ನು ಬರೆದು ಅಲ್ಲಿಯೇ ಚೆಲ್ಲಿ ಬಂದಳು. ಆ ಪತ್ರ ಖಂಡೇರಾಯನಿಗೆ ಸಿಕ್ಕಿತು. ಅದನ್ನೋದಿದ ಮೇಲೆ ಖಂಡೇರಾಯನ ಅವಸ್ಥೆ ಬಿಗಡಾಯಿಸಿತು. ಅವನು ಬೇಕೆಂದೇ ಮಾಳಸಾ ದೇವಿಯ ಜೊತೆಗೆ ಆಡುತ್ತಿದ್ದ ಪಗಡೆಯ ಆಟದಲ್ಲಿ ಸೋತುಹೋದ. ಕರಾರಿನಂತೆ ೧೨ ವರ್ಷಗಳ ಕಾಲ ಜಚೂರಿ ಬಿಟ್ಟು ವನವಾಸಕ್ಕೆ ಹೋದ. ಅವನ ಒಳಗುಟ್ಟು ಮಾಳಸಾ ದೇವಿಗೆ ತಿಳಿಯಲಿಲ್ಲ.

ಖಂಡೋಬಾ ಜೆಚೂರಿಯಿಂದ ಹೊರಟು ಭುಲೇಶ್ವರನಲ್ಲಿಗೆ ಹೋದ. (ಭುಲೇಶ್ವರನೆಂದರೆ ದೇವತೆಗಳ ಗುರು.) ಖಂಡೋಬಾ ಅವನ ಮುಂದೆ ಇದ್ದ ಸಂಗತಿ ತಿಳಿಸಿದ. ಭುಲೇಶ್ವರ ಖಂಡೋಬಾಗೆ ಕುರುಬನಂತೆ ವೇಷಧರಿಸಿ ಚಂದನಪುರಕ್ಕೆ ಹೋಗಲು ತಿಳಿಸಿದನು. ಅದೇ ರೀತಿ ಖಂಡೋಬಾ ಚಂದನಪುರದ ಕುರಿದೊಡ್ಡಿಯಲ್ಲಿದ್ದ ಬಾಣಾಯಿಯ ಪತ್ತಿರ ಕಾಣಿಸಿಕೊಂಡ. ಅಲ್ಲಿಯೇ ಅವಳ ತಂದೆಯ ಬಳಿ ಕುರಿಕಾಯುವ ಕೆಲಸಕ್ಕೆ ನಿಂತುಕೊಂಡ.

ಕುರುಬರಲ್ಲಿ ಹೀಗೆ ಕುರಿ ಕಾಯುವ ಆಳಾಗಿ ಏಳು ನೂರು ಕುರಿ ಮತ್ತು ಏಳು ನೂರು ಆಡುಗಳೊಂದಿಗೆ ನದೀ ದಂಡೆಗೆ ಹೋದ. ಅಲ್ಲಿ ಅವನ್ನೆಲ್ಲ ಕೊಂದುಹಾಕಿ ಚರ್ಮ ಸುಲಿದು ಎಲವು ಮಾಂಸಗಳನ್ನು ಬೇರ್ಪಡಿಸಿದ. ಅದು ಗೊತ್ತಾಗಿ ಅಲ್ಲಿಗೆ ಬಾಣಾ ಬಂದಳು. ಅವಳ ಹಿಂದಿನಿಂದ ಅವಳ ತಂದೆಯೂ ಬಂದನು. ಆಗ ಖಂಡೊಬಾ ಬಾಣಾ ನನ್ನನ್ನು ಲಗ್ನವಾಗುವುದಾದರೆ ಈ ಕುರಿಗಳನ್ನು ಜೀವಂತಗೊಳಿಸುತ್ತೇನೆ ಎಂದು ಹೇಳಿದನು. ಅದಕ್ಕವರು ನಿರ್ವಾಹವಿಲ್ಲದೆ ಒಪ್ಪಬೇಕಾಯಿತು. ಕುರಿಗಳೆಲ್ಲ ಜೀವತಳೆದವು. ತಕ್ಷಣ ಖಂಡೋಬಾ ಅವಳ ಕೈ ಹಿಡಿದು ಕುದುರೆ ಸಹಿತವಾಗಿ ತನ್ನ ರೂಪ ಪ್ರಕಟಿಸಿದ. ತಾನು ಜೆಚೂರಿಯಲ್ಲಿ ಕಂಡು ಪ್ರೇಮ ಪತ್ರ ಬರೆದ ದೇವರೇ ಈತನೆಂದು ಬಾಣಾ ತನ್ನ

ತಂದೆಯ ಮುಂದೆ ಹೇಳಿದಳು. ಅವರೆಲ್ಲ ಸೇರಿ ಇಬ್ಬರ ವಿವಾಹವನ್ನು ವೈಭವದಿಂದ ಮಾಡಿದರು.

ತರುವಾಯು ಖಂಡೇರಾಯ ಬಾಣಾಯಿಯನ್ನು ಕುದುರೆಯ ಮೇಲೆ ಕೂಡ್ರಿಸಿಕೊಂಡು ಜೆಜೂರಿಗೆ ಬಂದ. ತನ್ನ ಗಂಡ ತಿರುಗಿ ಬಂದುದಕ್ಕಾಗಿ ಮಾಳಸಾ ದೇವಿಗೆ ಸಂಭ್ರಮ ವುಂಟಾಯಿತು. ಎದುರುಗೊಳ್ಳಲು ಆರತಿ ತೆಗೆದುಕೊಂಡು ಹೊರಗೆ ಬಂದು ನೋಡಿದರೆ ಗಂಡನ ಜೊತೆಗೆ ಮತ್ತೆ ಯಾವಳೋ ಇದ್ದಾಳೆ. ಅವಳು ದುಃಖ ತಪ್ತಳಾದಳು. ಖಂಡೋಬಾ ಅವಳನ್ನು ಸಮಾಧಾನ ಪಡಿಸಲು ಪರಿಪರಿಯಾಗಿ ಯತ್ನಿಸಿದ. ಆದರೂ ಉಪಯೋಗವಾಗಲಿಲ್ಲ. ಕೊನೆಗೆ ಕೋಟೆಯ ಕೆಳಗೆ ಬಾಣಾ ಇರುವುದೆಂತಲೂ, ಮೇಲೆ ಮಾಳಸಾ ದೇವಿ ಇರುವುದೆಂತಲೂ ನಿರ್ಧಾರವಾಯಿತು. ಆಗೀಗ ಖಂಡೋಬಾ ಬಾಣಾಯಿಯ ಭೆಟ್ಟಿಗೆ ಹೋಗಿ ಬರತೊಡಗಿದ.

### ೪. ರಡ್ಡೇರ ನೀಲವ್ವನ ಕಥೆ

ರಡ್ಡೇರ ನೀಲವ್ವನ ಐತಿಹ್ಯ ಮೈಲಾರಲಿಂಗನ ದೋಣಿಗೆ ಸಂಬಂಧಿಸಿದಂತೆ ಇರುವ ಪ್ರಮುಖ ಆಕರವಾಗಿದೆ. ಬನ್ನೂರಿನ ರಡ್ಡೇರ ನೀಲಮ್ಮ ಆಗರ್ಭ ಶ್ರೀಮಂತಳಾಗಿದ್ದಳು. ಆದರೆ ಜಿಪುಣತನದಲ್ಲಿ ಅವಳನ್ನು ಮೀರಿಸಿದವರಿರಲಿಲ್ಲ. ಅವಳ ಮನೆಗೆ ಯಾವ ಭಿಕ್ಷುಕನೂ ಹೋಗುತ್ತಿರಲಿಲ್ಲ. ಒಂದು ವೇಳೆ ಹೋದರೂ ಬರಿಗೈಯಿಂದಲೇ ಮರಳಿ ಬರಬೇಕಾಗಿತ್ತು. ಅವಳಿಗೆ ಬುದ್ಧಿ ಕಲಿಸಲೆಂದು ಮೈಲಾರಲಿಂಗ ಗೊರವನ ವೇಷ ತಾಳಿ ಅವಳ ಮನೆಗ ಹೋಗುತ್ತಾನೆ. ನೀಲಮ್ಮ ಅವನು ಬಂದಾಗ ಅವನಿಗೆ ನೀರನ್ನೂ ಕೊಡದೇ ಹೆದರಿಸಿ ಓಡಿಸುತ್ತಾಳೆ. ಅವನು ಕೇಳಿದ ಮಜ್ಜಿಗೆಯನ್ನೂ ಕೊಡುವುದಿಲ್ಲ. ಇದರಿಂದಾಗಿ ಮೈಲಾರ ಅವಳನ್ನು ಶಪಿಸುತ್ತಾನೆ. ನೀಲವ್ವನ ಸಂಪತ್ತು ಕರಗಿ ಅವಳು ಅತ್ಯಂತ ಹೀನ ಸ್ಥಿತಿಗೆ ಬರುತ್ತಾಳೆ.

ನೀಲವ್ವನಿಗೆ ಬಡತನ ಬಂದಾಗ ಅವಳು ಅದಕ್ಕೆ ಕಾರಣವನ್ನು ಕೇಳಲು ಜೋತಿಷ್ಯವನ್ನು ಕೇಳಬೇಕೆಂದು ತೀರ್ಮಾನಿಸುತ್ತಾಳೆ. ಅವಳು ಹೊತ್ತಿಗೆ ಕೇಳಬೇಕೆಂದು ಹೊರಟಾಗ, ಇತ್ತ ತನ್ನ ಅಣ್ಣನ ಆದೇಶದಂತೆ ಎಲ್ಲಮ್ಮ ಜೋಗತಿಯ ವೇಷ ತಾಳಿ ನೀಲಮ್ಮನ ಬಳಿಗೆ ಹೋಗುತ್ತಾಳೆ. ನೀಲಮ್ಮ ಮನೆಯವರೆಗೂ ಬಂದ ಜೋಗತಿಯನ್ನು ಕರೆದು

ತನ್ನ ಈ ಹೀನ ಸ್ಥಿತಿಗೆ ಕಾರಣವನ್ನು ಕೇಳುತ್ತಾಳೆ. ಆಗ ಜೋಗತಿಯ ವೇಷದಲ್ಲಿ ಬಂದ ಎಲ್ಲಮ್ಮ – ನೀನು ಗೊರವನೊಬ್ಬನನ್ನು ಪೀಡಿಸಿದ್ದು ಇದಕ್ಕೆ ಕಾರಣ ಎಂದು ಹೇಳುತ್ತಾಳೆ. ಆಗ ನೀಲಮ್ಮ ಇದಕ್ಕೆ ಪರಿಹಾರವೇನು ಎಂದು ಕೇಳಿದಾಗ ಜೋಗತಿಯ ವೇಷದಲ್ಲಿದ್ದ ಎಲ್ಲಮ್ಮ ನೀನು ಅವನನ್ನು ಕರೆತಂದು ಉಪಚರಿಸಿ, ಮೈಲಾರಕ್ಕೆ ಹೋಗಿ ಬಾ ಎಂದು ಪರಿಹಾರವನ್ನು ಸೂಚಿಸುತ್ತಾಳೆ.

ಎಲ್ಲಮ್ಮ ಹೇಳಿದ್ದನ್ನು ಪಾಲಿಸಲು ನೀಲಮ್ಮ ಗೊರವನೊಬ್ಬನನ್ನು ಹುಡುಕಿ ತರುತ್ತಾಳೆ. ಅವನನ್ನು ಮನೆಯಲ್ಲಿರಿಸಿಕೊಂಡು ಅವನ ಸೇವೆಮಾಡುತ್ತಾಳೆ. ಅವನು ಕೊಟ್ಟ ಕಿರುಕುಳಗಳನ್ನೆಲ್ಲ ಸಹಿಸಿಕೊಳ್ಳುತ್ತಾಳೆ. ಕೊನೆಗೆ ಐದು ಅಂಕಣದ ಬಂಡಿ ಕಟ್ಟಿಸಿಕೊಂಡು ಮೈಲಾರಕ್ಕೆ ಬರುವ ಹರಕೆ ಹೊರುತ್ತಾಳೆ. ಅದರಂತೆ ಸಡಗರದಿಂದ ಮೈಲಾರಕ್ಕೆ ಹೋಗಿ ಐದುನೂರು ದೋಣಿಗಳನ್ನು ತುಂಬಿಸುತ್ತಾಳೆ. ಬಳಿಕ ಮೈಲಾರಲಿಂಗನ ಕರುಣೆಯಿಂದ ಮೊದಲಿನ ಸಿರಿ ಸಂಪತ್ತನ್ನು ಹೊಂದಿ ಸಂತೋಷದಿಂದ ಬಾಳಿ ಬದುಕುತ್ತಾಳೆ.

ಇಲ್ಲಿನ ಕಥೆಯ ಮುಖ್ಯ ಆಶಯ ಸ್ಪಷ್ಟವಾಗಿದೆ. ಗೊರವನನ್ನು ಯಾವ ಕಾರಣಕ್ಕೂ ಅಗೌರವಿಸಕೂಡದು. ಅವರನ್ನು ಸಾಕ್ಷಾತ್ ಮೈಲಾರಲಿಂಗನೆಂದೇ ಕಾಣಬೇಕು. ಜೊತೆಗೆ ಎಲ್ಲಕ್ಕೂ ಮುಂಚೆ ದೋಣಿ ಮಾಡಿಸಿ ಅವನ್ನು ತುಂಬಿದಳು ಎಂಬ ಜನಪದರ ನಂಬಿಕೆ ಈ ಕಥೆಯ ಮೂಲ ಆಧಾರವಾಗಿದೆ.

**೫. ದೋಣಿ ಕಥೆ**

ಬೆಳವಲ ನಾಡಿನ ಭಕ್ತರು ಮೈಲಾರ ಕ್ಷೇತ್ರಕ್ಕೆ ಬಂದಾಗ ದೇವರಗುಡ್ಡದ ಗುಡದಯ್ಯನ ದರ್ಶನವನ್ನು ಅಪೇಕ್ಷಿಸುತ್ತಾರೆ. ಅದರಂತೆ ನಲವತ್ತು ಜನ ಚಂದಾಪುರದ ಹತ್ತಿರ ಬಂದು ದೋಣಿಯ ಸಹಾಯದಿಂದ ತುಂಗಭದ್ರಾನದಿಯನ್ನು ದಾಟಿ ಬಂದರು. ಗುಡದಯ್ಯನ ದರ್ಶನ ಪಡೆದು, ದೋಣಿ ತುಂಬಿಸಿ, ಬಳಿಕ ಮೈಲಾರಕ್ಕೆ ಹೊರಡುತ್ತಾರೆ. ದಾರಿಯಲ್ಲಿ ಹೊನ್ನತ್ತೆವ್ವನ ದರ್ಶನ ಮಾಡಿಕೊಂಡು ಚಂದಾಪುರದ ಅಗಸಿಗೆ ಬಂದಾಗ ಹೊತ್ತು ಮುಳುಗಿರುತ್ತದೆ. ಅಲ್ಲಿ ದೋಣಿ ನಡೆಸುವ ಅಂಬಿಗನು ದೋಣಿಯನ್ನು ಕಟ್ಟಿಹಾಕಿ ಮನೆಗೆ ಹೋಗಿದ್ದ. ದೋಣಿ ನಡೆಸುವವರಿಲ್ಲದೇ ನದಿಯನ್ನು ದಾಟುವುದು ಸಾಧ್ಯವಿಲ್ಲದ್ದರಿಂದ ಭಕ್ತರಿಗೆ ಚಿಂತೆಯಾಯಿತು.

ಇದೇ ಸಂದರ್ಭದಲ್ಲಿ ಹುಡುಗನೊಬ್ಬ ಬಂದು ದೋಣಿಯಲ್ಲಿ ಹೊಳೆ ದಾಟಿಸುವುದಾಗಿ ಇವರಿಗೆ ಹೇಳುತ್ತಾನೆ. ಭಕ್ತರೆಲ್ಲ ಸಂತೋಷದಿಂದ ದೋಣಿಯಲ್ಲಿ ಕುಳಿತುಕೊಳ್ಳುತ್ತಾರೆ. ದೋಣಿ ನಡುಹೊಳೆಗೆ ಬಂದಾಗ ಗರಗರ ಸುತ್ತತೊಡಗಿತು. ಆ ಹುಡುಗ ಎಲ್ಲರಿಗೂ ತಮ್ಮ ಮನೆದೇವರನ್ನು ನೆನೆಯಲು ಹೇಳಿದ. ಎಲ್ಲರೂ ಏಳು ಕೋಟಿ ಏಳು ಕೋಟಿಗೋ ಎಂದು ಕೂಗಿದರು. ದೋಣಿ ಸುರಕ್ಷಿತವಾಗಿ ದಡಕ್ಕೆ ಸೇರಿತು. ಎಲ್ಲರೂ ಹುಡುಗನಿಗೆ ಹಣ ಕೊಡಲು ನೋಡಿದಾಗ ಆ ಹುಡುಗ ಮಾಯವಾಗಿ ಹೋಗಿದ್ದ.

ಇತ್ತ ಅದೇ ಹುಡುಗ ಗೊರವಪ್ಪನ ವೇಷದಿಂದ ಹರಪನಹಳ್ಳಿಗೆ ಹೋಗಿ, ದೋಣಿ ಮುಳುಗಿ ನಲವತ್ತು ಜನ ಸತ್ತರೆಂದು ಸುದ್ದಿ ಹೇಳಿದ. ಪೋಲಿಸರು ಬಂದು ಗೋಣೆಪ್ಪನನ್ನು ಹಿಡಿದೊಯ್ದು ಬಂದೀಖಾನೆಗೆ ಹಾಕಿದರು. ಗೊರವಪ್ಪ ಗೋಣೆಪ್ಪನ ಮನೆಯವರನ್ನು ಸಮಾಧಾನ ಗೊಳಿಸಿದ. ಪೋಲಿಸರಿಗೆ ತಾನು ಜಾಮೀನು ಕೊಡುವುದಾಗಿ ತಿಳಿಸಿ, ಮೇಲೆ ಹಣವನ್ನು ಕೊಡುವುದಾಗಿ ಹೇಳಿದ. ನಂತರ ಅವರ ಮೇಜಿನ ಮೇಲೆ ಭಂಡಾರ ಮೆತ್ತಿದ ನಾಣ್ಯಗಳ ರಾಶಿಯನ್ನೇ ಹಾಕಿದ. ಬೆರಗಾದ ಪೋಲಿಸರು ಗೊರವನ ಕ್ಷಮೆ ಕೇಳಿ ಗೋಣೆಪ್ಪನನ್ನು ಬಿಟ್ಟುಕೊಟ್ಟರು. ಜಾತ್ರೆಯ ಕಾಲಕ್ಕೆ ಯಾವತ್ತೂ ದೋಣಿ ಆಡಿಸುವ ಹಾಗೂ ಬಂದೋಬಸ್ತ್ ಮಾಡುವ ಏರ್ಪಾಡು ಮಾಡಲು ಒಪ್ಪಿಕೊಂಡರು.

## ೮.೩ ಭಾಷಿಕ ಜಾನಪದ

ಜಗತ್ತಿನ ಎಲ್ಲಾ ಜನಾಂಗಗಳ ಜನಪದ ಸಾಹಿತ್ಯ ಪ್ರಕಾರಗಳಲ್ಲಿ ಗೀತೆ, ಕಥೆಗಳ ನಂತರದ ಸ್ಥಾನ ಗಾದೆ, ಒಗಟು ಹಾಗೂ ಒಡಬುಗಳದ್ದು. ಜನಸಾಮಾನ್ಯರ ಬದುಕಿನ ಅನುಭವಗಳನ್ನೇ ಮೂಲ ದ್ರವ್ಯವಾಗಿರಿಸಿಕೊಂಡು ತಲೆತಲಾಂತರದ ಮೂಲ ಸಂಸ್ಕೃತಿ ಸಂಪ್ರದಾಯಗಳನ್ನು ಉಳಿಸಿಕೊಂಡು ಸಮಕಾಲೀನ ಬದುಕಿನ ದ್ವಂದ್ವಗಳಿಗೆ ಸ್ಪಂದಿಸುತ್ತ ತಮ್ಮ ತಮ್ಮ ವೈಯಕ್ತಿಕ ನೋವು ನಲಿವುಗಳನ್ನು ಸಾರ್ವತ್ರಿಕಗೊಳಿಸುವಲ್ಲಿ ಗಾದೆಗಳು, ಒಗಟು ಹಾಗೂ ಒಡಪುಗಳು ಸಫಲವಾಗಿವೆ. ಇವು ಆಯಾ ಜನಾಂಗದ ಸಂಸ್ಕೃತಿ ಹಾಗೂ ಬದುಕಿನ ವಿವರಗಳನ್ನು ತಿಳಿಯಲು ಬಲವಾದ ಆಕರಗಳೂ ಆಗಿವೆ.

**ಗಾದೆಗಳು :**

ಗಾದೆಗಳು ವಿವೇಕಪೂರ್ಣ ಅನುಭವದಿಂದ ಕೂಡಿರುತ್ತವೆ. ಇವು ಹೆಚ್ಚು ವಾಸ್ತವಿಕ ಹಾಗೂ ಸತ್ಯ. ಇಲ್ಲಿ ಮನರಂಜನೆಗಿಂತ ನೀತಿ ಬೋಧನೆಯ ಕಡೆಗೆ ಒಲವು ಹೆಚ್ಚಾಗಿರುತ್ತದೆ. ಮೈಲಾರಲಿಂಗನಿಗೆ ಸಂಬಂಧಿಸಿದಂತೆ ಸಾಕಷ್ಟು ಎನ್ನಲಾಗದಿದ್ದರೂ, ಕೆಲವಷ್ಟು ಗಾದೆಗಳು ಜನಸಾಮಾನ್ಯರಲ್ಲಿ ಪ್ರಸಿದ್ಧವಾಗಿವೆ. ಇವು ನಮಗೆ ಮೈಲಾರನ ಕುರಿತಾದ ಐತಿಹ್ಯ, ಪುರಾಣಗಳ ಕಲ್ಪನೆಯನ್ನು ಬಿಚ್ಚಿಕೊಡುತ್ತವೆ. ಮೈಲಾರಕ್ಕೆ ಸಂಬಂಧಿಸಿದಂತೆ ಎಲ್ಲ ಕಡೆ ಚಿರಪರಿಚಿತ ಗಾದೆ **ಕೊಂಕಣಾ ಸುತ್ತಿ ಮೈಲಾರಕ್ಕೆ ಬಂದ ಹಾಗೆ** – ಎನ್ನುವುದು.

ಯಾವುದೇ ಕಾರ್ಯವನ್ನು ಸುತ್ತಿ ಬಳಸಿ ಮಾಡುವಾಗ ಈ ಗಾದೆಯನ್ನು ಉಪಮೆಯಾಗಿ ಬಳಸುತ್ತಾರೆ. ಆದರೆ ಈ ಗಾದೆಯ ಒಳಹೊಕ್ಕು ನೋಡಿದಾಗ ಮೈಲಾರ ಕ್ಷೇತ್ರ ಸ್ಥಿತವಾಗಿರುವ ಪ್ರದೇಶದ ಬಗ್ಗೆ ಜನಪದರು ಹೇಳುವ ಕ್ರಮದ ಅರಿವಾಗುತ್ತದೆ. ಮೈಲಾರಕ್ಕೆ ಬರಲು ಈಗ ಸಾಕಷ್ಟು ಅನುಕೂಲಗಳಿವೆ. ಅಲ್ಲದೇ ತುಂಗಭದ್ರಾ ನದಿಗೆ ಸೇತುವೆಯಾದಾಗಿನಿಂದ ಯಾತ್ರಿಕರಿಗೆ ಬಹಳ ಅನುಕೂಲಗಳಾಗಿವೆ. ಆದರೆ ಮೊದಲು ಮೈಲಾರಕ್ಕೆ ಬರಲು ಸಾಕಷ್ಟು ತೊಂದರೆಗಳಿದ್ದವು. ಶಾಸನಗಳಲ್ಲಿ ಉಲ್ಲೇಖವಾಗಿರುವಂತೆ ಮೈಲಾರವು ಉಂಗಲಾರ (ಉಂಗ್ಲಾರ) ಕ್ಷೇತ್ರವೆಂದೇ ಪ್ರಸಿದ್ಧ. ಇಲ್ಲಿ ತುಂಗಭದ್ರಾ ನದಿ ಉಂಗುರಾಕಾರದಲ್ಲಿ ಹರಿಯುತ್ತದೆ. ಈ ನದಿಯನ್ನು ದಾಟಲು ಹರಸಾಹಸ ಮಾಡಬೇಕು, ಇಲ್ಲದಿದ್ದರೆ ಸುತ್ತಿ ಬಳಸಿ ಮೈಲಾರಕ್ಕೆ ಬರಬೇಕಾಗಿತ್ತು. ಅಲ್ಲದೇ ಕರ್ನಾಟಕಾಂಧ್ರ ಹಾಗೂ ಮಹಾರಾಷ್ಟ್ರ ಪ್ರದೇಶಗಳ ಜಾಗೃತ ದೈವವಾದ ಮೈಲಾರನ ದರ್ಶನಕ್ಕೆ ಜನ ಬಂಡಿಗಳಲ್ಲಿ (ಎತ್ತಿನಗಾಡಿಗಳಲ್ಲಿ) ಬರುತ್ತಿದ್ದರು. ಅವರು ಬರಲು ಪ್ರಶಸ್ತ ಮಾರ್ಗವೆಂದರೆ ಭೂಮಾರ್ಗ. ಇದರಿಂದಾಗಿ ಅವರು ಸುತ್ತಿ ಬಳಸಿ ಬರಬೇಕಾದ ಅನಿವಾರ್ಯತೆಯಿತ್ತು. ಆದ್ದರಿಂದಲೇ ಈ ಗಾದೆ ಕೊಂಕಣಾ ಸುತ್ತಿ ಮೈಲಾರಕ್ಕೆ ಬಂದ ಹಾಗೆ ಜನಮಾನಸದಲ್ಲಿ ನೆಲೆನಿಂತಿದೆ. ಈಗ ಸಾಕಷ್ಟು ಅನುಕೂಲಗಳಿದ್ದರೂ, ಮೈಲಾರಕ್ಕೆ ನೇರವಾಗಿ ಬಂದು ತಲುಪಲು ಮಾರ್ಗಗಳಿದ್ದರೂ ಈ ಗಾದೆ ಬದಲಾಗಿಲ್ಲ. ಆದರೆ ಬಳಕೆಯ ಅರ್ಥದಲ್ಲಿ ಮಾತ್ರ ಬದಲಾಗಿದೆ.

ಈ ಗಾದೆಗೆ **ಗುಡ್ಡ ಸುತ್ತಿ ಮೈಲಾರಕ್ಕೆ ಹೋದ ಹಾಗೆ** ಎಂಬ ಪಾಠಾಂತರವೂ ಇದೆ. ಕೊಂಕಣ ಅಥವಾ ಸಹ್ಯಾದ್ರಿ ಶ್ರೇಣಿಯೂ ಗುಡ್ಡವೇ. ಆದರೆ ಭಕ್ತರು ಕೊಡುವ

ವಿವರಣೆಯೇ ಬೇರೆ. ಅವರ ಪ್ರಕಾರ ಗುಡ್ಡ ಎಂದರೆ ದೇವರ ಗುಡ್ಡ. ಇದು ಮೈಲಾರದಿಂದ ಸುಮಾರು ೬ ಕಿ. ಮೀ. ದೂರದಲ್ಲಿದೆ. ರಾಣೆಬೆನ್ನೂರು – ಗುತ್ತಲ ಮಾರ್ಗದಲ್ಲಿರುವ ದೇವರ ಗುಡ್ಡವೂ ಮೈಲಾರನಿಗೆ ಸಂಬಂಧಿಸಿದ ಪವಿತ್ರ ಕ್ಷೇತ್ರ. ಸ್ಥಳ ಪುರಾಣದ ಪ್ರಕಾರ ಮಣಿಕಾಸುರ ಮಲ್ಲಾಸುರರ ನಾಶಕ್ಕೆಂದು ಅವತರಿಸಿದ ಶಿವ, ಮೊದಲು ದೇವರಗುಡ್ಡವಿರುವ ಸ್ಥಳದಲ್ಲಿ ಮಣಿಕನನ್ನು ಸಂಹರಿಸಿದ. ಬಳಿಕ ಮಲ್ಲಾಸುರನನ್ನು ಅಟ್ಟಿಸಿಕೊಂಡು ಹೋಗಿ ತುಂಗಭದ್ರಾ ತೀರದಲ್ಲಿ (ಈಗಿನ ಮೈಲಾರ ಕ್ಷೇತ್ರ) ಸಂಹರಿಸಿದ. ಆದ್ದರಿಂದ ಮಲ್ಲಯ್ಯ ಮೊದಲು ಅವತರಿಸಿದ ಸ್ಥಳ ದೇವರಗುಡ್ಡ. ಹೀಗಾಗಿ ಮೊದಲು ದರ್ಶನ ಪಡೆಯ ಬೇಕಾದುದು ಇಲ್ಲಿನ ದೇವರನ್ನು, ಬಳಿಕ ಮೈಲಾರದ ದೇವರನ್ನು ಎಂಬ ನಂಬಿಕೆ ಜನರಲ್ಲಿ ಬೇರೂರಿದೆ. ಉತ್ತರದ ಕಡೆಯಿಂದ ಬರುವ ಭಕ್ತರು ಈಗಲೂ ಮೊದಲು ದೇವರಗುಡ್ಡಕ್ಕೆ ಹೋಗಿ ಸೇವೆ ಅರ್ಪಿಸಿದ ಬಳಿಕವೇ ಮೈಲಾರಕ್ಷೇತ್ರಕ್ಕೆ ಹೋಗುತ್ತಾರೆ. ಅನುಕೂಲವಿಲ್ಲದವರು ದೇವರ ಗುಡ್ಡಕ್ಕೆ ತಮ್ಮ ಪ್ರತಿನಿಧಿಯೊಬ್ಬನನ್ನು ಕಳಿಸಿ, ಅವರು ದರ್ಶನ ಪಡೆದು ಬಂದ ಬಳಿಕವೇ ಮೈಲಾರಕ್ಕೆ ಹೋಗುತ್ತಾರೆ. ಇಂದಿಗೂ ಈ ಕ್ರಮ ಮುಂದುವರಿದಿರುವುದನ್ನು ಕಾಣಬಹುದು. ಭಕ್ತರ ನಂಬಿಕೆಯ ಪ್ರಕಾರ ದೇವರಗುಡ್ಡದಲ್ಲಿರುವವನು ತಮ್ಮ ಹಾಗೂ ಮೈಲಾರದಲ್ಲಿರುವವನು ಅಣ್ಣ. ಅಣ್ಣ ವಯಸ್ಸಾದವನಾದವನು, ತಮ್ಮ ಇನ್ನೂ ಯುವಕ, ಇವನು ಬಹಳ ಜೋರು. ಆದ್ದರಿಂದ ಮೊದಲು ತಮ್ಮನ ದರ್ಶನ ಪಡೆದು ಬಳಿಕ ಅಣ್ಣನ ದರ್ಶನ ಪಡೆಯ ಬೇಕೆಂಬುದು ಅವರ ಅಭಿಪ್ರಾಯ.

**ಏಳು ಕೋಟಿ ಕೊಡಲಿಲ್ಲ – ಮೈಲಾರನ ಶನಿ ಹರೀಲಿಲ್ಲ** – ಇದೊಂದು ಅಪರೂಪದ ಗಾದೆ ಹಾಗೂ ಐತಿಹ್ಯ. ಮೈಲಾರಲಿಂಗನಿಗೆ ಸಂಬಂಧಿಸಿದಂತೆ ಇರುವ ಐತಿಹ್ಯಗಳ ಪ್ರಕಾರ ತಿಮ್ಮಪ್ಪನ ತಂಗಿಯನ್ನು ಮೈಲಾರ ಮದುವೆಯಾಗುವಾಗ ಮದುವೆಯ ಖರ್ಚಿಗಾಗಿ ತಿಮ್ಮಪ್ಪನೇ ಏಳು ಕೋಟಿ ಸಾಲಕೊಟ್ಟಿದ್ದನಂತೆ. ಅದನ್ನು ತೀರಿಸುವಂತೆ ತಿಮ್ಮಪ್ಪ ಕಾಡಿ ಬೇಡಿದನಂತೆ. ಆದರೂ ಮೈಲಾರ ತನ್ನ ಚಾಣಾಕ್ಷತನದಿಂದ ತಿರುಪತಿ ತಿಮ್ಮಪ್ಪನ ಸಾಲವನ್ನು ತೀರಿಸದೇ ಹಾಗೇ ಉಳಿದನಂತೆ. ಹೀಗಾಗಿ ನನ್ನ ಸಾಲ ತೀರುವವರೆಗೂ ನೀನು ಏಳು ಕೋಟಿ, ಏಳು ಕೋಟಿ ಎಂದು ಊರೂರು ಸುತ್ತುತ್ತಲಿರು ಎಂದು ಶಾಪ ಕೊಟ್ಟನಂತೆ. ಆದ್ದರಿಂದ ಇಂದಿಗೂ ಸಹ ಮೈಲಾರನ ಗೊರವರು ಊರೂರು ಅಲೆದು ಏಳು ಕೋಟಿಗೊ ಏಳು ಕೋಟಿಗೋ ಎಂದು ಹೇಳಿ ಭಿಕ್ಷೆ ಬೇಡುತ್ತಾರೆ.

ಇದಕ್ಕಿಂತ ಅಪರೂಪದ ಐತಿಹ್ಯವೊಂದನ್ನು ಗೊರವರು ಹೇಳುತ್ತಾರೆ. ತಿರುಪತಿ ತಿಮ್ಮಪ್ಪ ಪದ್ಮಾವತಿಯನ್ನು ಮದುವೆಯಾಗಲು ಬಯಸಿದಾಗ ಅವಳು ನವಕೋಟಿ ಹಣ ಇರುವವರನ್ನು ಮದುವೆಯಾಗುತ್ತೇನೆ ಎಂದಳಂತೆ. ಆಗ ತಿಮ್ಮಪ್ಪನ ಬಳಿ ಇದ್ದುದು ಕೇವಲ ಎರಡು ಕೋಟಿ. ಅದೇ ಸಂದರ್ಭದಲ್ಲಿ ಮೈಲಾರನ ಬಳಿ ಏಳು ಕೋಟಿ ಹಣ ಇತ್ತು. ಅವನಿಂದ ಹೇಗಾದರೂ ಮಾಡಿ ಹಣ ಪಡೆಯಬೇಕು ಎಂಬ ಹಂಚಿಕೆಯಿಂದ ತನ್ನ ತಂಗಿ ಮಾಳವ್ವನನ್ನು ಮೈಲಾರನಿಗೆ ಕೊಟ್ಟು ಮದುವೆ ಆಡಿದ. ಹೀಗ ನಂಟಸ್ತಿಕೆ ಕುದುರಿದ ಬಳಿಕ ತನ್ನ ಭಾವನಾದ ಮೈಲಾರನಲ್ಲಿ ಏಳು ಕೋಟಿ ಹಣವನ್ನು ಸಾಲ ಬೇಡಿದ[12]. ಇಲ್ಲ ಎನ್ನಲಾಗದ ಮೈಲಾರಲಿಂಗ ಸಾಲವನ್ನು ನೀಡಿದ. ಸಾಲವನ್ನು ಪಡೆಯುವಾಗ ತಿರುಪತಿ ತಿಮ್ಮಪ್ಪ ಯಾರೂ ಇಲ್ಲದ ಜಾಗದಲ್ಲಿ ಮಾತ್ರ ಹಣವನ್ನು ಮರಳಿ ಕೇಳಬೇಕು ಎಂದು ಶರತ್ತು ಹಾಕಿದ. ಮೈಲಾರನೂ ಅದಕ್ಕೆ ಒಪ್ಪಿದ. ತಿಮ್ಮಪ್ಪನ ಮದುವೆಯಾಯಿತು. ಮೈಲಾರ ತನ್ನ ಹಣವನ್ನು ಕೇಳಲು ತಿಮ್ಮಪ್ಪನ ಬಳಿಗೆ ಹೋದಾಗಲೆಲ್ಲ ಅವನ ಜೊತೆ ಅವನ ಹೆಂಡತಿ ಪದ್ಮಾವತಿ ಅಥವಾ ಅವನ ಆಸ್ಥಾನದ ಯಾರಾದರೂ ಪ್ರಮುಖರು ಇರುತ್ತಿದ್ದರು. ಹೀಗಾಗಿ ಮೈಲಾರಲಿಂಗನಿಗೆ ಹಣವನ್ನು ಮರಳಿ ಪಡೆಯುವುದು ಕಷ್ಟವಾಯಿತು. ಅದನ್ನು ಬಿಡುವಂತೆಯೂ ಇಲ್ಲ. ಕೊನೆಗೆ ಬೇಸರವಾಗಿ ಒಂದು ದಿನ ಪದ್ಮಾವತಿ ತಿಮ್ಮಪ್ಪನ ಜೊತೆಯಲ್ಲಿರುವಾಗಲೇ ಮೈಲಾರ ಅವನ ಮನೆಗೆ ನುಗ್ಗಿ ತನ್ನ ಡಮರುಗವನ್ನು ಬಾರಿಸಿ ಕೊಟ್ಟ ಸಾಲವನ್ನು ಮರಳಿಸುವಂತೆ ಕೇಳಿಯೇ ಬಿಟ್ಟ. ಆಗ ತಿಮ್ಮಪ್ಪ ಮೈಲಾರಲಿಂಗನಿಗೆ ಹಾಕಿದ್ದ ಶರತ್ತು ನೆನಪಿಸಿ, ನೀನು ಮಾತಿಗೆ ತಪ್ಪಿದೆ. ಆದ್ದರಿಂದ ನಿನ್ನ ಹಣವನ್ನು ಮರಳಿ ಕೊಡುವುದಿಲ್ಲ. ನಿನ್ನ ಹಣ ಗೋವಿಂದಾ ಗೋವಿಂದ ಎಂದು ಹೇಳಿದ. ಆಗಿನಿಂದ ಮೈಲಾರಲಿಂಗ ಹುಚ್ಚನಂತೆ ಎಲ್ಲ ಕಡೆಗೂ ಏಳು ಕೋಟಿ ಏಳು ಕೋಟಿ ಎಂದು ಅಲೆದಾಡುತ್ತಿದ್ದಾನಂತೆ. ಇದೊಂದು ಐತಿಹ್ಯವೋ ಅಥವಾ ಕಟ್ಟು ಕಥೆಯೋ ಗೊತ್ತಿಲ್ಲ. ಆದರೂ ಮೈಲಾರದಲ್ಲಿ ಮುಖ್ಯ ದೇವಾಲಯದ ಹಿಂಭಾಗದಲ್ಲಿ ಯೋಗಮುದ್ರೆಯಲ್ಲಿ ಕುಳಿತಿರುವ ವಿಷ್ಣುವಿನ ಮೂರ್ತಿಯಿದೆ. ಜನರು ಯೋಗ ಮುದ್ರೆಯಲ್ಲಿ ಕುಳಿತ ನಾರಾಯಣನನ್ನು "ಕೈಯ್ಯಲ್ಲಿ ಗೂಟಹೊಡೆದ ಸ್ಥಿತಿಯಲ್ಲಿ" ಕುಳ್ಳಿರಿಸಿದವನು ಮೈಲಾರನೇ ಎಂದು ನಂಬುತ್ತಾರೆ.[13]

**ಏಳು ಕೋಟಿ ಕೊಡಲಿಲ್ಲ – ಮೈಲಾರನ ತೇರು ಎಳೀಲಿಲ್ಲ** ಎಂಬುದು ಇದೇ ಗಾದೆಯ ಇನ್ನೊಂದು ಪಾಠಾಂತರ. ಇದಕ್ಕೆ ಸಂಬಂಧಿಸಿದ ವೈಶಿಷ್ಟ್ಯವನ್ನು ಗಮನಿಸುವುದಾದರೆ ಉತ್ತರ ಕರ್ನಾಟಕದ ಎಲ್ಲ ದೇವರ ಜಾತ್ರೆಗಳಲ್ಲಿ ರಥೋತ್ಸವಕ್ಕೆ ಬಹಳ ಪ್ರಾಮುಖ್ಯತೆಯಿದೆ. ಜಾತ್ರೆ ಎಂದರೆ ರಥ ಎಳೆಯಲೇ ಬೇಕು ಎಂಬಷ್ಟು ಮಹತ್ವ ಈ ರಥೋತ್ಸವದ್ದು. ಆದರೆ ಕರ್ನಾಟಕಾಂಧ್ರ – ಮಹಾರಾಷ್ಟ್ರಗಳಲ್ಲಿ ಹರಡಿರುವ ಈ ದೈವಕ್ಕೆ ರಥೋತ್ಸವಿಲ್ಲ. ಮೈಲಾರಲಿಂಗನ ಧರ್ಮದರ್ಶಿಗಳಾದ ಶ್ರೀ ಶ್ರೀ ವೆಂಕಪ್ಪಯ್ಯ ಒಡೆಯರ ಅವರ ಸೋದರ ಮಾವಂದಿರಾದ ಶ್ರೀ ತಮ್ಮಣ್ಣ ಒಡೆಯರ ಅವರ ಹೇಳಿಕೆಯ ಪ್ರಕಾರ ಮೈಲಾರದ ಜಾತ್ರೆಯಲ್ಲಿ ಮೊದಲು ರಥೋತ್ಸವವಿತ್ತು. ಆದರೆ ಸುಮಾರು ವರ್ಷಗಳ ಮೊದಲು ಈ ರಥ ಅಗ್ನಿಗಾಹುತಿಯಾಯಿತು. ಬಳಿಕ ಹೊಸ ರಥವನ್ನು ನಿರ್ಮಿಸುವ ಪ್ರಯತ್ನಗಳು ನಡೆದವಾದರೂ, ಹೊಸ ರಥ ನಿರ್ಮಿಸಿದರೆ ಅಪಾಯಗಳೇ ಹೆಚ್ಚು ಎಂಬ ನಂಬಿಕೆಯಿಂದ ಈ ಪ್ರಯತ್ನ ಅರ್ಧದಲ್ಲಿಯೇ ನಿಂತು ಹೋಯಿತು. ಆದ್ದರಿಂದ ಏಳು ಕೋಟಿ ಕೊಡಲಿಲ್ಲ, ತೇರು ಎಳೀಲಿಲ್ಲ ಎಂಬ ಗಾದೆ ಹುಟ್ಟಿಕೊಂಡಿತು ಎಂದು ಹೇಳಬಹುದು. ಆದರೆ ಈ ಪಾಠಾಂತರ ಬಹಳ ಈಚಿನದೆಂದು ಹೇಳಬಹುದು.

ಈ ಗಾದೆಯನ್ನು ವಿಶ್ಲೇಷಿಸುವಾಗ ಇದಕ್ಕೆ ಸಂಬಂಧಪಟ್ಟ ಹಾಗೆ ಇನ್ನೊಂದು ವಿಶೇಷವನ್ನು ಮೈಲಾರದಲ್ಲಿರುವ ಭಕ್ತರೊಬ್ಬರು ಹೀಗೆ ಹೇಳುತ್ತಾರೆ. ಮೂಲತಃ ಈ ಗಾದೆಯ ಮೂಲರೂಪ ಏಳು ಕೋಟಿ ಕೂಡಲಿಲ್ಲ (ಸೇರಲಿಲ್ಲ ಎಂಬರ್ಥದಲ್ಲಿ) ಇದ್ದಿರಬಹುದು. ಮಣಿಕಾಸುರ ವಧೆಯ ಸಂದರ್ಭದಲ್ಲಿ ಸೇರಿದ ಜನ ಒಟ್ಟು ಏಳು ಕೋಟಿ. ಆದ್ದರಿಂದ ಮೈಲಾರಲಿಂಗನ ಜಾತ್ರೆಗೆ ಒಟ್ಟು ಏಳು ಕೋಟಿ ಜನ ಸೇರಬೇಕು. ಆದರೆ ಇದುವರೆಗೂ ಅಷ್ಟು ಕೋಟಿ ಜನ ಸೇರಲು ಸಾಧ್ಯವಾಗಿಲ್ಲ, ಆದ್ದರಿಂದ **ಏಳು ಕೋಟಿ ಕೂಡಲಿಲ್ಲ; ಮೈಲಾರನ ತೇರು ಎಳೀಲಿಲ್ಲ** ಎಂಬ ಗಾದೆಯ ರೂಪವೇ ಸರಿಯೆನಿಸುತ್ತದೆ.

ಈ ಗಾದೆಗೆ **ಏಳುಕೋಟಿ ಕೂಡಲಿಲ್ಲ; ತಿಮ್ಮಪ್ಪನ ಸಾಲ ಹರೀಲಿಲ್ಲ** ಎಂಬ ಇನ್ನೊಂದು ಪಾಠಾಂತರವೂ ಇದೆ. ಒಂದು ಐತಿಹ್ಯದಂತೆ ತಿಮ್ಮಪ್ಪನೇ ಮೈಲಾರನ ಮದುವೆ ಮಾಡುವಾಗ ಕೊಟ್ಟ ಹಣವನ್ನು ವಸೂಲು ಮಾಡಲು ಮೈಲಾರಕ್ಕೆ ಬರುತ್ತಾನೆ.

ಆದರೆ ಮೈಲಾರ ತನ್ನ ಚಾಣಾಕ್ಷತನದಿಂದಾಗಿ ತಿಮ್ಮಪ್ಪನಿಗೆ ಹಣ ಸಿಗದಂತೆ ಮಾಡುತ್ತಾನೆ. ಕೊನೆಗೆ ಊರವರ ಮಧ್ಯಸ್ಥಿಕೆಯಿಂದಾಗಿ "ಏಳು ಕೋಟಿ ಜನ ಸೇರಿದಾಗ ನಿನ್ನ ಸಾಲ ಮರುಳಿಸುತ್ತೇನೆ" ಎಂದು ಹೇಳುತ್ತಾನೆ ಆದ್ದರಿಂದ ತನ್ನ ಸಾಲ ವಸೂಲಿಗಾಗಿ ತಿಮ್ಮಪ್ಪ ಏಳು ಕೋಟಿ ಜನರನ್ನು ಸೇರಿಸುವ ಪ್ರಯತ್ನ ಮಾಡುತ್ತಲೇ ಇದ್ದಾನೆ. ಆದ್ದರಿಂದ **ಏಳು ಕೋಟಿ ಕೂಡಲಿಲ್ಲ (ಜನ ಸೇರಲಿಲ್ಲ); ತಿಮ್ಮಪ್ಪನ ಸಾಲ ಹರೀಲಿಲ್ಲ** ಎಂಬ ಗಾದೆ ಹುಟ್ಟಿದೆ ಎಂದು ಹೇಳಬಹುದು.

ಮೈಲಾರಲಿಂಗನಿಗೆ ಸಂಬಂಧಿಸಿದಂತೆ ಇರುವ ಇನ್ನೊಂದು ಗಾದೆ – **ಮಂದಿ ಕರಕೊಂಡು ಮೈಲಾರಕ್ಕೆ ಬಾ.** ಇದು ಎಷ್ಟೊಂದು ಪ್ರಸಿದ್ಧ ಎಂದರೆ ಈಗಲೂ ಜನ ಮೈಲಾರದ ಜಾತ್ರೆಗೆ ಒಬ್ಬೊಬ್ಬರೇ ಬರುವುದೇ ಇಲ್ಲ. ಮೊದಲಂತೂ ಎತ್ತಿನ ಗಾಡಿಗಳಿದ್ದ ಕಾಲದಲ್ಲಿ ಒಟ್ಟಿಗೆ ನೂರಾರು ಚಕ್ಕಡಿಗಳು ಗುಂಪಿನಲ್ಲಿ ಬರುತ್ತಿದ್ದವು. ಬಹುಶಃ ಕಾಡಿನ ದಾರಿಯಾದ್ದರಿಂದ ಹೀಗೆ ಗುಂಪಾಗಿ ಪ್ರಯಾಣ ಮಾಡಿದರೆ ಕಾಡು ಪ್ರಾಣಿಗಳ ಅಥವಾ ಕಳ್ಳ ಕಾಕರ ಭಯದಿಂದ ಮುಕ್ತರಾಗಬಹುದೆಂಬ ಭಾವನೆಯೂ ಇದಕ್ಕೆ ಕಾರಣವಿದ್ದೀತು. ಆದರೆ ಮೇಲಿನ ಐತಿಹ್ಯದೊಡನೆ ಗಮನಿಸಿದಾಗ ಜನರ ನಂಬಿಕೆಯಲ್ಲಿ ತಿರುಪತಿ ತಿಮ್ಮಪ್ಪನ ಸಾಲದ ವಿಚಾರವೇ ಇಲ್ಲಿ ಪ್ರಮುಖ ಸ್ಥಾನ ಪಡೆದಿದೆ ಎನ್ನಬಹುದು.

**ಒಗಟುಗಳು :**

ಒಗಟುಗಳು ಬುದ್ಧಿಗಮ್ಯ, ಚಿಂತನ ಪ್ರೇರಿತ ಸಾಹಿತ್ಯ ಪ್ರಕಾರಗಳು. ಇವು ಕಾಲ್ಪನಿಕ ಹಾಗೂ ಕೃತಕ. ಮೈಲಾರಲಿಂಗನಿಗೆ ನೇರವಾದ ಸಂಬಂಧವಿರುವ ಒಗಟುಗಳು ತುಂಬಾ ಕಡಿಮೆಯೆಂದೇ ಹೇಳಬಹುದು. ಆದರೆ ಮೈಲಾರ ಆಚರಣೆಗಳು ಹಾಗೂ ಭಕ್ತರನ್ನು ಕುರಿತಾದ ಕೆಲ ಒಗಟುಗಳು ಅಲ್ಲಲ್ಲಿ ಕಂಡು ಬರುತ್ತವೆ.

**"ಕೋರಿ ಅಂಗಿ ತೊಟ್ಟಾನ ; ಕೈಯಾಗ ಡಮರು ಹಿಡಿದಾನ"** – ಎಂದಾಗ ಸಹಜವಾಗಿಯೇ ಉತ್ತರ ಬರುವುದು ಮೈಲಾರನ ಭಕ್ತರಾದ 'ಗೊರವರು' ಎಂಬುದು.

**"ಏಳು ಕೋಟಿ ಭಕ್ತರಿಗೆ ಒಬ್ಬನೇ ದೇವರು"** – ಈ ಒಗಟಿಗೆ ಉತ್ತರ 'ಮೈಲಾರಲಿಂಗ' ಎಂಬುದು.

**"ಮಲ್ಲನಿಗೆ ಅರಿ ; ತಿಮ್ಮನಿಗೆ ನರಿ"** – ಎಂಬುದೂ ಸಹ 'ಮೈಲಾರ'ನನ್ನು ಕುರಿತಾದ ಒಗಟಾಗಿದೆ. ಈ ರೀತಿಯ ಒಗಟುಗಳು ತುಂಬಾ ಅಪರೂಪವಾದರೂ ಅಲ್ಲಲ್ಲಿ ಕಂಡು ಬರುತ್ತವೆ. ಸಾಂದರ್ಭಿಕವಾಗಿ ಹುಟ್ಟಿಕೊಂಡ ಈ ರೀತಿಯ ಒಗಟುಗಳ ಸಂಗ್ರಹ ಇಂದಿನ ಅನಿವಾರ್ಯತೆಯಾಗಿದೆ.

**ಒಡಬು :**

ಉತ್ತರ ಕರ್ನಾಟಕ ಅತ್ಯಂತ ಪ್ರಚಲಿತ ಸಾಹಿತ್ಯದಲ್ಲಿ ಒಡಬುಗಳದು ಅಗ್ರ ಸ್ಥಾನ. ಶುಭ ಸಮಾರಂಭಗಳಲ್ಲಿ ಆರತಿ ಬೆಳಗುವಾಗ, ಹೊಸದಾಗಿ ಮದುವೆಯಾಗಿ ಗಂಡನ ಮನೆಗೆ ಹೋಗುವಾಗ ಅಥವಾ ಯಾವುದೇ ಶುಭ ಸಂದರ್ಭಗಳಲ್ಲಿ ಮುತ್ತೈದೆಯಾದವರು ನೇರವಾಗಿ ಗಂಡನ ಹೆಸರನ್ನು ಹೇಳದೇ ಅವನ ಗುಣ ಸ್ವಭಾವಕ್ಕೆ ಹೊಂದಿಸಿ, ಅದಕ್ಕೆ ಒಪ್ಪುವ ಹಾಗೆ ವಿಶೇಷಣ ಸೇರಿಸಿ ಹೇಳುವುದು ಸಾಮಾನ್ಯ. ಮೈಲಾರಲಿಂಗನ ಭಕ್ತರಲ್ಲಿ ಕಂಡುಬರುವ ಈ ರೀತಿಯ ಒಡಬುಗಳಲ್ಲಿ ಮೈಲಾರಲಿಂಗನ ಆಚರಣೆ, ಪವಾಡಗಳು ಉಪಮೆಗಳಾಗಿ ಕಂಡು ಬರುತ್ತವೆ. ಆದರೆ ಇವುಗಳನ್ನು ಒಂದು ಚೌಕಟ್ಟಿನಲ್ಲಿ ಸಂಗ್ರಹಿಸುವ ಕಾರ್ಯ ಈವರೆಗೂ ನಡೆದಿಲ್ಲ. ಹೀಗಾಗಿ ಸಾಂಪ್ರದಾಯಿಕವಾಗಿ ಈ ಒಡಬುಗಳು ಆಗೀಗ ಹೊರ ಬಂದರೂ ಆ ಕ್ಷಣದ ಬಳಿಕ ಕಾಣೆಯಾಗುವುದೇ ಹೆಚ್ಚು. ಇವುಗಳನ್ನು ಸಂಗ್ರಹಿಸಿ ಅವುಗಳಿಗೊಂದು ರೂಪ ಕೊಡುವ ಅವಶ್ಯಕತೆಯಿದೆ. ನನ್ನ ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ದೊರೆತ ಒಂದೆರಡು ಒಡಬುಗಳನ್ನಿಲ್ಲಿ ನೋಡಬಹುದು.[14]

**ಗಿರಿಯಲ್ಲಿ ಶ್ರೇಷ್ಠ ಗಿರಿ ಮೈಲಾರಗಿರಿ**
**ನಮ್ಮನೆಯಲ್ಲಿ ............................ ರವರೇ ನನ್ನ ಸಿರಿ**

ಎಂದು ಮೈಲಾರಗಿರಿಯನ್ನು ಉಪಮೆಯಾಗಿ ಬಳಸಿ ಪತಿಯನ್ನು ತನ್ನ ಸಿರಿಯನ್ನಾಗಿ ಮುತ್ತೈದೆ ಹೇಳಿದ್ದಾಳೆ. ಇಲ್ಲಿ ಮೊದಲ ಸಾಲಿಗೂ ಎರಡನೆಯ ಸಾಲಿಗೂ ನೇರ ಸಂಬಂಧವಿರದಿದ್ದರೂ ಪ್ರಾಸಕ್ಕೆ ಮಹತ್ವವಿರುವುದನ್ನು ಗಮನಿಸಬಹುದು.

**ಏಳ್ಕೋಟಿ ಮೈಲಾರ ಮಲ್ಲನ ಗಂಡ**
**ಬಿಳಿ ಕುದುರಿ ಮಲ್ಲಣ್ಣ ಮಣಿಕನ ಕೊಂದ**
**............................ ರವರ ಜೊತೆ ಬಾಳುವುದೇ ನನಗಾನಂದ**

ಹೀಗೆ ಪ್ರಾಸ ಪ್ರಧಾನವಾದ ಒಡಬುಗಳು ಮದುವೆ, ಮುಂಜಿ ಮೊದಲಾದ ಶುಭಸಮಾರಂಭಗಳಲ್ಲಿ ಕಾಣಿಸುವುದುಂಟು. ಇವುಗಳ ಅಧ್ಯಯನದ ಪ್ರಸ್ತುತತೆಯನ್ನು ಅರಿತು ಆಸಕ್ತರು ಈ ಕಾರ್ಯವನ್ನು ಮಾಡಿದಲ್ಲಿ ಜನಪದ ಲೋಕಕ್ಕೊಂದು ಅಮೂಲ್ಯ ಕೊಡುಗೆ ನೀಡಿದಂತಾಗುತ್ತದೆ.

**ಬೈಗುಳು :**

ಬೈಗುಳು ಜನಪದ ಸಾಹಿತ್ಯದ ವೈಶಿಷ್ಟ್ಯಪೂರ್ಣವಾದ ಅಂಗವಾಗಬಲ್ಲುದಾದರೂ ಇದರ ಬಗ್ಗೆ ಸಂಶೋಧಕರ, ಆಸಕ್ತರ ಗಮನ ಹರಿದಿಲ್ಲವೆನ್ನುವುದು ದುರದೃಷ್ಟಕರ. ಆದರೆ ಕೋಪದ ಸಂದರ್ಭದಲ್ಲಿ ತಮ್ಮ ನಡವಳಿಕೆಗಳು, ಪರಿಸರದಲ್ಲಿನ ಅನುಭವಗಳು, ಕಂಡು ಕೇಳಿದ ಘಟನೆಗಳು ಬೈಗುಳಗಳಿಗೆ ಸಾಮಗ್ರಿಯನ್ನು ಒದಗಿಸುತ್ತವೆ. ಉದಾಹರಣೆಗೆ ಹೇಳುವುದಾದರೆ "ಯಾಕೆ ನಾಯಿ ತರ ಕಾಲುಕೆರೆದು ಜಗಳಕ್ಕೆ ಬರುತ್ತೀ"? ಇಲ್ಲಿ ಬರಿ ಜಗಳಕ್ಕೆ ಏಕೆ ಬರುತ್ತೀ ಎಂದು ಕೇಳಿದರೆ ಅಷ್ಟೊಂದು ಮಾರ್ಮಿಕವಾಗಿರುವುದಿಲ್ಲ. ಅದನ್ನೇ ಕೆಲ ಉದಾಹರಣೆಗಳು, ಪ್ರಸಂಗಗಳೊಡನೆ ಸೇರಿಸಿ ಹೇಳಿದರೆ ಬೈಗುಳಿಗೆ ಒಂದು ರೀತಿಯ ಶಕ್ತಿ ಬರುತ್ತದೆ. ಎದುರಾಳಿಯನ್ನು ಹೀಗೆ ನೇರವಾಗಿ ಸಿಟ್ಟಿಗೇಳಿಸುವ ಬೈಗುಳು ಒಂದು ರೀತಿಯಲ್ಲಿ ಪಟಾಕಿಯಿದ್ದಂತೆ. ಬೈಗುಳುಗಳು ಹೆಚ್ಚಾಗಿ ಅಶ್ಲೀಲವಾಗಿರುತ್ತವೆ. ಇವು ಪರಸ್ಪರ ಪೈಪೋಟಿಯಲ್ಲಿ ಮುಂದುವರಿಯುವುದೂ ಉಂಟು. ಬೈಗುಳಗಳಿಗೆ ಸಾಮಾನ್ಯವಾಗಿ ಎರಡು ಮುಖಗಳಿರುತ್ತವೆ. ಒಂದು ಸ್ನೇಹದ್ದು; ಮತ್ತೊಂದು ದ್ವೇಷದ್ದು. ಸ್ನೇಹದ ಬೈಗುಳು ತೀರ ಆನುಷಂಗಿಕ. ಆದರೆ ದ್ವೇಷದ ಬೈಗುಳು ಮಾರ್ಮಿಕವಾಗಿರುತ್ತದೆ.

ಮೈಲಾರಲಿಂಗನಿಗೆ ಸಂಬಂಧಿಸಿದಂತೆ ಬೈಗುಳುಗಳನ್ನು ಪಟ್ಟಿ ಮಾಡುವುದು ಸಾಧ್ಯವಿಲ್ಲ. ಏಕೆಂದರೆ ಅವನು ಜನಸಾಮಾನ್ಯರ ದೈವ. ಹೀಗಾಗಿ ಅವನನ್ನು ಬೈದು ಪಾಪ ಕಟ್ಟಿ ಕೊಳ್ಳುವ ಧೈರ್ಯ ಯಾರಿಗೂ ಇಲ್ಲ. ಆದರೆ ನಯಸೇನನಂತಹ ಕವಿಗಳು ಮೈಲಾರನ್ನು, ಅವನ ಆಚರಣೆಗಳನ್ನು ಕುರಿತಾಗಿ ವ್ಯಂಗ್ಯವಾಡಿರುವುದನ್ನು ನಾವು ಕಾಣಬಹುದು. ಚಿತ್ರ ವಿಚಿತ್ರವಾದ ವೇಷಧರಿಸಿದವರನ್ನು ಗೊಗ್ಗಯ್ಯ ಎಂದು ಹಾಸ್ಯಮಾಡುವುದನ್ನು ನಾವು ನೋಡಬಹುದು. ಈ ರೀತಿ ಹಾಸ್ಯಮಾಡುವುದೂ ಬೈಗುಳದ ರೂಪವೇ ಆಗಬಹುದು.

ಮೈಲಾರನ ಆಚರಣೆಗಳಲ್ಲಿ ಬರುವ ಪವಾಡಗಳಲ್ಲಿ ಬಗನೀ ಗೂಟವನ್ನು ಕಾಲಿನ ಮೀನಖಂಡದಲ್ಲಿ ಬಡಿದುಕೊಳ್ಳುವುದು ಅತ್ಯಂತ ಉಗ್ರವಾದುದು. (ಇದಕ್ಕಿಂತ ಉಗ್ರವಾದದು ಶಿರಸ್ ಪವಾಡ. ಆದರೆ ಈಗ ಅದು ನಡೆಯುವುದಿಲ್ಲ) ಇದರ ಉಗ್ರತೆಯನ್ನು ಬಿಂಬಿಸುವಂತೆ – ಇಬ್ಬರ ನಡುವೆ ಜಗಳ ತಾರಕಕ್ಕೇರಿದಾಗ ಮಗನ, ಕೆತ್ತಿ ಬಗನೀ ಗೂಟ ಹೊಡೀಬೇಕೇನು? ಎಂಬ ಮಾತು ಕೇಳಿಬರುತ್ತದೆ.

ಕೆಲಸ ಬೊಗಸೆ ಇಲ್ಲದೇ ಸುತ್ತುವವನನ್ನು ಬೈಯ್ಯುವಾಗ – ನಿನಗಂತೂ ಗೊರವಪ್ಪನಂತೆ ಕೆಲ್ಸ ಬೊಗ್ಸೆ ಇಲ್ಲ; ನಮಗೂ ಇಲ್ಲಂತ ತಿಳ್ದೀಯೋ ಹೆಂಗ ಎಂದು ಬೈಯ್ಯುವುದುಂಟು. ಸಾಮಾನ್ಯವಾಗಿ ಗೊರವರು ಭಿಕ್ಷೆ ಬೇಡಿಯೇ ಹೊಟ್ಟೆಹೊರೆಯುತ್ತಾರೆ ಅದರಿಂದ ಈ ಬೈಗುಳಿನ ತೀವ್ರತೆ ಇನ್ನೂ ಹೆಚ್ಚಿರುತ್ತದೆ.

## ೮. ೪ ಜನಪದಗೀತೆ ಮತ್ತು ಒಡಪುಗಳು

ಒಂದು ದೈವಕ್ಕೆ ಸಂಬಂಧಿಸಿದಂತೆ ದೀರ್ಘಕಾವ್ಯಗಳಂತೆ ಬಿಡಿಪದ್ಯಗಳೂ ಸಹ ಸಾಕಷ್ಟಿರುತ್ತವೆ. ಪುರಾಣದ, ಐತಿಹ್ಯದ, ಪವಾಡಗಳ ಅಂಶಗಳನ್ನು ಒಳಗೊಂಡ ಅಥವಾ ಸ್ತುತಿ ರೂಪದ ಗೀತೆಗಳು ಹಾಗೂ ಒಡಪುಗಳು ಜನಪದರಲ್ಲಿ ಸಾಕಷ್ಟಿವೆ. ಸ್ಥಳದಲ್ಲಿಯೇ ಹೊಸ ಗೀತೆಯೊಂದನ್ನು ಸೃಷ್ಟಿಸುವ ಸಾಮರ್ಥ್ಯವಿರುವ ಜನಪದರು ಅಸಂಖ್ಯ ಗೀತೆಗಳನ್ನು ಹಾಡಿದ್ದಾರೆ. ಆದರೆ ಅವುಗಳ ಸರಿಯಾದ ದಾಖಲೀಕರಣವಾಗದ್ದರಿಂದ ಅವು ಹಾಗೆಯೇ ಮರೆಯಾಗಿ ಹೋಗುವ ಸಾಧ್ಯತೆಯಿದೆ.

**ಜನಪದಗೀತೆ :**

ಮೈಲಾರಲಿಂಗನನ್ನು ಕುರಿತ ಬಿಡಿ ಪದ್ಯಗಳೂ ಸಹ ಸಾಕಷ್ಟು ಸಂಖ್ಯೆಯಲ್ಲಿ ಲಭ್ಯವಿದ್ದರೂ ಅವುಗಳ ಸಂಗ್ರಹ ವ್ಯಾಪಕವಾಗಿ ನಡೆದಿಲ್ಲ. ಈ ದಿಸೆಯಲ್ಲಿ ಡಾ॥ ಎಂ. ಬಿ. ನೇಗಿನಹಾಳ, ಡಾ॥ ಮಂಜುನಾಥ ಬೇವಿನಕಟ್ಟಿ ಹಾಗೂ ಡಾ॥ ಎಸ್. ಎಸ್. ಭದ್ರಾಪೂರ ಅವರು ಸಂಗ್ರಹಿಸಿದ ಗೀತೆಗಳನ್ನು ಬಿಟ್ಟರೆ ಬೇರೆ ಪ್ರಯತ್ನಗಳು ನಡೆದಂತೆ ಕಾಣುವುದಿಲ್ಲ. ಇವನ್ನು ಬಿಟ್ಟರೆ ಮೈಲಾರನ ಮಹಿಮೆಯನ್ನು ಸಾರುವ ಪುರಾಣಗಳಲ್ಲಿ ಕಥಾ ಪುಸ್ತಕಗಳ ಕೊನೆಯ ಭಾಗದಲ್ಲಿ ಒಂದೆರಡು ಪ್ರಾರ್ಥನಾ ಪದ್ಯಗಳನ್ನು ಅಥವಾ ಮಂಗಳಾರತಿ ಹಾಡುಗಳನ್ನು ನಾವು ನೋಡಬಹುದಾಗಿದೆ. ಅದೇ ರೀತಿ ಒಡಬುಗಳನ್ನು ಸಹ ಸಂಗ್ರಹಿಸುವ ಪ್ರಯತ್ನ ನಡೆದಿಲ್ಲ. ಈ ನಿಟ್ಟಿನಲ್ಲಿ ಹೆಚ್ಚಿನ ಪ್ರಯತ್ನಗಳಾಗುವ ಅವಶ್ಯಕತೆಯಿದೆ.

ಮೈಲಾರಲಿಂಗನಿಗೆ ಸೇರಿದ ಹಾಡುಗಳನ್ನು ಸ್ತುತಿಗೀತೆಗಳು ಎಂದು ಕರೆಯಬಹುದು.[15] ಈ ಹಾಡುಗಳಲ್ಲಿ ಏಕತಾನತೆಯಿಲ್ಲ. ಅಲ್ಲಲ್ಲಿ ಮೈಲಾರನ ಪವಾಡಗಳು, ಶೃಂಗಾರ ಪ್ರಸಂಗಗಳು ಕಾಣಸಿಗುತ್ತವೆ. ಪ್ರಸ್ತುತ ಗೀತೆಗಳಲ್ಲಿ ಮಣಿಕ ಮಲ್ಲರನ್ನು ಸಂಹರಿಸಿದ್ದು, ಗಂಗೆ ಮಾಳಿಯನ್ನು ಮದುವೆಯಾದದ್ದು, ಕುರುಬರ ಮಾಳವ್ವ(ತುಪ್ಪದ ಮಾಳವ್ವ)ನನ್ನು ಮತ್ತು ಕೋಮಾಲಿಯನ್ನು ಪ್ರೇಮಿಸಿದ್ದು, ಮೊದಲಾದ ಅಂಶಗಳಿವೆ. ಅದೇ ರೀತಿ ಗೊರವ ಗೊರವಿಯರ ಪೂಜಾ ವಿಧಾನಗಳು, ಹರಕೆಗಳು, ಜಾತ್ರೆಗಳು, ಕಾರಣಿಕ ಮೊದಲಾದ ಅಂಶಗಳೂ ಸಹ ಇಲ್ಲಿನ ಹಾಡುಗಳಲ್ಲಿವೆ. ಇಲ್ಲಿನ ಹೆಚ್ಚು ಪದ್ಯಗಳು ಏಳೆ ಛಂದಸ್ಸಿಗೆ ಸೇರಿವೆ. ಇವುಗಳನ್ನೇ ಜನಪದರು ನಾನಾವಿಧವಾಗಿ ನಾನಾ ಧಾಟಿಗಳಲ್ಲಿ ಹಾಡುವರು. ಕೆಲವೊಮ್ಮೆ ಏಳು ಗಣಗಳನ್ನು ಹನ್ನೊಂದು ಗಣಗಳನ್ನಾಗಿಸಿ (ತ್ರಿಪದಿ ರೂಪದಲ್ಲಿ) ಪರಿವರ್ತಿಸಿಕೊಂಡು ಹಾಡುವರು.

ಮೈಲಾರಲಿಂಗನ ಹಾಡುಗಳಲ್ಲಿ ಉದಯರಾಗಗಳಿಗೆ ಮಹತ್ವನೀಡಿರುವುದನ್ನು ನಾವು ಕಾಣಬಹುದು. ಬೆಳಗಿನ ಜಾವ ಎದ್ದ ಬಳಿಕವೇ ಜೀವನದ ಕ್ರಮ ಸಾಗುವುದರಿಂದ ಮಲ್ಲಯ್ಯನನ್ನು ಎಬ್ಬಿಸಿ ಬಳಿಕ ಅವನನ್ನು ಆರಾಧಿಸುವ ಕಲ್ಪನೆಯನ್ನು ಈ ಉದಯರಾಗಗಳಲ್ಲಿ ನಾವು ಕಾಣಬಹುದು.

ಏಳ ಸ್ವಾಮಿ ಬೆಳಗಾದಾವೋ । ಮೈಲಾರಲಿಂಗ
ಎದ್ದು ಮಜ್ಜನ ಮಾಡಯ್ಯಽಽ ।
ಏಳುತಲೆದ್ದಾನು ಎಡಬಲಽ । ದೇವಾ
ಏಳುತಲೆದ್ದಾನು ಎಡಬಲ ನೋಡ್ಯಾನೋ
ಬ್ಯಾಳಿ ಬೆಲ್ಲವ ಕೂಡಿ ಮಾರಿ ಮಾಡ್ಯಾನೋ ಸ್ವಾಮಿಽಽಽ

ಈ ರೀತಿ ಆರಂಭವಾಗುವ ಉದಯರಾಗಗಳಲ್ಲಿ ಜನಪದ ಸೊಗಸು ಇರುವುದನ್ನು ಗುರುತಿಸಬಹುದು.

ಕಬ್ಬಕ್ಕಿ ಕರಿಹಕ್ಕಿ ನೆಲಗುಬ್ಬೀ । ದೇವಾ
ಕಬ್ಬಕ್ಕಿ ಕರಿಹಕ್ಕಿ ಮೊದಲಾಗಿ

ಪಕ್ಷಿ ಪಾರಿವಾಳ ಗಿಳಿ ಹಿಂಡು ಮೊದಲಾಗಿ
ಏಳಯ್ಯ ಬೆಳಗಾದಾವೋss ।

ಇದೇ ರೀತಿ ಸ್ತುತಿಪದ್ಯಗಳಲ್ಲಿ ತಮ್ಮ ಆರಾಧ್ಯ ದೈವ ಮೈಲಾರನ ಶೌರ್ಯ ವರ್ಣನೆಗೆ ಮಹತ್ವ ನೀಡಲಾಗಿದೆ.

ಅಪ್ಪ ಗುಡದಯ್ಯ ಬರುತಾನ । ರಣದಾಗ
ರಣಗೆಜ್ಜೆ ಎ ತಾನು ಹೊಡಿತಾನೋ । ಕುದುರೆದ್ದು
ಕುದುರೆದ್ದು ಕುಣಿಯುತವ ।
ರಣಕೆ ಗೆಜ್ಜೀ ತಾನು ಹೊಡಿತಾನೋ
ದಯಿತರ ದಂಡು ಮುರದಾನ । ಕುದುರೆದ್ದು
ಕುದುರೆದ್ದು ಕುಣಿಯುತಾವ

ಮೈಲಾರನ ಸೌಂದರ್ಯ ವರ್ಣನೆಗೆ ಸ್ತುತಿ ಪದ್ಯಗಳಲ್ಲಿ ಸಾಕಷ್ಟು ಮಹತ್ವ ನೀಡಲಾಗಿದೆ.

ಹೋಗುತಾನ ಕರಿಯ
ಬಂಗಾರದ ಬಾಕಿನಂತ ದೊರೆಯಾ
ಚದುರ ನಿಂಗಣ್ಣ । ಚಂದ್ರನ ಕಿರಣ
ಭಾಗ್ಯದ ಕೋಟಿ । ಏಳಕೋಟಿ

ಹೀಗೆ ತಮ್ಮ ಆರಾಧ್ಯ ದೈವವನ್ನು ಹೊಗಳುವ ಜನಪದರ ಪರಿ ವಿಶಿಷ್ಟವಾದುದು.

ಹಸುವಿಗೆ ಹಾಲು ಕೊಡ । ಸಿಸುವಿಗನ್ನವ ಕೊಡ
ಸೇರ ಬಂಗಾರ ಏ ಇವರಿಗೆ । ಬಂಡೆಲ್ಲ
ಬಂಡೆಲ್ಲ ಬಂಗಾರವೋ ॥

ಮೈಲಾರದ ಜಾತ್ರೆ ಉತ್ತರ ಕರ್ನಾಟಕದ ಭಾಗದಲ್ಲಿಯೇ ಅತ್ಯಂತ ಪ್ರಸಿದ್ಧವಾದುದು. ಈ ಜಾತ್ರೆಯ ವರ್ಣನೆಯೂ ಒಂದು ಸ್ತುತಿ ಗೀತೆಯಾಗಿ ಬಂದಿದೆ.

ಲೆಕ್ಕವಿಲ್ಲದ ಕೊಲ್ಲಾರಿಯೇನ
ಒಂದಕ ಒಂದು ತಾಕಲಾಡತಾವ

ಲೆಕ್ಕವಿಲ್ಲದ ಕೊಲ್ಲಾರಿಯೇನ
ಕಣ್ಣಿಗೆ ಹರಿದ ಕಾಣುವತ್ತೈತೆ
ಯೋಳು ಕೋಟಿ ಜಾತುರಿಯೇನ
ಮರ್ತ್ಯದೊಳಗೆ ಮೈಲಾರದೇವ

ಮೈಲಾರನಿಗೆ ಸಂಬಂಧಿಸಿದ ಆಚರಣೆಗಳೂ ಉಕ್ತವಾಗಿರುವ ಗೀತೆಗಳಿಗೇನೂ ಕೊರತೆಯಿಲ್ಲ.

ಕಣ್ಣಿಟ್ಟವರ ಬಿಡದೇಳಂದ
ನೆದರಿಟ್ಟವರ ಬಿಡದೇಳಂದ
ಕರಿಯ ಸೀರೆಯ ಉಡಸೇನಂದ
ಹಸಿರ ಬಳಿಯ ಇಡತೇನೆಂದೋ
ಏ ಬೋರಗಿನ್ನರಿ ಹಿಡಸೇನಂದ
ಎಲಿ ಚೆಂಚಿ ಚವುರವ ಹೊರತೀನಂದ್ರ್ಯೋ

ಮೈಲಾರನಿಗೆ ಸಂಬಂಧಿಸಿದ ಬಿಡಿ ಪದ್ಯಗಳಲ್ಲಿ ಅವನ ಪರಿವಾರದೇವತೆಗಳನ್ನು, ಪರಿಸರದ ಊರುಗಳ ದೇವತೆಗಳನ್ನೂ ವರ್ಣಿಸಿದ್ದಾರೆ. ಮೈಲಾರದಲ್ಲಿ ನಡೆಯುವ ಹಲವಾರು ಆಚರಣೆಗಳು, ಕಂಚಾವೀರರ ಪವಾಡಗಳು, ಕಾರಣಿಕ ಹೇಳುವುದು, ಬಿಲ್ಲು ಏರುವುದು ಮೊದಲಾದ ವಿಷಯಗಳು ಉಕ್ತವಾಗಿವೆ. ದೇವರ ವರ್ಣನೆಗೆ ಸಂಬಂಧಿಸಿದ ಅನೇಕ ಪದ್ಯಗಳಲ್ಲಿ ಉಪಮೆಯನ್ನು ಗಮನಿಸಬಹುದು–

ಬಾ ನನ್ನ ಮಾ ಗುರವೆ
ಹಾಲ ಮ್ಯಾಲಿನ ಕೆನಿಯೆ ।ಪ್ಯೆ।
ಹಾಲ ಮ್ಯಾಲಿನ ಕೆನಿಯೆ ।
ಯಾಲಕ್ಕಿ ಗೊನಿಯೆ । ಸಂಪಿಗಿ ತೆನೆಯೆ
ಬಾ ನನ್ನ ಮಾಗುರವೆ

ಮೈಲಾರನ ವೈಶಿಷ್ಟ್ಯವನ್ನು ಇನ್ನೂ ಗಮನಿಸುವುದಾದರೆ

ಹೋಗತಾನ ಕರಿಯ । ಬಂಗಾರದ
ಬಾಕಿನಂಥಾ ದೊರಿಯ ।
ಚದುರ ನಿಂಗಣ್ಣ । ಚಂದ್ರನ ಕಿರಣ
ಭಾಗ್ಯದ ಕೋಟಿ । ಏಳಕೋಟಿ

ಮೈಲಾರನ ಶೃಂಗಾರ ಪ್ರಸಂಗಗಳೂ ಈ ಪದ್ಯಗಳಲ್ಲಿವೆ. ಅವನು ಕೋಮಾಲಿಯನ್ನು ಕರೆತಂದಾಗ ಗಂಗೆ ಮಾಳವ್ವನ ಕೋಪಕ್ಕೆ ಒಳಗಾಗುತ್ತಾನೆ. ಗಂಗೆ ಮಾಳವ್ವ ಕೋಮಾಲಿಯನ್ನೂ ಬಯ್ಯುತ್ತಾಳೆ. ಆಗ ಕೋಮಾಲಿ ಅವಳನ್ನು ಸಂತೈಸುತ್ತ

ಅಕ್ಕ ಮಾಳವ್ವ । ಗಂಗ ಮಾಳವ್ವ
ಅಕ್ಕ ಮಾಳವ್ವ । ಗಂಗವ್ವ
ಯಾತರ ಕದನ । ಬೇಕಾಗಿ ಬಂದೋಕ್ಯಲ್ಲೋ ।
ನಿನ ಗಂಡ, ನಿನ ಗಂಡ
ನಿನ ಗಂಡ ಮೈಲಾರಲಿಂಗ
ತಂದಾನ ಗಂಗವ್ವ । ನಾನಾಗಿ ಬಂದೋಕ್ಯಲ್ಲೋ ।

ಎಂದು ಹೇಳುತ್ತಾಳೆ.

ಮೈಲಾರದ ಜಾತ್ರೆಯ ವೈಶಿಷ್ಟ್ಯವೇ ಬೇರೆ. ಇತರ ಜಾತ್ರೆಗಳಂತೆ ಒಂದೇ ದಿನಕ್ಕೆ ಬಂದು ಹೋಗುವ ಜಾತ್ರೆ ಇದಲ್ಲ. ಕೊಲ್ಲಾರಿ ಬಂಡಿ ಕಟ್ಟಿಕೊಂಡು ಹತ್ತಾರು ಮೈಲು ದೂರ ಹೋಗುವ ದಾರಿಯಾದ್ದರಿಂದ ಬುತ್ತಿ ಕಟ್ಟಿಕೊಂಡೇ ಹೊರಡುತ್ತಾರೆ. ಅದನ್ನೇ ಹೇಳುವ ಗೀತೆಯೊಂದು ಹೀಗಿದೆ –

ಮೈಲಾರ ಎಂಬುದು ತೆಳಗೈತೋ ಮ್ಯಾಲೈತೋ
ನೋಡಿ ಬರೂನು ಹಡದವ್ವ ॥
ರೊಟ್ಟಿ ಬುತ್ತಿ ಸವಿದು । ಹಡೆದವ್ವ
ಮೈಲಾರಕ ಹೊಗೂನ್ನಡಿಯ ॥ ಪ ॥

ಈ ಮೈಲಾರ ಜಾತ್ರೆಯ ವೈಶಿಷ್ಟ್ಯ ಇನ್ನೂ ಮುಂದುವರಿದು
ದೈತ್ಯರ ಏ ದಂಡು ಮುರಿದಾನು ಏಳಕೋಟಿ
ಹಬ್ಬಿ ಗಿಡ್ಡಕ ತಾ ಬೆಳದಾನೋ ॥ ರೊಟ್ಟಿ ಬುತ್ತಿ... ॥
ದೇಸಕ್ಕ ಹೆಸರಾಗಿ ಮೆರೆದಾನು ಏಳ್ ಕೋಟಿ
ದೇಶದ ಭಕ್ತರ್ನ ಏ ಕರಸ್ಯಾನೋ ॥ ರೊಟ್ಟಿ ಬುತ್ತಿ... ॥

ಭಕ್ತರು ಭಕ್ತಿಯಿಂದ ಕರೆದರೆ ಮಲ್ಲಯ್ಯ ತಾನೇ ಬರುತ್ತಾನೆ ಎಂದು ವರ್ಣಿಸುವ ಗೀತೆಯಲ್ಲಿ

ಒಲಿದರೆ ಬರುವನವ್ವ । ಮಲ್ಲಯ್ಯ
ಕರೆದರೂ ಬರುವನ
ಭಕ್ತರ ಮನೆಯಲ್ಲಿರುವನ
ಭಕ್ತರ ಮನದಲ್ಲಿರುವವನ ॥
ಎಂದು ಅವನ ಹಿರಿಮೆಯನ್ನು ತಿಳಿಸಲಾಗಿದೆ.

ಅವನ ಭಕ್ತರ ಆಚರಣೆಗಳು ಹೇಗಿವೆ, ಅವುಗಳ ವಿಶೇಷವೇನು ಎಂಬುದನ್ನು ಈ ಮುಂದಿನ ಪದ್ಯದಲ್ಲಿ ನೋಡಬಹುದು.

ಕಂಬ್ಳಿ ಅಂಗಿ ಗೊರವರ ನೋಡು ಕಂಚಿನ ದೋಣಿ ವಗ್ಗರ ನೋಡು
ಮಿಂಚುವಾಗಿ ಕಾಣಸತಾರ ಕಬ್ಬಿಣ ಸರಪಣಿ ನುಗ್ಗು ಮಾಡತಾರ –

ಈ ರೀತಿಯ ಪದ್ಯದಲ್ಲಿ ಕಂಚಾವೀರರು ಮಾಡುವ ಸರಪಣಿ ಪವಾಡವನ್ನು ಕುರಿತು ಹೇಳಲಾಗಿದೆ. ಇನ್ನೊಂದು ರೀತಿಯ ಪವಾಡವಾದ ಬಗನಿ ಗೂಟದ ಬಗ್ಗೆ ಹೇಳುವ ಪದ್ಯ ಈ ರೀತಿಯಾಗಿದೆ

ಮುಳ್ಳು ನೆಟ್ಟ ನೆವದಿಂದ ಮೂರುದಿನ ಮಲಗತಾರ
ಬಗನಿ ಗೂಟ ಕಾಲಾಗ ಬಡಕೊಂಡ ಹಗಲು ರಾತ್ರಿ ತಿರುಗತಾನ
ಕಂಚೇವೀರರ ಕರಸುತಾರಾ ಕಾಲೊಳು ಗೂಟಾ ಬಡಿದಾಡತಾರ
ಮೂರು ಮನಿ ಕಾರಿ ಮುಳ್ಳೊಂದಾರುಪಾರು ಮಾಡೊಂದೆಳೆಯುತಾರ ॥

ಕುರುಬರ ಮಾಳವ್ವನೊಂದಿಗೆ ಮೈಲಾರನ ಶೃಂಗಾರ ಲೀಲೆಗಳೂ ಸಹ ಬಿಡಿ ಪದ್ಯದ ರೂಪದಲ್ಲಿ ಸಿಗುತ್ತವೆ. ಗಂಗಿ ಮಾಳಮ್ಮ ತನ್ನ ಮೇಲೆ ಸವತಿಯನ್ನು ತಂದ ಮೈಲಾರನನ್ನು ಮನೆಯೊಳಗೆ ಕರೆದುಕೊಳ್ಳುವುದಿಲ್ಲ ಆಗ ಮೈಲಾರನ ಹಿಂಬಾಲಕರು

ಲಿಂಗವೇನೋ । ಲಿಂಗವೇನೋ
ಸ್ವಾಮಿ ಬಂದಾನೇನೋ ।
ಎಂದು ಹೇಳುವರು ಆಗ ಗಂಗಿ ಮಾಳಮ್ಮ
ಚಿಕ್ಕಯ್ಯ ಜೂಜಯ್ಯ ತೊಡಿಮ್ಯಾಲೆ ಮಾರಾಯ
ನಾ ಹೆಂಗೆ ಕದವ ತೆರೆಯಲೋ ।

ಎಂದು ಬಾಗಿಲು ತೆಗೆಯಲು ಸಾಧ್ಯವಿಲ್ಲ ಎಂದು ಹೇಳುತ್ತಾಳೆ. ಮುಂದೆ

ಮತ್ತೊಂದು ಹೆಣ್ಣಿನ
ಮನಿಗೋದ್ಯೋ ಮಾರಾಯಾ
ಮತ್ಯಾಕ ಇಲ್ಲಿ ಬಂದೆ ಬಂದೆ
ಲಿಂಗವೇನೋ ।
ಮತ್ಯಾಕನು ಇಲ್ಲಿ
ಬಂದೀದೆ ನೂರಾರು
ಬಂದ ದಾರೀಲಿ ಹೊರಟೋಗೆ

ಎಂದು ಹೇಳುತ್ತಾಳೆ.

ಮೈಲಾರನ ಭಕ್ತರು ತಮ್ಮ ಆರಾಧ್ಯ ದೈವದ ಲೀಲೆಗಳನ್ನು ಪರಿ ಪರಿಯಾಗಿ ಹೊಗಳಿದ ಅನೇಕ ಪದ್ಯಗಳು ಪ್ರಚಲಿತದಲ್ಲಿವೆ. ಅವನ ಎಲ್ಲ ಲೀಲೆಗಳೂ ಭಕ್ತರಿಗೆ ಅಪ್ಯಾಯಮಾನವಾದುವೇ ಆಗಿವೆ.

ಏಳು ಕೋಟಿ ಏಳು ಕೋಟಿ ಎನ್ನುತ
ಒಳಗ ಇಣುಕುತ ಕೂಗಿದನು
ಮಾಳಮ್ನ ತಾಯಿ ಬಂದಳು ಹೊರಗ
ಮರತುಂಬ ಕಾಳು ನೀಡಾಕ ॥

ಆದರೆ ಮೈಲಾರಲಿಂಗನ ಆಶೆಯೇ ಬೇರೆ. ಅವನಿಗೆ ಮಾಳಮ್ಮನೇ ಬಂದು ಭಿಕ್ಷೆ ನೀಡಬೇಕು. ಆದಕ್ಕಾಗಿಯೇ ಅವನು ಹೊಸ ಆಟ ಕಟ್ಟುತ್ತಾನೆ.

ಮುದುಕಿಯ ಕೈಯಾನ ಭಿಕ್ಷೆ ಬೇಡಂದ
ಸೋಗಲಿ ಹಿಡಿದನು ಮೈಲಾರ ಸ್ವಾಮಿ
ಮಾಳಿಯೆ ಬಂದಳು ಭಿಕ್ಷೆ ನೀಡಾಕ
ಮೈತುಂಬ ಸೆರಗು ಹೊತ್ಕೊಂಡು ॥

ಈಗ ಮೈಲಾರ ಕಾಳು ನೀಡಿಸಿಕೊಂಡು, ಅವಳು ಒಳಗೆ ಹೋಗುವಾಗ ಅವಳ ಸೆರಗು ಹಿಡಿದು ಜಗ್ಗುತ್ತಾನೆ. ಅವಳು ಗಾಬರಿಯಿಂದ ತನ್ನ ಮಗುವನ್ನು ಹೊರಗೆ ಬಿಟ್ಟು ಒಳಗೆ ಓಡಿ ಹೋಗುತ್ತಾಳೆ. ಆಗ ಮೈಲಾರ ಆ ಕೂಸನ್ನು ಎತ್ತಿ ಹಿಡಿದುಕೊಂಡು ಗುಡ್ಡದ ಕಡೆ ನಡೆಯುತ್ತಾನೆ. ಇತ್ತ ಯುದ್ಧಕೆಂದು ಹೋದ ಮಾಳಿಯ ಗಂಡ ಕಲಿರಾಯ ಮರಳಿ ಬಂದಾಗ ತನ್ನ ತಾಯಿಯಿಂದ ಸುದ್ದಿಯನ್ನು ತಿಳಿದು ಸ್ವಾಮಿಯನ್ನು ಕೊಲ್ಲಲೆಂದು ಹೊರಟನು. ಇದನ್ನು ತಿಳಿದ ಮೈಲಾರ ತನ್ನ ಭಂಡಾರವನ್ನು ಚೆಲ್ಲಿ ಮಾಳಿಯ ಗಂಡ ಕಲಿರಾಯನನ್ನು ಮನೆ ಸಮೇತ ಭಸ್ಮ ಮಾಡುತ್ತಾನೆ. ಬಳಿಕ ಮಾಳಿಯೊಡನೆ ಏಳು ಗುಡ್ಡಗಳನ್ನು ದಾಟಿ ಬಂದ ಮೈಲಾರ ಅಲ್ಲಿಯೇ ಕಲ್ಲಾಗಿ ನಿಲ್ಲುತ್ತಾನೆ.

ಗುಡ್ಡವ ಹತ್ತಿ ಗುಡ್ಡವ ಇಳಿಯುತ
ಏಳು ಗುಡ್ಡದ ಖಣವಿಗೆ ಬಂದಾನ
ಮಾಳಮ್ಮನ ಜೊತೆಗೂಡಿ ಬಂದನು ಸ್ವಾಮಿ
ಅಲ್ಲೆ ಕಲ್ಲಾಗಿ ನಿಂತಿಹನು ॥

ಮಂಗಳಾರತಿ ಹಾಡುಗಳೂ ಸಹ ಮೈಲಾರಲಿಂಗನ ಮಹಿಮೆಗಳನ್ನು ಸಾರುತ್ತವೆ.

ಚಂಡ ವಿಕ್ರಮ ಮಲ್ಲಪುಂಡ ನುಸಿ ರಕ್ಕಸರು
ಕಂಡ ಕಂಡವರ ಬಹು ಕಾಡುತಿರಲು
ಭಂಡರವನು ದಂಡಿಸಲು ಗಂಡುಗಲಿವಂದ
ಮಾರ್ತಾಂಡ ಭೈರವ ವೇಷ ಮಂಡಿಸಿದಾವಗೇ ॥
ಜಯ ಮಂಗಲಂ ನಿತ್ಯ ಶುಭಮಂಗಲಂ ॥

ಕೆಲವು ಕಡೆ ಶಿವನಿಗೆ ಇರುವ ಮಂಗಳಾರತಿಗಳೇ ಮೈಲಾರಲಿಂಗನಿಗೂ ಸಲ್ಲುವುದುಂಟು.

ಭಸ್ಮಾಸುರನು ತಂದ ಭಸ್ಮ ಧರಿಸಿ
ಎರಿಯ ಹಸ್ತವನಿತ್ತೆ ನೀನವನ ಹರಿಸಿ
ಶರಣೆ ನಂಬೆಕ್ಕನ ಭಕ್ತಿಗೆ ನೀನೊಲಿದೆ
ಕುರಿಯ ಹಕ್ಕಿಯಲ್ಲಿ ಲಿಂಗವ ತೋರಿದೆ
ಪರಶಿವನೆ ನಿನಗೆ ಜಯವಾಗಲೆಂದೆ ॥

ಇತ್ತೀಚೆಗೆ ಸಿನಿಮಾ ಹಾಡುಗಳ ಧಾಟಿಯಲ್ಲಿರುವ ಹೊಸ ಹೊಸ ಹಾಡುಗಳು ಮೈಲಾರದಲ್ಲಿ ಜನಪ್ರಿಯವಾಗುತ್ತಿವೆಯಾದರೂ ಜನಪದದ ಸೊಗಡನ್ನು ಅಲ್ಲಿ ಕಾಣುವುದು ಸಾಧ್ಯವಿಲ್ಲ. ಆದರೆ ಜನ ಮರುಳೋ ಜಾತ್ರೆ ಮರಳೋ ಎಂಬಂತೆ ಒಬ್ಬರನ್ನು ಕಂಡು ಮತ್ತೊಬ್ಬರು ಈ ಗೀತೆಗಳಿಗೆ ಮರುಳಾಗುತ್ತಿರುವುದು ಕಂಡುಬರುತ್ತಿದೆ. ಇದು ಜನಪದದ ಅಸ್ತಿತ್ವದ ದೃಷ್ಟಿಯಿಂದ ಅಪಾಯಕಾರಿ ಅಂಶವಾಗಿದೆ. ಜನಪದವು ತನ್ನತನವನ್ನು ಬಿಟ್ಟುಕೊಡದೇ ಇದುವರೆಗೂ ಬಂದ ರೀತಿಯಲ್ಲಿಯೇ ಬೆಳೆಯಬೇಕು. ಆದರೆ ಆಧುನಿಕತೆಯ ಮೋಡಿಯಲ್ಲಿ ಎಲ್ಲವೂ ಕೊಚ್ಚಿಹೋಗುತ್ತಿರುವುದು ವಿಷಾದನೀಯ. ಈ ನಿಟ್ಟಿನಲ್ಲಿ ಸಂಶೋಧಕರು, ವಿದ್ವಾಂಸರು, ವಿದ್ಯಾರ್ಥಿಗಳು ಹಾಗೂ ವಿಶ್ವವಿದ್ಯಾನಿಲಯಗಳು ವಿಶೇಷ ಆಸ್ಥೆ ವಹಿಸುವುದು ಅಗತ್ಯವಾಗಿದೆ.

**ಒಡಪುಗಳು :**

ಭಗವಂತನನ್ನು ಮೆಚ್ಚಿಸಲು ಮಾನವ ಅನೇಕ ರೀತಿಯ ಆಚರಣೆಗಳನ್ನು ಅನುಸರಿಸುತ್ತಾನೆ. ಸ್ತುತಿಗಳು, ಪ್ರಾರ್ಥನಾ ಗೀತೆಗಳು ಮೊದಲಾದವುಗಳ ಮೂಲಕ ಭಗವಂತನನ್ನು ಹೊಗಳಿ ತನ್ಮೂಲಕ ಅವನ ಕರುಣೆಯನ್ನು ಹೊಂದಲು ಯತ್ನಿಸುತ್ತಾನೆ. ಇದೇ ರೀತಿ ಒಡಪುಗಳು ಅಥವಾ ಖಡ್ಗಗಳು ಸಹ ಭಗವಂತನ ಮಹಿಮೆಯನ್ನು ಹೊಗಳುವ ಸ್ತುತಿ ರೂಪಗಳಾಗಿವೆ. ಆದರೆ ಸಾಮಾನ್ಯ ಸ್ತುತಿ ಅಥವಾ ಪ್ರಾರ್ಥನಾ ಗೀತೆಗಳಿಗಿಂತ ಒಡಬುಗಳು ಭಿನ್ನವಾಗಿರುತ್ತವೆ.

ಉಪಾಸನಾ ಮಾರ್ಗದಲ್ಲಿ ಭಕ್ತಿಯ ಆವೇಶ ಉಂಟಾದಾಗ ದೇವೋನ್ಮಾದ ಬರುತ್ತದೆ. ಆ ಸಂದರ್ಭದಲ್ಲಿ ಭಕ್ತನು ದೇವರ ಮಹಿಮೆಯನ್ನು ಕುರಿತು ಹೇಳುವ ಮಾತುಗಳನ್ನು ಒಡಬುಗಳೆಂದು ಕರೆಯಬಹುದು. ಸಮೂಹದಲ್ಲಿದ್ದಾಗ ಒಬ್ಬನು ಒಡಬುಗಳನ್ನು ಹೇಳುತ್ತಿದ್ದರೆ ಉಳಿದವರು 'ಖಡೆ –ಖಡೆ, ನಮಃ ಶಿವ, ಚಾಂಗಭಲೋ' ಎಂದು ಹೇಳುತ್ತ ಅವನನ್ನು ಪ್ರೋತ್ಸಾಹಿಸುತ್ತಿರುತ್ತಾರೆ.

ಈ ರೀತಿಯವ ಒಡಪುಗಳನ್ನು ವಿಶೇಷವಾಗಿ ವೀರಭದ್ರದೇವರ ಒಕ್ಕಲಿನವರು ಬಳಸುತ್ತಾರೆ. ವೀರಗಾಸೆಯಲ್ಲಿ ಬರುವ ಈ ಒಡಬುಗಳು ಜನಪದರ ಅದ್ಭುತ ಸೃಷ್ಟಿಯೆನ್ನಬಹುದು. ಮೈಲಾರಲಿಂಗನ ಸಂಪ್ರದಾಯದಲ್ಲಿ ಈ ಒಡಬುಗಳನ್ನು ಕಂಚಾವೀರರು ಹೇಳುತ್ತಾರೆ. ಒಂದು ಮೂಲದ ಪ್ರಕಾರ ಕಂಚಾವೀರರು ವೀರಭದ್ರನ ಅಂಶದಿಂದ ಹುಟ್ಟಿದವರು.[16] ಹೀಗಾಗಿ ವೀರಭದ್ರನ ಸಂಪ್ರದಾಯದಲ್ಲಿ ಬರುವ ಒಡಬುಗಳು ಮೈಲಾರಲಿಂಗನ ಸಂಪ್ರದಾಯದಲ್ಲಿಯೂ ಕಂಡುಬರುತ್ತವೆ ಎಂದು ಹೇಳಬಹುದು.

ದೇವರ ಪಲ್ಲಕ್ಕಿ ದೇವಸ್ಥಾನದಿಂದ ಹೊರಗೆ ಹೊರಟಾಗಲೆಲ್ಲ ಕಂಚಾವೀರರು ಖಡ್ಗಧಾರಿಗಳಾಗಿ ಅದರ ಜೊತೆಗೆ ಹೋಗುತ್ತಾರೆ. ನವರಾತ್ರಿಯ ಪ್ರತಿಪದೆಯ ದಿನ, ಕಲ್ಲತ್ತಿ ಮರಕ್ಕೆ ಹೋಗಿ ಬರುವಾಗ, ಕಾರಣಿಕದ ದಿನ ಕಾರಣಿಕ ಹೇಳಿ ಬರುವಾಗ, ಕುದುರೆಯ ಹಬ್ಬದಂದು ಕುರುಬತ್ತೆವ್ವನ ಮನೆಗೆ ಹೋಗಿ ಬರುವಾಗ ಭಾರತ ಹುಣ್ಣಿವೆಯಂದು ರಾಕ್ಷಸವಧೆ ಮಾಡಿ ಬರುವಾಗ ಹಾಗೂ ಪ್ರತಿ ಸೋಮವಾರ ಗಂಗೆಮಾಳಮ್ಮನ ಗುಡಿಯಿಂದ ದೇವರು ತನ್ನ ಮೂಲಸ್ಥಾನಕ್ಕೆ ಬರುವಾಗ ಕಂಚಾವೀರರು ಒಡಬುಗಳನ್ನು ಹೇಳುತ್ತಾರೆ. ಕಲ್ಲತ್ತಿ ಮರ ಅಥವಾ ಡೆಂಕಣ ಮರಡಿಗೆ ಹೋಗಿ ಬರುವ ಸಂದರ್ಭದಲ್ಲಿ ಹೆಗ್ಗಪ್ಪನ ಗುಡಿಯ ಮುಂದೆ, ಗಂಗಿ ಮಾಳಮ್ಮನ ಗುಡಿಯ ಮುಂದೆ ಹಾಗೂ ಕಂಚೆಪ್ಪನ ಗುಡಿಯ ಮುಂದೆ ಒಡಪು ಹೇಳುವ ಕಾರ್ಯಕ್ರಮ ನಡೆಯುತ್ತದೆ. ಇವುಗಳಲ್ಲಿ ದೇವರ ಮಹಿಮೆಗಳು, ಪವಾಡಗಳು ಮುಖ್ಯವಾಗಿರುತ್ತವೆ.

ಒಡಪು ಹೇಳುವ ಸಂದರ್ಭದಲ್ಲಿ ಐದು ಜನ ಕಂಚಾವೀರರು ದೇವರ ಪಲ್ಲಕ್ಕಿಯ ಮುಂದೆ ನಿಂತುಕೊಳ್ಳುವರು. ಅವರಲ್ಲೊಬ್ಬನು ಕೈಯ್ಯಲ್ಲಿನ ಖಡ್ಗವನ್ನು ಝಳಪಿಸುತ್ತ

ಒಡಪು ಹೇಳುತ್ತಾನೆ, ಉಳಿದವರು "ಹೌದು, ಖಡೆ, ಭಲೆ, ನಮಃ ಶಿವ, ಚಾಂಗಭಲೋ" ಮುಂತಾದ ಸೊಲ್ಲು ನೀಡುವರು.[17]

ಮುಖ್ಯ ವ್ಯಕ್ತಿ : ಹಾ ಹಾ ಹಾ ವೀರ

ಇತರರು : ಭಲೆ

ಮುಖ್ಯ ವ್ಯಕ್ತಿ : ಸದಾಚಾರ ಸಂಪನ್ನರಾದ ಸದ್ಭಕ್ತರೇ ಕೇಳಿರಿ

ಇತರರು : ಭಲೆ

ಮುಖ್ಯ ವ್ಯಕ್ತಿ : ಪರಮ ಪರಂಜೋತಿ

ಇತರರು : ಭಲೆ

ಮುಖ್ಯ ವ್ಯಕ್ತಿ : ಪರಶಿವನ

ಇತರರು : ಭಲೆ

ಮುಖ್ಯ ವ್ಯಕ್ತಿ : ಸಿಂಹಾಸನದ ಮಹಿಮೆಯನ್ನು

ಇತರರು : ಭಲೆ

ಮುಖ್ಯ ವ್ಯಕ್ತಿ : ಹೇಳುವೆನು ಚಿತ್ತಗೊಟ್ಟು ಕೇಳಿರಿ

ಇತರರು : ಭಲೆ

ಮುಖ್ಯ ವ್ಯಕ್ತಿ : ನಾನಾ ವಿಧದಿಂದ

ಇತರರು : ಭಲೆ

ಮುಖ್ಯ ವ್ಯಕ್ತಿ : ಝಗಝಗಿಸುತ್ತಿತ್ತು

ಇತರರು : ಭಲೆ

ಮುಖ್ಯ ವ್ಯಕ್ತಿ : ಶಿವನ ಏಳಸ್ತರದ ಪೀಠವು

ಇತರರು : ಭಲೆ

ಮುಖ್ಯ ವ್ಯಕ್ತಿ : ಅಂದವಾದ ರತ್ನಗಂಬಳಿಯಿಂದ

ಇತರರು : ಭಲೆ

ಮುಖ್ಯ ವ್ಯಕ್ತಿ : ಒಪ್ಪುತ್ತಿತ್ತು ಒಂದನೆಯ ಅಸ್ತರವು

ಇತರರು : ಭಲೆ

ಹೀಗೆ ಮುಂದುವರಿಯುವ ಈ ಒಡಬುಗಳಲ್ಲಿ ಒಂದು ವಿಷಯವನ್ನು ಕುರಿತ ವಿವರಣೆ ಇರುತ್ತದೆ. ಒಂದೊಂದು ಒಡಬೂ ಸುಮಾರು ಐದರಿಂದ ಹತ್ತು ನಿಮಿಷಗಳವರೆಗೆ ಇರುತ್ತದೆ. ಒಡಬು ಹೇಳುವಾಗ ವಾಲಗದವರೆಲ್ಲ ಸ್ಥಬ್ದರಾಗಿರುತ್ತಾರೆ. ಒಡಬು ಹೇಳುವುದು ಮುಗಿದ ಬಳಿಕ ಉತ್ಸವ ಮತ್ತೆ ಮುಂದುವರಿಯುವುದು.

ಡಾ॥ ಮಂಜುನಾಥ ಬೇವಿನಕಟ್ಟಿಯವರು ಸಂಗ್ರಹಿಸಿದ ಮೈಲಾರಲಿಂಗನ ಕಾವ್ಯದಲ್ಲಿ ಬರುವ ಹರಕೆಯ ಬಳಿಕ ಹೇಳುವ ಖಡ್ಗದಲ್ಲಿ ಮೈಲಾರ ಅವತಾರಕ್ಕೆ ಸಂಬಂಧಿಸಿದ ಘಟನಾವಳಿಗಳಿವೆ. ದಕ್ಷಿಣ ಒಳನಾಡಿನಲ್ಲಿದ್ದ ಶ್ರೀಗಿರಿ ಪರ್ವತದಲ್ಲಿ, ಅತ್ರಿಕ ಮುನಿ, ಕಪಿಲಮುನಿ, ಪುರುಷಮುನಿ, ಜೋಕಮುನಿ ಇನ್ನೂ ಅನಂತ ಮುನಿಗಳು ಕೂತು ತಪಸ್ಸು ಮಾಡುತ್ತಿದ್ದರು[18] ಎಂಬ ವಿಷಯವನ್ನು ಒಳಗೊಂಡ ಒಡಪೊಂದು ಹೀಗಿದೆ–

ಮುಖ್ಯ ವ್ಯಕ್ತಿ : ದಕ್ಷಿಣ ಒಳಿನಾಡಿನಲ್ಲಿ ಶ್ರೀಗಿರಿ ಎಂಬ ಪರ್ವತವಿತ್ತು ।

ಇತರರು : ನಮಃ ಶಿವ ॥

ಮುಖ್ಯ ವ್ಯಕ್ತಿ : ಶ್ರೀಗಿರಿ ಎಂಬ ಪರ್ವತ ವಿತ್ತು ।

ಇತರರು : ನಮಃ ಶಿವ ॥

ಮುಖ್ಯ ವ್ಯಕ್ತಿ : ಆ ಪರ್ವತದಲ್ಲಿ ।

ಇತರರು : ನಮಃ ಶಿವ ॥

ಮುಖ್ಯ ವ್ಯಕ್ತಿ : ಅತ್ರಿಕ ಮುನಿ, ಕಪಿಲ ಮುನಿ, ಪುರುಷ ಮುನಿ, ಜೋಕ ಮುನಿ ।

ಇತರರು : ನಮಃ ಶಿವ ॥

ಮುಖ್ಯ ವ್ಯಕ್ತಿ : ಇನ್ನೂ ಅನಂತ ಋಷಿಗಳು ಕೂಡುತ್ತ ।

ಇತರರು : ನಮಃ ಶಿವ ॥

ಮುಖ್ಯ ವ್ಯಕ್ತಿ : ಆ ಪರ್ವತದಲ್ಲಿ ತಪಸ್ಸು ಮಾಡುತ್ತಿದ್ದರು ।

ಇತರರು : ನಮಃ ಶಿವ ॥

ಒಡಬುಗಳಲ್ಲಿ ಮೈಲಾರನ ಅವತಾರವಾಗಿರುವುದು, ಅವನ ಪವಾಡಗಳು, ಮೈಲಾರನ ಮದುವೆ, ಕರುಣೆ, ಐತಿಹ್ಯಗಳು, ನಂಬಿಕೆಗಳು ಮೊದಲಾದ ವಿಷಯಗಳು ಸೇರಿಕೊಂಡಿರುತ್ತವೆ.

ಒಡಬುಗಳು ಉತ್ತರ ಕರ್ನಾಟದದ ಜನಪದರ ಅನ್ಯಾದೃಶ ಸೃಷ್ಟಿ. ಈ ಒಡಬುಗಳನ್ನು ಸಂಗ್ರಹಿಸುವ ಹಾಗು ಅವುಗಳನ್ನು ವ್ಯಾಪಕವಾಗಿ ವಿಶ್ಲೇಷಿಸುವ ಕಾರ್ಯ ನಡೆದಿಲ್ಲ. ಜನಪದರ ಮೂಲ ಸತ್ವಗಳಾದ ತ್ರಿಪದಿಗಳು, ಲಾವಣಿಗಳಂತೆ ಒಡಬುಗಳೂ ಸಹ ಜನಪದ ಸಾಹಿತ್ಯದ ಮಹತ್ವಪೂರ್ಣ ಅಂಶಗಳಾಗಿವೆ. ಇವುಗಳನ್ನು ಕುರಿತು ಸಮಗ್ರವಾಗಿ ಅಧ್ಯಯನ ಮಾಡುವ ಅಗತ್ಯವಿದೆ.

## ೮.೫ ಮೈಲಾರಲಿಂಗನ ಕಾವ್ಯ

ಜನಪದ ಮಹಾಕಾವ್ಯಗಳಲ್ಲಿ ದಕ್ಷಿಣದಲ್ಲಿ ತುಂಬ ಪ್ರಸಿದ್ಧವಾದವು ಜುಂಜಪ್ಪನ ಕಾವ್ಯ, ಮಲೈಮಾಹಾದೇಶ್ವರನ ಕಾವ್ಯ, ಮಂಟೇಸ್ವಾಮಿ ಕಾವ್ಯ ಮೊದಲಾದವು. ಹಾಗೆಯೇ ಉತ್ತರ ಕರ್ನಾಟಕದಲ್ಲಿ ಪ್ರಸಿದ್ಧವಾದ ಜನಪದ ಕಾವ್ಯ ಮೈಲಾರಲಿಂಗನ ಕಾವ್ಯ. ಈ ಕಾವ್ಯವನ್ನು ಗೊರವರು ಭಂಡಾರ ಷಷ್ಠಿಯಲ್ಲಿ ಜಾತ್ರೆ ಉತ್ಸವದ ಸಂದರ್ಭಗಳಲ್ಲಿ ಹಾಡು ಹೇಳುತ್ತಾರೆ. ಭಕ್ತರೂ ಸಹ ಬೇಕೆನಿಸಿದಾಗ ತಮ್ಮ ಮನೆಗಳಲ್ಲಿ ಈ ಕಾರ್ಯಕ್ರಮ ಏರ್ಪಡಿಸಬಹುದು. ಸಾಮಾನ್ಯವಾಗಿ ರಾತ್ರಿಯಲ್ಲಿ ಈ ಕಾರ್ಯಕ್ರಮ ಇರುತ್ತದೆ. ಇಡೀ ರಾತ್ರಿ ಹಾಡುವುದಿದ್ದಲ್ಲಿ ಗೊರವರು ರಾತ್ರಿ ಊಟ ಮಾಡುವುದಿಲ್ಲ.

ಹಾಡುವ ಸಂದರ್ಭದಲ್ಲಿ ದೇವರ ಮುಂದೆ ಅಥವಾ ಗೊರವರು ತಂದ ತ್ರಿಶೂಲದ ಮುಂದೆ ನಂದಾದೀವಿಗೆ ಹಚ್ಚಿ ಹಣ್ಣು ಕಾಯಿ ಇಡುತ್ತಾರೆ. ಊದುಬತ್ತಿಯನ್ನು ಸಹ ಹಚ್ಚಿಡುವ ವಾಡಿಕೆಯೂ ಇದೆ. ಗೊರವರಲ್ಲಿ ಇಬ್ಬರು ಮುಮ್ಮೇಳದವರಾಗಿ ಹಾಗೂ ಇನ್ನಿಬ್ಬರು ಹಿಮ್ಮೇಳದವರಾಗಿ ಕುಳಿತುಕೊಂದು ಹಾಡುತ್ತಾರೆ. ಹಿಮ್ಮೇಳದವರೇ ವಾದ್ಯಗಳನ್ನು ಬಾರಿಸುತ್ತಾರೆ. ವಾದ್ಯಗಳಲ್ಲಿ ಸರ್ವೇಸಾಮಾನ್ಯವಾಗಿ ಗಂಟೆಯನ್ನು ಬಳಸುತ್ತಾರೆ. ಕೆಲವೊಮ್ಮೆ ಡಮರು, ಗಂಟೆ, ಕೊಳಲುಗಳನ್ನು ಬಳಸುತ್ತಾರೆ. ಕಾವ್ಯವನ್ನು ಆರಂಭಗೊಳಿಸುವುದಕ್ಕೆ ಮೊದಲು ಕಾಯಿ ಒಡೆದು ಪೂಜೆ ಮಾಡಿ ಆರಂಭಿಸುತ್ತಾರೆ. ಬಳಿಕ ಹಾಡುವುದು ಮುಗಿದ ನಂತರ ಮತ್ತೊಮ್ಮೆ ಕಾಯಿ ಒಡೆದು ಪ್ರಸಾದವನ್ನು ಭಕ್ತರಿಗೆ ಹಂಚುತ್ತಾರೆ. ಮೊದಲು ಪ್ರತಿ ಸಂಧಿಗೆ ಒಂದು ಕಾಯಿ ಒಡೆಯುವ ಕ್ರಮವಿತ್ತು. ಆದರೆ ಈಗ ಈ ಆಚರಣೆ ಕಂಡುಬರುವುದಿಲ್ಲ. ಒಂದೊಂದು ಭಾಗ ಮುಗಿದಾಗ ಗೊರವರು ನೆರೆದ ಭಕ್ತಾದಿಗಳ ಹಣೆಗೆ ಭಂಡಾರವನ್ನು ಹಚ್ಚುತ್ತಾರೆ.[19]

ಮೈಲಾರಲಿಂಗನ ಕಾವ್ಯದಲ್ಲಿ ಗಾಯನ – ನೃತ್ಯ – ನಾಟಕ ಮೊದಲಾದ ವಿಧಗಳನ್ನು ಕಾಣಬಹುದು. ಈ ಕಾವ್ಯವು ಕೇವಲ ಸಿದ್ಧ ವಸ್ತುವಾಗಿ ನಮಗೆ ಕಾಣುವುದಿಲ್ಲ. ಇದರಲ್ಲಿ ಯಾರೋ ಮಾಡಿಟ್ಟ ಕಾವ್ಯವನ್ನು ಯಥಾವತ್ತಾಗಿ, ಯಾಂತ್ರಿಕವಾಗಿ ಪುನರಾವರ್ತಿಸದೇ ಸೃಜನಶೀಲತೆಯನ್ನು ಸೃಷ್ಟಿಸಲಾಗಿದೆ.

ಮೈಲಾರಲಿಂಗನನ್ನು ಕುರಿತಾದ ಸಾಹಿತ್ಯ ಪ್ರಕಾರಗಳು ಮುಖಿಕವಾಗಿಯೇ ಉಳಿದಿದ್ದವು. ಹಾಡುಗಳು, ಕಾವ್ಯಗಳು, ಒಡಬುಗಳು, ಗಾದೆಗಳು ಮೊದಲಾದವನ್ನು ಸಂಗ್ರಹಿಸಿ ಪ್ರಕಟಿಸುವ ಅವಶ್ಯಕತೆಯಿತ್ತು. ಈ ನಿಟ್ಟಿನಲ್ಲಿ ಕ. ರಾ. ಕೃಷ್ಣಸ್ವಾಮಿಯವರ ಮೈಲಾರಲಿಂಗ ಈರಬಡಪ್ಪ ಕಾವ್ಯ, ಚಕ್ಕೆರೆ ಶಿವಶಂಕರ್‌ರವರ ಮೈಲಾರಲಿಂಗನ ಕಾವ್ಯ, ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಡಾ॥ ಎಂ. ಬಿ. ನೇಗಿನಹಾಳರು ಸಂಗ್ರಹಿಸಿರುವ ಮೈಲಾರಲಿಂಗನ ಕಾವ್ಯಗಳು ಪ್ರಕಟವಾಗಿವೆ. ಇತ್ತೀಚೆಗೆ ಹಂಪಿ ಕನ್ನಡ ವಿಶ್ವವಿದ್ಯಾಲಯದ ಜಾನಪದ ವಿಭಾಗವು ಡಾ॥ ಎಂ. ಎಂ. ಕಲಬುರ್ಗಿ ಅವರ ಮಾರ್ಗದರ್ಶನದಲ್ಲಿ ಡಾ॥ ಮಂಜುನಾಥ ಬೇವಿನಕಟ್ಟಿಯವರು ಮೈಲಾರಲಿಂಗನ ಕಾವ್ಯವನ್ನು ಸಮಗ್ರವಾಗಿ ನಿರೂಪಿಸಿ ಕೊಟ್ಟಿದ್ದಾರೆ. ಇಂತಹ ಅಪೂರ್ವ ಕಾರ್ಯವನ್ನು ಕೈಗೊಂಡ ಎಲ್ಲ ಸಂಗ್ರಹಕಾರರು ಅಭಿನಂದನಾರ್ಹರು.

ಮಂಜುನಾಥ ಬೇವಿನಕಟ್ಟಿಯವರು ಸಂಗ್ರಹಿಸಿದ ಮೈಲಾರಲಿಂಗನ ಕಾವ್ಯವು ದೀರ್ಘವಾಗಿದ್ದು ಸುಮಾರು ೩೮೦ ಪುಟಗಳನ್ನು ಹೊಂದಿದೆ. ಇದರಲ್ಲಿ ಐದು ಸಂಧಿಗಳಿವೆ. ದುಷ್ಟ ಸಂಹಾರ, ಶಿಷ್ಟ ರಕ್ಷಣೆ, ಮೈಲಾರನ ಮದುವೆಗಳು, ಪವಾಡಗಳು, ತನ್ನ ಭಕ್ತರನ್ನು ಮಾಡಿಕೊಳ್ಳುವ ವಿಧಾನ ಮೊದಲಾದ ಅಂಶಗಳನ್ನು ಒಳಗೊಂಡಿರುವ ಈ ಮಹಾಕಾವ್ಯ ಕನ್ನಡದ ಅತ್ಯುತ್ತಮ ಜನಪದ ಮಹಾಕಾವ್ಯಗಳಲ್ಲೊಂದು ಎಂದು ಹೇಳಬಹುದು. ಡಾ॥ ಮಂಜುನಾಥ ಬೇವಿನಕಟ್ಟಿಯವರು ಸಂಗ್ರಹಿಸಿದ ಈ ಕಾವ್ಯದ ಸಂಕಥಕರು ಶ್ರೀ ಒಗ್ಗರು ಹನುಮಂತಪ್ಪ ಹಾಗೂ ಅವರ ಸಂಗಡಿಗರಾದ ಒಗ್ಗರು ಪಂಪಣ್ಣ, ಒಗ್ಗರು ಮಲ್ಲಯ್ಯ, ಒಗ್ಗರು ಮಾರಪ್ಪ, ಒಗ್ಗರು ಕಾನೂರು ಹನುಮಯ್ಯ ಅವರು.

ಪ್ರಸ್ತುತ ಕಾವ್ಯದಲ್ಲಿ ೧. ಮೈಲಾರಲಿಂಗನ ಮಹಿಮೆಗಳ ಸಂಧಿ, ೨. ಗಂಗಿ ಮಾಳಮ್ಮನ ಸಂಧಿ, ೩. ಕೋಮಾಲಿ ಸಂಧಿ, ೪. ಮಡಿವಾಳರ ಸಂಧಿ, ೫. ಕುರುಬರ ಸಂಧಿ ಎಂದು

ಐದು ಸಂಧಿಗಳಿವೆ. ಪ್ರತಿಯೊಂದು ಸಂಧಿಯಲ್ಲಿಯೂ ಮೈಲಾರನಿಗೆ ಸಂಬಂಧಿಸಿದ ಅನೇಕ ಪುರಾಣ, ಐತಿಹ್ಯಗಳ ಕಥೆಗಳು ಕಾವ್ಯ ರೂಪದಲ್ಲಿ ಅದ್ಭುತವಾಗಿ ಮೂಡಿ ಬಂದಿವೆ. ಮೈಲಾರಲಿಂಗನಿಗೆ ಸಂಬಂಧಿಸಿದ ಐತಿಹ್ಯಗಳಲ್ಲಿ ಬರುವ ಪಾತ್ರಗಳು ಹಾಗೂ ಅವುಗಳ ಜೊತೆಗಿನ ಸಂಬಂಧ ಮೊದಲಾದ ಅಂಶಗಳು ಈ ಕಾವ್ಯದ ಸ್ವಾರಸ್ಯವನ್ನು ಹೆಚ್ಚಿಸಿವೆ.

ಈ ಕಾವ್ಯದಲ್ಲಿ ಮೈಲಾರಲಿಂಗನ ಉದ್ಭವವನ್ನು ಹೀಗೆ ವರ್ಣಿಸಲಾಗಿದೆ[20]. ದಕ್ಷಿಣ ಒಳನಾಡಿನಲ್ಲಿ ಶ್ರೀಗಿರಿ ಎಂಬ ಪರ್ವತವಿತ್ತು. ಅಲ್ಲಿ ಅತ್ರಿಕಮುನಿ, ಕಪಿಲಮುನಿ, ಪುರುಷಮುನಿ, ಜೋಕುಮುನಿಗಳು ತಪಸ್ಸು ಮಾಡುತ್ತಿದ್ದರು. ಆಗ ಮಣಿಕ ಮಲ್ಲರೆಂಬ ರಾಕ್ಷಸರು ಅವರ ತಪಸ್ಸನ್ನು ಕೆಡಿಸುತ್ತಾರೆ. ಅವರ ಕಷ್ಟವನ್ನು ಸಹಿಸಲಾಗದ ಮುನಿಗಳು ಶಿವನಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತಾರೆ. ಶಿವನು ಅವರ ಕಷ್ಟವನ್ನು ಪರಿಹರಿಸಲು ಏಳು ಕೋಟಿ ಮೈಲಾರನಾಗಿ ಬಂದು ಮಣಿಕ–ಮಲ್ಲರನ್ನು ರಾಕ್ಷಸರನ್ನು ಧ್ವಂಸ ಮಾಡಿ ಭೂಲೋಕದಲ್ಲಿ ಶಾಶ್ವತವಾಗಿ ನೆಲೆಸುತ್ತಾನೆ.

ಅದೇ ರೀತಿ ಈ ಕಾವ್ಯದಲ್ಲಿ ಮೈಲಾರಲಿಂಗನ ಹಲವಾರು ಪವಾಡಗಳು ವರ್ಣಿತವಾಗಿವೆ. ಗೋಮುನಿ ಕರಣದಲ್ಲಿ ಧರ್ಮಕರ್ತನಾಗಿ ಜನಿಸಿ ಭಂಡಾರಕ್ಕೆ ಕಲಿರಾಯನಾಗುತ್ತಾನೆ. ಕೋರಿಅಂಗಿ ತೊಟ್ಟು ಭಕ್ತರ ಮನೆ ಬಾಗಿಲಲ್ಲಿ ತಿರುಗಾಡುತ್ತಾನೆ. ಹನ್ನೆರಡಾಳು ಸೇದೇ ಬಾವಿಯ ಬಳಿ ಕುಳಿತು ಜಪ ಮಾಡುವವರ ಕೈಯ್ಯಲ್ಲಿನ ಲಿಂಗವನ್ನು ಮಾಯಮಾಡಿದ್ದು, ಭಂಡಾರ ಚೀಲವನ್ನು ಕೈಯ್ಯಲ್ಲಿ ಹಿಡಿದುಕೊಂಡು ಅಂಡೆ ಕುರುವತ್ತಿಗೆ ತಂದು ಏಳೇಳು ಲೋಕವನ್ನು ಸಲಹಿದ್ದು, ರಾಣೇಬೆನ್ನೂರಿನ ರಾಣಿ ಶೀಲವಂತೆಗೆ ವರನೀಡಿದ್ದು ಮೊದಲಾದವು ಮೈಲಾರನ ಪವಾಡಗಳಲ್ಲಿ ಪ್ರಮುಖವಾದುವುಗಳಾಗಿವೆ.

ಪ್ರಸ್ತುತ ಕಾವ್ಯದಲ್ಲಿ ಮಾಳಮ್ಮ ಹಾಗೂ ಕೋಮಾಲಿ ಪ್ರಸಂಗಗಳು ಬಹಳ ಸ್ವಾರಸ್ಯಕರವಗಿ ಮೂಡಿಬಂದಿವೆ. ಬನ್ನಿ ಹಬ್ಬದಲ್ಲಿ ಬನ್ನಿ ಮುಡಿಯಲು ದೇವರು ಬಂದಾಗ ನೆಣಿಕೇರು ಹಾಲಿನ ಭಾಷೆ ತೆಗೆದುಕೊಂಡು ಮಾಳಮ್ಮ ಮಲ್ಲಯ್ಯರಿಗೆ ಮದುವೆಯಾಗುತ್ತದೆ. ಬ್ರಹ್ಮನೇ ಮದುವೆಯ ನೇತೃತ್ವ ವಹಿಸುತ್ತಾನೆ. ಮದುವೆಯಾದ ಕೆಲದಿನಗಳ ಬಳಿಕ ಮೈಲಾರಲಿಂಗ, ಮಾಳವ್ವನಿಗೆ ಸುಳ್ಳು ಹೇಳಿ ಚಂದ್ರಗಿರಿ ಪಟ್ಟಣಕ್ಕೆ ಕೋಮಾಲಿಯನ್ನು ತರಲು ಹೋಗುತ್ತಾನೆ. ಈ ಸಂದರ್ಭದಲ್ಲಿ ಮಾಳವ್ವ ಮೈಲಾರನಿಗೆ – ಹಾವು ಕಚ್ಚಲಿ,

ಹುಲಿ ನುಂಗಲಿ ಎಂದು ಶಪಿಸುವ ಪ್ರಸಂಗ ತುಂಬ ನಾಟಕೀಯವಾಗಿ ಮೂಡಿ ಬಂದಿದೆ. ಅಲ್ಲಿಗೆ ಬಂದ ಹನುಮಪ್ಪ "ಮೈಲಾರಲಿಂಗ ನಿನ್ನ ಮೇಲೆ ಇನ್ನೊಬ್ಬಳನ್ನು ತರಲು ಹೋಗಿದ್ದಾನೆ" ಎಂದು ಹೇಳುತ್ತಾನೆ. ಸಿಟ್ಟಾದ ಮಾಳವ್ವ ಹನುಮಪ್ಪನನ್ನು ಬೈಯ್ಯುತ್ತಾಳೆ. ಬಳಿಕ ಕೋಮಾಲಿ ಪ್ರಸಂಗದಲ್ಲಿ ಮೈಲಾರನು ಕೋಮಾಲಿಯನ್ನು ಒಲಿಸಿಕೊಂಡು ಮೈಲಾರಕ್ಕೆ ಕರೆತರುತ್ತಾನೆ.[21]

ಮೈಲಾರಲಿಂಗನ ಕಾವ್ಯದಲ್ಲಿ ಬರುವ ಘಟನೆಗಳು ಜಾತ್ರೆ ಹಾಗೂ ಇತರ ಆಚರಣೆಗಳಲ್ಲಿ ತಳುಕು ಹಾಕಿಕೊಂಡಿರುವುದು ಕಂಡು ಬರುತ್ತದೆ. ಆದ್ದರಿಂದ ಈ ಕಾವ್ಯವು ಜಾತ್ರೆ ಹಾಗೂ ಆಚರಣೆಗಳ ಭಾಗವಾಗಿದೆ ಎಂದು ಹೇಳಬಹುದು. ಈ ಕಾವ್ಯದಲ್ಲಿ ಘಟನೆಗಳು ಮರುಕಳಿಸುತ್ತವೆ, ಚರಿತ್ರೆಯ ಪುನರಾವರ್ತನೆಯಾಗುತ್ತದೆ. ಮೈಲಾರಲಿಂಗ ತನ್ನ ಒಕ್ಕಲಿನ ವಿಸ್ತರಣೆಗಾಗಿ ಬುಡಕಟ್ಟಿನ ಕೋಮಾಲಿಯನ್ನು ಮದುವೆಯಾಗುವುದು, ರಾಣೆಬೆನ್ನೂರಿನ ಶೀಲವಂತೆಯನ್ನು ತನ್ನ ಭಕ್ತಳನ್ನಾಗಿ ಮಾಡಿಕೊಳ್ಳುವುದು, ಅಗಸರಿಗೆ ಕೋರಿಅಂಗಿ ಒಗೆಯಲು ಕೊಟ್ಟು ಆ ಮೂಲಕ ಅವರನ್ನು ಭಕ್ತರನ್ನಾಗಿ ಮಾಡಿಕೊಳ್ಳುವುದು– ಹೀಗೆ ಹಲವಾರು ಘಟನೆಗಳು ಜರುಗುತ್ತವೆ.

ಮೈಲಾರಲಿಂಗನ ಅತಿಮಾನುಷ ಶಕ್ತಿಯನ್ನು ಜನತೆಗೆ ಸಾರುವ ಪ್ರಯತ್ನಗಳು ಮೈಲಾರನನ್ನು ದೈವೀಕರಣಗೊಳಿಸುವ ಪ್ರವೃತ್ತಿ ಹಾಗೂ ಸುದೀರ್ಘವಾದ ಅಪ್ರಸ್ತುತ ಪ್ರಸಂಗಗಳು ಕಾವ್ಯದಲ್ಲಿ ಹೇರಳವಾಗಿವೆ. ಕಾವ್ಯವು ಸಂಕೀರ್ಣವಾಗಿದ್ದು ಕೊನೆಗೆ ದೇವರ ಅವತಾರವೆಂದು ತಿಳಿದು ಬರುತ್ತದೆ. ಇಡೀ ಪ್ರಸಂಗವೇ ಒಂದು ಬೊಂಬೆಯಾಟ ದಂತೆಯೂ, ಆ ಬೊಂಬೆಗಳನ್ನು ಆಡಿಸುತ್ತಿರುವುದು ಆ ದೈವೀಶಕ್ತಿಯೆಂದೂ ಅನಿಸುತ್ತದೆ. ಅದೇ ರೀತಿ ಕಾವ್ಯವು ಮಾನವ ಚೈತನ್ಯದ ಉದಾತ್ತತೆಯನ್ನು ಆಧ್ಯಾತ್ಮಿಕ ಸ್ಥೈರ್ಯಗಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿ ಕೊಡುತ್ತದೆ ಎಂದು ಸಂಗ್ರಹಕಾರರಾದ ಡಾ॥ ಮಂಜುನಾಥ ಬೇವಿನಕಟ್ಟಿಯವರು ಪ್ರಸ್ತುತ ಕಾವ್ಯದ ಮುನ್ನುಡಿಯಲ್ಲಿ ಹೇಳಿದ್ದಾರೆ.

## ೮.೬ ಗೊರವರ ಕುಣಿತ

ಜನಪದ ಸಂಸ್ಕೃತಿಯ ಭಾಗವಾದ ಗೊರವರ ಕುಣಿತ ವಿಶಿಷ್ಟವಾದುದು. ಹಬ್ಬ, ಜಾತ್ರೆಗಳಲ್ಲಿ ತಾಳಬದ್ಧವಾಗಿ ಡಮರುಗವನ್ನು ಬಾರಿಸುತ್ತ, ಇನ್ನೊಂದು ಕೈಯಿಂದ

ಕೊಳಲನ್ನು ನುಡಿಸುತ್ತ (ಕೆಲಬಾರಿ ಇನ್ನೊಂದು ಕೈಯ್ಯಲ್ಲಿ ತ್ರಿಶೂಲವನ್ನು ಹಿಡಿದುಕೊಂಡು) ನರ್ತನ ಮಾದುವ ಗೊರವರನ್ನು ನೋಡುವುದೇ ಕಣ್ಣಿಗೊಂದು ಹಬ್ಬ. ಕಪ್ಪು ನಿಲುವಂಗಿ ಧರಿಸಿ, ತಲೆಯ ಮೇಲೊಂದು ಪೇಟದಂತಹ ಟೊಪ್ಪಿಗೆಯನ್ನು ಧರಿಸಿದ ಹತ್ತರಿಂದ ಹನ್ನೆರಡು ಜನ ಗೊರವರ ಗುಂಪು ಸುತ್ತಲೂ ಸುತ್ತುತ್ತ ಕುಣಿಯುವ ಶೈಲಿ ವಿಭಿನ್ನವಾಗಿದ್ದು ಜನರ ಮನಸೆಳೆಯುತ್ತದೆ. ಕೆಲಬಾರಿ ಒಂದೇ ಸಾಲಿನಲ್ಲಿ ನಿಂತು ಹೆಜ್ಜೆಗಳನ್ನು ಹಿಂದೆ ಮುಂದೆ ಹಾಕುತ್ತ ಮೈಲಾರನ ಸ್ತುತಿ ಮಾಡುತ್ತ ಕುಣಿಯುವ ಗೊರವರು ಜನರನ್ನು ತಮ್ಮತ್ತ ಆಕರ್ಷಿಸುತ್ತಾರೆ.

ಇತ್ತೀಚೆಗೆ ಸಾರ್ವಜನಿಕ ಸಮಾರಂಭಗಳಲ್ಲಿಯೂ ಪ್ರದರ್ಶನದ ಭಾಗವಾಗಿ ಗೊರವರ ಕುಣಿತವನ್ನು ನಾವು ನೋಡಬಹುದು. ಕರ್ನಾಟಕ ಸರ್ಕಾರದವರು ಜನಪದ ಕಲೆಗಳಿಗೆ ಪ್ರೋತ್ಸಾಹ ನೀಡುವ ನಿಟ್ಟಿನಲ್ಲಿ ಕನ್ನಡ ಸಂಸ್ಕೃತಿ ಇಲಾಖೆಯ ವತಿಯಿಂದ ನಡೆಸುವ **'ಜಾನಪದಜಾತ್ರೆ'** ಕಾರ್ಯಕ್ರಮಗಳಲ್ಲಿ ಮೈಲಾರಲಿಂಗನ ಪರಂಪರೆಯ ಭಾಗವಾದ ಗೊರರವ ಕುಣಿತ ಜನಮಾನಸವನ್ನು ಸೂರೆಗೊಂಡಿತು.

## ೮.೭ ದೃಶ್ಯ ಮಾಧ್ಯಮ

ಒಂದು ವಿಷಯವನ್ನು ಪ್ರಸ್ತುತಪಡಿಸುವಲ್ಲಿ ದೃಶ್ಯಮಾಧ್ಯಮದ ಸ್ಥಾನ ಅತ್ಯಂತ ಮಹತ್ವದ್ದು. ನಾಟಕ, ಸಿನೆಮಾ, ದೂರದರ್ಶನಗಳಂತಹ ದೃಶ್ಯಮಾಧ್ಯಮಗಳು ಇಂದು ಜನರ ಆಸಕ್ತಿಯ ಮಾಧ್ಯಮಗಳಾಗಿವೆ. ಈ ಮಾಧ್ಯಮಗಳ ಮೂಲಕ ಜನರಿಗೆ ವಿಷಯವನ್ನು ವಿಸ್ತರಿಸುವುದು ಅತ್ಯಂತ ಸುಲಭದ ಮಾತಾಗಿದೆ.

**ಬಯಲಾಟ :**

ಗ್ರಾಮೀಣ ಸಂಸ್ಕೃತಿಯಲ್ಲಿ ಮೈದಾಳಿದ ಯಕ್ಷಗಾನ ಬಯಲಾಟಗಳು ಜನಸಾಮಾನ್ಯರ ಮನೋರಂಜನೆಯ ಮಾಧ್ಯಮಗಳು. ಮನೋರಂಜನೆಯೊಂದಿಗೆ ಶಿಕ್ಷಣವನ್ನೂ ನೀಡುವ ಸಾಮರ್ಥ್ಯವಿರುವ ಈ ಮಾಧ್ಯಮ ಇಂದು ಚಲನಚಿತ್ರ ಹಾಗೂ ದೂರದರ್ಶನಗಳ ಹಾವಳಿಯಿಂದ ತತ್ತರಿಸಿದ್ದರೂ ಇನ್ನೂ ನೆಲಕಚ್ಚಿಲ್ಲ. ದೈವ ಸಂಬಂಧವಾದ ಅನೇಕ ನಾಟಕ, ಬಯಲಾಟಗಳಿದ್ದರೂ ಮೈಲಾರಲಿಂಗನನ್ನು ಕುರಿತಾದ ದೃಶ್ಯ ಮಾಧ್ಯಮಗಳ

ಕೊರತೆ ಎದ್ದು ಕಾಣುತ್ತದೆ. ಮೈಲಾರ ಆಚರಣೆಗಳೇ ಪ್ರದರ್ಶನದ ಭಾಗವಾಗಿ ಕಂಡು ಬರುವುದರಿಂದಲೋ ಏನೋ ನಾಟಕ, ಬಯಲಾಟಗಳಂತಹ ವಿಭಿನ್ನ ಮನೋರಂಜನಾ ಸಾಧನಗಳು ಕಡಿಮೆಯೆಂದೇ ಹೇಳಬಹುದು. **ಶ್ರೀಮೈಲಾರಲಿಂಗಸ್ವಾಮಿ ಮಹಾತ್ಮೆ** ಅಥವಾ **ಮಾಲತೇಶ ವೈಭವ** ಎಂಬ ಬಯಲಾಟವನ್ನು ಸ್ಥಳೀಯರು ವಿಶೇಷ ಪ್ರಸಂಗಗಳಲ್ಲಿ ಅಭಿನಯಿಸುವರು. ಇದು ತೀರ ಇತ್ತೀಚಿಗಿನದು ಎಂದು ಕಾಣುತ್ತದೆ. ಮಲ್ಲಾಸುರ ಹಾಗು ಮಣಿಕಾಸುರನನ್ನು ಮೈಲಾರನು ಸಂಹರಿಸಿ ಜನರಿಗೆ ಅಭಯವನ್ನು ನೀಡಿದ ಕಥೆಯೇ ಇಲ್ಲಿನ ಪ್ರಧಾನ ವಸ್ತುವಾಗಿದೆ.

**ಚಲನಚಿತ್ರ :**

ಆಧುನಿಕ ಜಗತ್ತಿನ ದೃಶ್ಯ ಮಾಧ್ಯಮಗಳಲ್ಲಿ ಚಲನಚಿತ್ರಗಳು ಅತ್ಯಂತ ಪ್ರಮುಖ ಪಾತ್ರ ವಹಿಸಿವೆ. ಇವುಗಳ ಉಗಮ ಹಾಗೂ ವಿಕಾಸವನ್ನು ಗಮನಿಸಿದಾಗ ಈ ಮಾಧ್ಯಮ ಬೆಳೆದು ಬಂದ ಕ್ರಮ ಆಶ್ಚರ್ಯ ಹುಟ್ಟಿಸುತ್ತದೆ. ಕೇವಲ ಐವತ್ತು ಅರವತ್ತು ವರ್ಷಗಳಲ್ಲಿ ಈ ಮಾಧ್ಯಮ ಸಾಧಿಸಿರುವ ಸಾಧನೆ ಅತ್ಯಪೂರ್ವ. ಸಾಮಾಜಿಕ, ಧಾರ್ಮಿಕ ವಿಷಯಗಳನ್ನೊಳಗೊಂಡ ಚಲನಚಿತ್ರಗಳು ಜನರಿಗೆ ಮನೋರಂಜನೆ ನೀಡುವುದರೊಂದಿಗೆ ಮಾರ್ಗದರ್ಶನವನ್ನು ಮಾಡುತ್ತವೆ.

ಶ್ರೀ ಎಂ. ಡಿ. ಸಾಲಿ ನಿರ್ಮಾಣದಲ್ಲಿ, ಶ್ರೀಯುತಗುರುರಾಜ ಕಾಟೆ ನಿರ್ದೇಶಿಸಿದ **ಶ್ರೀ ಮೈಲಾರಲಿಂಗ** ಎಂಬ ಒಂದು ಚಲನಚಿತ್ರ ನಿರ್ಮಾಣವಾಗಿದೆ. ದಿವಂಗತ ಮಾನು, ಶ್ರೀ ಲಲಿತಾ, ವಿಜಯರಂಜಿನಿ, ಸದಾಶಿವ ಬ್ರಹ್ಮಾವರ ಮೊದಲಾದವರು ಅಭಿನಯಿಸಿದ ಈ ಚಿತ್ರದ ಸಂಗೀತ ನಿರ್ದೇಶನ ಶ್ರೀ ಗುಣಸಿಂಗ ಅವರದು. ಈ ಚಲನಚಿತ್ರದಲ್ಲಿ ಮೈಲಾರನ ಮಹಿಮೆಯನ್ನು ವರ್ಣಿಸಲಾಗಿದೆ. ಮಣಿಕ ಮಲ್ಲರು ಸ್ಥಳೀಯ ಕುರುಬರ ಮೇಲೆ ದಾಳಿ ಮಾಡಿ ಹಿಂಸಿಸುತ್ತಿರುತ್ತಾರೆ. ಆ ಸಂದರ್ಭದಲ್ಲಿ ಕುರುಬರು ತಮ್ಮ ರಕ್ಷಣೆಗಾಗಿ ಶಿವನನ್ನು ಪ್ರಾರ್ಥಿಸುತ್ತಾರೆ. ಆಗ ಶಿವನು ಒಂದು ಚಿಕ್ಕ ಮಗುವಿನ ರೂಪದಲ್ಲಿ ಹೊಲವೊಂದರಲ್ಲಿ ಕಾಣಿಸಿಕೊಳ್ಳುತ್ತಾನೆ. ಮಕ್ಕಳಿಲ್ಲದ ಕುರುಬರ ಯಜಮಾನ ಆ ಮಗುವನ್ನು ತನ್ನ ಮಗುವಿನಂತೆ ಸಾಕುತ್ತಾನೆ. ಆ ಮಗು ದೊಡ್ಡದಾದ ಬಳಿಕ ಮಣಿಕ ಮಲ್ಲರನ್ನು ಸಂಹರಿಸಿ, ಕುರುಬರಿಗೆ ನೆಮ್ಮದಿಯನ್ನು ನೀಡುತ್ತದೆ.

ಚಲನಚಿತ್ರದಲ್ಲಿ ಮೈಲಾರನ ಕಾವ್ಯದಲ್ಲಿ ಬರುವ ಕೋಮಾಲಿ ಪ್ರಸಂಗ, ಕುರುಬತಿ ಪ್ರಸಂಗಗಳು ಬಂದಿವೆ. ಶೃಂಗಾರ ರಸ ಹಾಗೂ ವೀರ ರಸ ಪ್ರಧಾನವಾದ ಈ ಚಲನ ಚಿತ್ರವು ಮೈಲಾರಲಿಂಗನ ಭಕ್ತರಿಗೆ ಆಪ್ಯಾಯಮಾನವಾದುದಾಗಿದೆ.

**ವಿಡಿಯೋ ಮತ್ತು ಸಿ. ಡಿ. ದೃಶ್ಯಾವಳಿಗಳು :**

ಆಧುನಿಕ ಜಗತ್ತಿನ ಮತ್ತೊಂದು ಆವಿಷ್ಕಾರ ವಿಡಿಂಯೋ ಹಾಗೂ ಸಿ. ಡಿ. ದೃಶ್ಯಾವಳಿಗಳು. ಇವು ಜನರಿಗೆ ಮನೆಯಲ್ಲಿಯೇ ಮನರಂಜನೆಯನ್ನು ಒದಗಿಸುತ್ತವೆ. ಮೈಲಾರದಲ್ಲಿ ನಡೆಯುವ ಆಚರಣೆಗಳು, ಪವಾಡಗಳು ಹಾಗೂ ಇತರ ಪೂಜಾದಿಗಳ ದೃಶ್ಯಗಳ ತುಣುಕುಗಳನ್ನು ಹೊಂದಿರುವ ಈ ಸಿ. ಡಿ. ಮತ್ತು ವಿಡಿಯೋ ದೃಶ್ಯಾವಳಿಗಳು ಭಕ್ತರ ಮನವನ್ನು ಸೆಳೆದಿವೆ. ಮೈಲಾರಕ್ಕೆ ಬಂದ ಭಕ್ತರು ಒಂದಾದರೂ ಸಿ. ಡಿ. ಅಥವಾ ವಿಡಿಯೋ ದೃಶ್ಯಾವಳಿಯನ್ನು ಕೊಂಡು ಹೋಗುವುದು ಸಾಮಾನ್ಯವಾಗಿದೆ.

## ಅಡಿಟಿಪ್ಪಣಿಗಳು :

1. *ಆಚಾರ್ಯ ಬಲದೇವ ಉಪಾಧ್ಯಾಯ; ಸಂಸ್ಕೃತ ಸಾಹಿತ್ಯದ ಇತಿಹಾಸ; ಪುಟ – ೫೧.*
2. *ಅದೇ*
3. *ಮತ್ಸ್ಯಪುರಾಣ, ಮಾರ್ಕಂಡೇಯ ಪುರಾಣ, ಭವಿಷ್ಯ ಪುರಾಣ, ಭಗವತ ಪುರಾಣ, ಬ್ರಹ್ಮಾಂಡ ಪುರಾಣ, ಬ್ರಹ್ಮ ವೈವರ್ತ ಪುರಾಣ. ಬ್ರಾಹ್ಮ ಪುರಾಣ, ವಾಮನ ಪುರಾಣ, ವರಾಹ ಪುರಾಣ. ವಿಷ್ಣು ಪುರಾಣ, ವಾಯು ಪುರಾಣ, ಅಗ್ನಿ ಪುರಾಣ, ನಾರದ ಪುರಾಣ, ಪದ್ಮ ಪುರಾಣ, ಲಿಂಗ ಪುರಾಣ, ಗರುಡ ಪುರಾಣ, ಕೂರ್ಮ ಪುರಾಣ ಹಾಗೂ ಸ್ಕಾಂದ ಪುರಾಣ.*
4. *ಢೇರೆ; ದಕ್ಷಿಣದ ದೇಶೀದೇವರು ಖಂಡೋಬಾ – ಪುಟ ೧೫೧*
5. *ತ್ರಿಪುರಾರಿ, ಮುರಾರಿ, ಕಂಸಾರಿ, ದೈತ್ಯಾರಿ ಮೊದಲಾದ ಪದಗಳಲ್ಲಿ ದೇವರಿಂದ ನಾಶವಾದ ವ್ಯಕ್ತಿಗಳ ಹೆಸರುಗಳೇ ಮೊದಲು ಬರುತ್ತವೆ. ಇದೇ ಪ್ರಭಾವ ಮಲ್ಲಾರಿಯಲ್ಲೂ ಕಂಡುಬರುತ್ತವೆ.*
6. *ಅಂದು ಮಾರ್ಗಶೀರ್ಷ ಶುದ್ಧ ಷಷ್ಠಿ, ರವಿವಾರ, ಶತತಾರ ನಕ್ಷತ್ರದಲ್ಲಿ ಲಿಂಗದ ಉಗಮವಾಯಿತು. ಇಂದಿಗೂ ಈ ದಿನವನ್ನು ಚಂಪಾಷಷ್ಠಿ, ವಾಂಗೀ ಭಟೀ, ಭಟ್ಟಿ ಹಬ್ಬ, ಕಿರುದೀಪಾವಳಿ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ.*
7. *ಶ್ರೀ ವೈ. ಜಿ. ಕುಲಕರ್ಣಿಯವರು ಸಂಸ್ಕೃತದಿಂದ ಅನುವಾದಿಸಿದ ಮಲ್ಲಾರಿ ಮಹಾತ್ಮೆ್ಯ ಪುರಾಣದಿಂದ ಸಂಗ್ರಹಿತ ಭಾಗ.*

8. ಡಾ. ಎಂ. ಬಿ. ನೇಗಿನಹಾಳರು ಸಂಗ್ರಹಿಸಿದ ಮೈಲಾರಲಿಂಗನ ಕಾವ್ಯ ಪುಸ್ತಕದಿಂದ ಸಂಗ್ರಹಿಸಿದ ಭಾಗ.
9. ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಇದಕ್ಕೂ ಸ್ವಾರಸ್ಯಕರವಾದ ಕಥೆಯೊಂದನ್ನು ಮೈಲಾರದ ಗೊರವರೊಬ್ಬರು ಹೇಳಿದರು. ಇದರ ಪ್ರಕಾರ ಮೈಲಾರನೇ ತಿಮ್ಮಪ್ಪನಿಗೆ ಸಾಲ ಕೊಟ್ಟಿದ್ದನಂತೆ, ಆದನ್ನು ತಿಮ್ಮಪ್ಪ ಮರಳಿ ಕೊಡಲಿಲ್ಲವಂತೆ. ಆಗ ಮೈಲಾರಪ್ಪ ನನ್ನ ಏಳು ಕೋಟಿ ಏಳು ಕೋಟಿ ಎಂದು ಹುಚ್ಚನಂತೆ ತಿರುಗಿದನಂತೆ. ಬಳಿಕ ತಿಮ್ಮಪ್ಪನನ್ನು ತನ್ನ ಹಣ ಕೊಡುವವರೆಗೂ ಇಲ್ಲಿಯೆ ಇರು ಎಂದು ಹೇಳಿ ತನ್ನ ಗುಡಿಯ ಹಿಂಭಾಗದಲ್ಲಿ ಕೈಗಳೆರಡನ್ನು ಸೇರಿಸಿ ಗೂಟ ಹೊಡೆದು ಕೂರಿಸಿದ್ದಾನೆ. ಇಂದಿಗೂ ಮೈಲಾರದಲ್ಲಿ ಮುಖ್ಯದೇವಸ್ಥನದ ಹಿಂದೆ ವಿಷ್ಣುವಿನ ಗುಡಿಯೊಂದಿದೆ. ಆದರಲ್ಲಿ ಧ್ಯಾನಮುದ್ರೆಯಲ್ಲಿರುವ ವಿಷ್ಣುವಿನ ವಿಗ್ರಹವೂ ಇದೆ.
10. ನಾನು ಕಂಡಂತೆ ಎರಡು ಆಚನೂರುಗಳಿವೆ. ಒಂದು ಬಾಗಲಕೋಟೆ ಜಿಲ್ಲೆಯ ಪ್ರಸಿದ್ಧ ಮಾರುತಿ ಕ್ಷೇತ್ರ; ಇನ್ನೊಂದು ಕೊಪ್ಪಳ ಜಿಲ್ಲೆಯಲ್ಲಿದ್ದ ಬೇಚಿರಾಕ್ ಗ್ರಾಮ. ಬಾಗಲಕೋಟೆ ಜಿಲ್ಲೆಯಲ್ಲಿರುವ ಆಚನೂರು ಗ್ರಾಮವು ಹನುಮಂತದೇವರ ಜಾಗೃತ ಸ್ಥಾನವಾಗಿದ್ದು ಇಲ್ಲಿ ನನಗೆ ತಿಳಿದ ಮಟ್ಟಿಗೆ ಮೈಲಾರನ ಉಲ್ಲೇಖವಿಲ್ಲ. ಕೊಪ್ಪಳ ಜಿಲ್ಲೆಯ ನಿಲೋಗಲ್ ಗ್ರಾಮದ ಬಳಿಯಿರುವ ಆಚನೂರು ಗ್ರಾಮವು ಈಗ ಜನವಸತಿಯಿಂದ ದೂರವಾಗಿದ್ದರೂ ಇಲ್ಲಿನ ದೈವವು 'ಆಚನೂರು ಮಲ್ಲಯ್ಯ' ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಈ ಪ್ರದೇಶದ ಸುತ್ತಮುತ್ತಲಿನ ಜಿಲ್ಲೆಗಳಲ್ಲಿ ಆಚನೂರು ಮಲ್ಲಯ್ಯನ ಆರಾಧಕರು ಇದ್ದಾರೆ. ಮೈಲಾರನ ಆಚರಣೆಗಳ ಸಾಮ್ಯತೆ ಇಲ್ಲಿಯೂ ಕಂಡುಬರುತ್ತದೆ. ಹತ್ತಿರದಲ್ಲಿಯೇ ಇರುವ ಗುಡೂರು ಗ್ರಾಮವು ಮಲ್ಲಪ್ಪ ಎಂಬ ಹೆಸರಿನ ಮೈಲಾರಕ್ಷೇತ್ರವೆಂದು ಡಾ. ಎಂ. ಬಿ. ನೇಗಿನಹಾಳ ಅವರು ಅಭಿಪ್ರಾಯಪಡುತ್ತಾರೆ. ಹಾಗೆಯೇ ಇಲ್ಲಿಂದ ಸುಮಾರು ೨೦ ಮೈಲಿ ದೂರದಲ್ಲಿರುವ ಜಂಪಾಲಿಂಗನ ದೇವಸ್ಥಾನವೂ ಮೈಲಾರನ ಕ್ಷೇತ್ರವಿರಬಹುದೆಂದು ನೇಗಿನಹಾಳ ಅವರು ಸಂದೇಹ ವ್ಯಕ್ತಪಡಿಸಿದ್ದಾರೆ. ಇದಲ್ಲದೇ ಆಚನೂರು ಮಲ್ಲಯ್ಯನ ಗುಡ್ಡವಿರುವ ಪ್ರದೇಶದ ಸುತ್ತಮುತ್ತ ಸಿದ್ದನಕೊಳ್ಳ, ಮಹಾಕೂಟ, ಅಜ್ಜನಕೊಳ್ಳ ಮೊದಲಾದ ಸ್ಥಳಗಳು ಕಾಳಾಮುಖರ ಕೇಂದ್ರಗಳಿದ್ದಿರಬಹುದು. ಹೀಗಾಗಿ ಆಚನೂರಿನ ಮಲ್ಲಯ್ಯನ ಕುರಿತ ಸಂಶೋಧನೆ ಮೈಲಾರನ ಕ್ಷೇತ್ರಗಳ ದೃಷ್ಟಿಯಿಂದ ಮಹತ್ವಪೂರ್ಣವೆಂದು ನನ್ನ ಭಾವನೆ.
11. ಜನಪದ ಕವಿಸಮಯ; ಈ ಎರಡು ಹುಣ್ಣುಗಳು ಮಾರಣಾಂತಿಕವೆಂಬ ಭಾವನೆಯಿದೆ.
12. ತಿರುಪತಿಯಲ್ಲಿನ ಐತಿಹ್ಯದಂತೆ ತಿಮ್ಮಪ್ಪ ಮದುವೆಯ ಸಂದರ್ಭದಲ್ಲಿ ಸಾಲ ಪಡೆದದ್ದು ಕುಬೇರನ ಬಳಿ.
13. ತಿರುಪತಿ ತಿಮ್ಮಪ್ಪ ತನ್ನ ಸಾಲವನ್ನು ಮತ್ತೆ ಮತ್ತೆ ಕೇಳಿ ಮೈಲಾರನ ಶಾಂತಿಗೆ ಭಂಗ ತಂದುದಕ್ಕಾಗಿ ಮೈಲಾರನೇ ಅವನ ಕೈಗಳನ್ನು ಜೋಡಿಸಿ ಕೈಗಳಲ್ಲಿ ಗೂಟ ಹೊಡೆದು ಕೂರಿಸಿದ್ದಾನೆ ಎಂಬ ಕಥೆಯೂ ಇದೆ. ಆದರೆ ಈ ವಿಗ್ರಹ ಯೋಗಮುದ್ರೆಯಲ್ಲಿರುವುದು ಸ್ಪಷ್ಟವಾಗಿದೆ.

14. ನಾನು ಕ್ಷೇತ್ರಕಾರ್ಯಕ್ಕಾಗಿ ಮದುವೆಯ ಕಾರ್ಯಕ್ರಮವೊಂದರಲ್ಲಿ ಭಾಗವಹಿಸಿದ್ದೆ. ಆ ಸಂದರ್ಭದಲ್ಲಿ ಗಮನಿಸಿದ ಒಡಬುಗಳಿವು.
15. ಡಾ॥ ಎಂ. ಬಿ. ನೇಗಿನಹಾಳರು ಸಂಗ್ರಹಿಸಿದ ಮೈಲಾರಲಿಂಗನ ಪದಗಳು ಪುಸ್ತಕದಿಂದ ಆಯ್ದ ಪದ್ಯಗಳು.
16. ವಿವರಣೆಗಾಗಿ ಇದೇ ಮಹಾಪ್ರಬಂಧದ ಪುಟ – ೭೫ ನೋಡಿರಿ.
17. ಶ್ರಿಮೈಲಾರಲಿಂಗೇಶ್ವರ ಒಡಪುಗಳು; ಲೇ. ಪ್ರಧಾನಪ್ಪ ಬಾ. ಹನುಮಣ್ಣನವರ; ಪುಟ – ೨
18. ಮೈಲಾರಲಿಂಗನ ಕಾವ್ಯ; ಸಂಗ್ರಪ – ಡಾ॥ ಮಂಜುನಾಥ ಬೇವಿನಕಟ್ಟಿ; ಖಡ್ಗ – ೫; ಪುಟ – ೩೫
19. ಡಾ॥ ಮಂಜುನಾಥ ಬೇವಿನಕಟ್ಟಿಯವರು ಸಂಗ್ರಹಿಸಿದ ಮೈಲಾರಲಿಂಗನ ಕಾವ್ಯದ ಮುನ್ನುಡಿಯಿಂದ.
20. ಮೈಲಾರಲಿಂಗನ ಕಾವ್ಯವನ್ನು ಪರಿಚಯಿಸುವ ದೃಷ್ಟಿಯಿಂದ ಮಂಜುನಾಥ ಬೇವಿನಕಟ್ಟಿಯವರು ಸಂಗ್ರಹಿಸಿದ ಮೈಲಾರಲಿಂಗನ ಕಾವ್ಯದಿಂದ ನೀಡಿದ ಆಯ್ದ ಭಾಗಗಳು.
21. ವಿವರಣೆಗಾಗಿ ಇದೇ ಮಹಾಪ್ರಬಂಧದ ಪುಟ – ೧೫೬ ನೋಡಿರಿ.

* * *

# ಅಧ್ಯಾಯ : ೯

# ಉಪಸಂಹಾರ

ನಮ್ಮ ಸಂಸ್ಕೃತಿಯಲ್ಲಿ ಹಾಸು ಹೊಕ್ಕಾಗಿರುವ ದೈವದ ಕಲ್ಪನೆಯೇ ಭಾರತದ ವೈಶಿಷ್ಟ್ಯವೆನ್ನಬಹುದು. ಇಲ್ಲಿ ಎಲ್ಲ ಜಾತಿ–ಜನಾಂಗಗಳವರಿಗೂ ಅವರದೇ ಆದ ದೈವದ ಪರಿಕಲ್ಪನೆಗಳಿವೆ; ಜಾನಪದೀಯ ಅಥವಾ ಶಿಷ್ಟ ಸಂಪ್ರದಾಯಗಳಿವೆ. ಸಹಸ್ರಾರು ವರ್ಷಗಳ ಇತಿಹಾಸದಲ್ಲಿ ಹಲವಾರು ಜನಾಂಗಗಳ, ಸಂಸ್ಕೃತಿಗಳ, ಧಾರ್ಮಿಕ ಪಂಥಗಳ ಉಗಮಕ್ಕೆ ಕಾರಣವಾದ ಅಂಶಗಳಿವೆ. ಅದೇ ರೀತಿ ವರ್ಗ ಸಂಘರ್ಷ ಹಾಗೂ ನಾಶಕ್ಕೆ ಕಾರಣವಾದ ಅಂಶಗಳೂ ಇವೆ. ಈ ರೀತಿಯ ಸಂಘರ್ಷ ಹಾಗೂ ನಾಶಗಳ ಪ್ರಕ್ರಿಯೆಯಲ್ಲಿ ಹೊಸ ಮಾರ್ಗವೊಂದು ಹುಟ್ಟುತ್ತ ಹೋಗುತ್ತದೆ. ಸಮಾಜವೂ ಸಹ ಈ ರೀತಿಯ ಹೊಸ ಪರಂಪರೆಗೆ ಒಗ್ಗಿಕೊಳ್ಳುತ್ತ ಹೋಗುತ್ತದೆ. ಅದೇ ರೀತಿ ಪ್ರಭುತ್ವದಲ್ಲಿ ಆಗುವ ಬದಲಾವಣೆಗಳು, ವಲಸೆ ಹೋಗುವಿಕೆ ಮೊದಲಾದ ಕಾರಣಗಳಿಂದ ಉಂಟಾಗುವ ಹಳೆಯ ಸಂಪ್ರದಾಯದ ಪತನ ಹಾಗೂ ಹೊಸ ಸಂಪ್ರದಾಯಗಳ ಉಗಮಗಳಲ್ಲಿ ಎರಡೂ ಸಂಪ್ರದಾಯಗಳ ಅಂಶಗಳು ಪಳೆಯುಳಿಕೆಗಳಂತೆ ಉಳಿದು ಬಿಡುತ್ತವೆ. ಹೀಗೆ ಭಾರತೀಯ ಸಂಸ್ಕೃತಿಯಲ್ಲಿ ಅನೇಕ ಹೊಸ ಸಂಪ್ರದಾಯಗಳು ಹಳೆಯ ಬೇರಿನಿಂದ ಬೆಳೆಯುವ ಹೊಸ ಚಿಗುರಿನಂತೆ ಬೆಳೆಯುತ್ತ ಬಂದಿವೆ.

ಇದೇ ರೀತಿಯಲ್ಲಿ ಬೆಳೆದು ಬಂದ ಸಂಸ್ಕೃತಿಯ ಸಾಂಸ್ಕೃತಿಕ ಭಾಗವಾಗಿರುವ ಮೈಲಾರಲಿಂಗನ ಸಂಪ್ರದಾಯ ಬಹು ಪ್ರಮುಖವಾದುದಾಗಿದೆ. ಇತಿಹಾಸದಲ್ಲಿ ದ್ರಾವಿಡರನ್ನು ಭಾರತದ ಮೂಲನಿವಾಸಿಗಳು ಹಾಗೂ ಆರ್ಯರನ್ನು ವಲಸೆ ಬಂದವರೆಂದು ಹೇಳಲಾಗಿದೆ. ಈ ರೀತಿ ಮೂಲ ಮತ್ತು ವಲಸೆ ಬಂದ ಜನಾಂಗಗಳು ತಮ್ಮ ಸಂಸ್ಕೃತಿಯ ಮೌಲ್ಯಗಳು ಪ್ರಸಾರವಾಡಲು ಹಾಗೂ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಸಂಘರ್ಷಗಳಲ್ಲಿ ತೊಡಗಿದವು. ಈ ಹಿನ್ನೆಲೆಯಲ್ಲಿ ಮಧ್ಯಕಾಲೀನ ಕರ್ನಾಟಕದ ಸಂದರ್ಭದಲ್ಲಿ ಉದಿಸಿದ ಮೈಲಾರಲಿಂಗನ ಸಂಪ್ರದಾಯವನ್ನು ಹೆಚ್ಚು ಆಸಕ್ತಿಯಿಂದ ನೋಡಬೇಕಾಗಿದೆ.

ಮೂಲತಃ ಆರ್ಯರ ಯಜ್ಞ ಯಾಗಾದಿಗಳ ಕಲ್ಪನೆಯನ್ನು ದಕ್ಷಯಜ್ಞದ ಸಂದರ್ಭದಲ್ಲಿವೀರಭದ್ರನು ನಾಶಮಾಡಿದನೆಂಬ ಉಲ್ಲೇಖ ಪುರಾಣಗಳಲ್ಲಿದೆ. ಆದರೆ ಅದೇ ವೀರಭದ್ರನನ್ನು ಆರ್ಯರ ಪುರೋಹಿತಶಾಹಿಯ ಕಲ್ಪನೆಯನ್ನು ಬೆಳೆಸಿಕೊಂಡು ಬಂದ ವೀರಶೈವರು ಆರಾಧಿಸುತ್ತಾರೆ. ಹೀಗೆ ಒಂದು ಕಡೆ ತಿರಸ್ಕಾರಗೊಂಡ ವಿಧಿ ವಿಧಾನಗಳೇ ಮತ್ತೊಂದು ಕಡೆ ಪುರಸ್ಕೃತಗೊಳ್ಳುತ್ತ ಬಂದಿವೆ. ಇದೇ ಹಿನ್ನೆಲೆಯಲ್ಲಿ ನೋಡಿದರೆ ಮೈಲಾರಲಿಂಗ ಮೂಲತಃ ಶೈವ ಪಂಥದ ಪ್ರಮುಖ ನಾಯಕ. ಈ ಪಂಥದ ಪ್ರಮುಖ ಶಾಖೆಗಳಾದ ಕಪಾಲಿಕ, ಕಾಳಾಮುಖ, ಲಾಕುಲೀಶಗಳಂತಹ ಪಂಥಗಳನ್ನು ಪೋಷಿಸುವ ಮೂಲಕ ಮೈಲಾರ ಪಂಥವು ತಾಂತ್ರಿಕ ಪಂಥವನ್ನು ಬೆಳೆಸಿ ವೀರಶೈವ ಧರ್ಮಕ್ಕೆ ಪರ್ಯಾಯವಾಗಿ ನಿಂತಿತು ಎಂದು ಹೇಳಬಹುದು.

ಆದರೆ ಮೈಲಾರನನ್ನು ಕುರಿತಾದ ಚಾರಿತ್ರಿಕ ಉಲ್ಲೇಖಗಳು, ಆಚರಣೆಗಳು, ಸಾಹಿತ್ಯಿಕ ಭಾಗಗಳಾದ ಗಾದೆ, ಒಡಪು, ಕಥೆ, ಕಾವ್ಯ, ಪುರಾಣ ಮೊದಲಾದವುಗಳನ್ನು ಗಮನಿಸಿದಾಗ ಮೈಲಾರನು ಮೂಲತಃ ಕುರುಬ ಜನಾಂಗಕ್ಕೆ ಸೇರಿದವನು. ಕುರುಬರೂ ಸಹ ಇತರರಂತೆ ಕೃಷಿಕಾರ್ಯದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಾಗ, ಅಲ್ಲಲ್ಲಿ ಬೀಡು ಬಿಟ್ಟರು. ಆ ಸಂದರ್ಭದಲ್ಲಿ ಅಲ್ಲಿ ಅದಾಗಲೇ ನೆಲೆನಿಂತಿದ್ದ ಜನಾಂಗಕ್ಕೂ ಹೊಸದಾಗಿ ಬಂದು ನೆಲೆನಿಲ್ಲುತ್ತಿರುವ ಹೊಸ ಜನಾಂಗಕ್ಕೂ ಮಧ್ಯೆ ಸಂಘರ್ಷ ಉಂಟಾಗಿರಬಹುದು. ಇಂತಹ ಸನ್ನಿವೇಶದಲ್ಲಿ ಮೈಲಾರನು ಈ ಸಂಘರ್ಷಕ್ಕೆ ಕಾರಣವಾದ ಪ್ರತಿರೋಧವನ್ನು ಹಿಮ್ಮೆಟ್ಟಿಸಿರಬಹುದು. ಆಗ ಸಹಜವಾಗಿಯೇ ಜನರೂ ಸಹ ಹೊಸ ಸಂಪ್ರದಾಯದ ಜೊತೆ ಸ್ನೇಹ ಬೆಳೆಸಿರಬಹುದು. ಹೀಗೆ ಎರಡು ಸಂಪ್ರದಾಯಗಳ ಮಿಲನದಿಂದ ಬೆಳೆದ ನೂತನ ಸಂಪ್ರದಾಯವು ಒಂದು ಮತದ ಚೌಕಟ್ಟಿಗೆ ಒಳಗಾಗಿ ಮತ್ತಷ್ಟು ಪ್ರಸಿದ್ಧಿ ಹೊಂದಿತು ಎಂದು ಹೇಳಬಹುದು. ಇದೇ ಸಂದರ್ಭಲ್ಲಿ ಶಿಷ್ಟರೆನಿಸಿಕೊಂಡ ಕೆಲವು ಜನಾಂಗಗಳು ಈ ನೂತನ ಸಂಪ್ರದಾಯವನ್ನು ವಿರೋಧಿಸಿದ್ದೂ ಉಂಟು. ಹೀಗೆ ಕಾಲ ಮತ್ತು ಪ್ರಾದೇಶಿಕತೆಗಳಿಗೆ ಅನುಗುಣವಾಗಿ ಮೈಲಾರ ಪಂಥದಲ್ಲಿಯೂ ಅನೇಕ ವ್ಯತ್ಯಾಸಗಳು ಉಂಟಾದವು. ಸಾಮಾಜಿಕ ಬೆಳವಣಿಗೆಯ ಪ್ರಕ್ರಿಯೆಗೆ ಅನುಗುಣವಾಗಿ ಪ್ರಭಾವಗಳು ಸೇರ್ಪಡೆಯಾದವು.

ದ್ರಾವಿಡ ಜಾನಪದದ ಪ್ರಮುಖ ಲಕ್ಷಣವೆಂದರೆ ಶಿವ ಹಾಗೂ ವಿಷ್ಣುವನ್ನು ಒಂದೇ ಭಾವದಿಂದ ಪೂಜಿಸುವುದು. ಇಂದಿಗೂ ಬುಡಕಟ್ಟು ದ್ರಾವಿಡ ಕುಲಗಳಲ್ಲಿ ಶಿವ ರಂಗರ ಐಕ್ಯತೆ ಎದ್ದು ಕಾಣುತ್ತದೆ. ಇದನ್ನೇ ನಾವು ಮೈಲಾರ ಸಂಪ್ರದಾಯದಲ್ಲಿಯೂ ಕಾಣುತ್ತೇವೆ. ಇಲ್ಲಿ ಶಿವ ನಾಯಕನಾದರೆ, ವಿಷ್ಣು ಹೆಗ್ಗಡೆಯಾಗಿ ಅವನ ಪ್ರಧಾನಿಯಾಗಿದ್ದಾನೆ. ಶಿವನನ್ನೂ ಸಹ ಗೊರವರು ಮಲ್ಲಯ್ಯ, ಮೈಲಾರ, ಮಲ್ಲಣ್ಣ ಎಂದು ಮೂಲ ಸ್ವರೂಪದಲ್ಲಿ ಪೂಜಿಸಿದರೆ, ಬ್ರಾಹ್ಮಣರು ಮಾರ್ತಾಂಡ ಎಂದು ಸೂರ್ಯನ ರೂಪದಲ್ಲಿ ಪೂಜಿಸುತ್ತಾರೆ. ಮಣ್ಣು ಮೈಲಾರದಲ್ಲಿ ಮಲ್ಲಯ್ಯನ ಮದುವೆ ಸಂದರ್ಭದಲ್ಲಿ ಬ್ರಾಹ್ಮಣ ಅರ್ಚಕರು ಹೆಣ್ಣಿನ ಕಡೆಯವರಾಗಿಯೂ, ಒಡೆಯರು ಗಂಡಿನ ಕಡೆಯವರಾಗಿಯೂ ನಿಂತು ಮದುವೆಯ ಕಾರ್ಯವನ್ನು ಪೂರೈಸುತ್ತಾರೆ. ಹೀಗಾಗಿ ಮೈಲಾರ ಸಂಪ್ರದಾಯದೊಳಗಿರುವ ಬ್ರಾಹ್ಮಣರು ಜನಪದ ಪದ್ಧತಿಗಳ ಒತ್ತಡದಲ್ಲಿ ಹೊಂದಿಕೊಂಡಂತೆ ಕಂಡುಬರುತ್ತದೆ. (ಆದರೆ ಮೈಲಾರನ ಪೂಜೆಯಲ್ಲಿ ಶಿಷ್ಟ ಸಂಪ್ರದಾಯದ ಅನುಸರಣೆಯಿದೆ.)

ಮೈಲಾರಲಿಂಗನ ಆಚರಣೆಗಳಲ್ಲಿ ಪ್ರಮುಖವಾಗಿ ಕಂಡುಬರುವದು ಉಗ್ರ ಆಚರಣೆಗಳು. ಕೈ ಪವಾಡ, ಕಾಲು ಪವಾಡ, ಕನ್ನೆ ಪವಾಡ, ಹಿಂದೆಂದೋ ಇತ್ತೊಂದು ಹೇಳುವ ಶಿರಸ್ ಪವಾಡ ಇವೆಲ್ಲವೂ ಉಗ್ರ ಆಚರಣೆಗಳೇ ಆಗಿವೆ. ಜನಪದ ದೈವಗಳು ಸಾಮಾನ್ಯವಾಗಿ ಕ್ಷುದ್ರ ದೇವತೆಗಳಾಗಿದ್ದು, ಶಿಷ್ಟ ಸಂಪ್ರದಾಯಕ್ಕಿಂತ ಇವುಗಳ ಆಚರಣೆ ಭಿನ್ನವಾಗಿರುತ್ತವೆ. ದೇವರನ್ನು ತೃಪ್ತಿ ಪಡಿಸಲೋಸುಗ ತನ್ನನ್ನೇ ತಾನು ಹಿಂಸಿಸಿಕೊಂಡು ಅದರ ಮೂಲಕ ಭವಿಷ್ಯದಲ್ಲಿ ದೈವದ ಆಶೀರ್ವಾದವನ್ನು ಹೊಂದುವ ಭರವಸೆಗಾಗಿ ಈ ರೀತಿಯ ಆಚರಣೆಗಳಿಗೆ ಒತ್ತು ನೀಡಲಾಗುತ್ತಿದೆ ಎನ್ನಬಹುದು. ಈ ರೀತಿಯ ಆಚರಣೆಗಳು ಜನಪದರಲ್ಲಿ ಸರ್ವೇ ಸಾಮಾನ್ಯ. ಮುಖ್ಯವಾಗಿ ಅಜ್ಞಾನ, ಅನಕ್ಷರತೆಗಳ ಕಾರಣದಿಂದ ಈ ಸಂಪ್ರದಾಯದ ಆಚರಣೆಗಳು ತಲೆತಲಾಂತವಾಗಿ ಬೆಳೆದುಬರುತ್ತವೆ. ಮೈಲಾರದ ಆಚರಣೆಗಳಲ್ಲಿರುವ ಉಗ್ರತೆಯ ಹಿನ್ನೆಲೆಯಲ್ಲಿ ಗಮನಿಸಿದಾಗ ಒಂದು ಭೂಪ್ರದೇಶಕ್ಕೆ ಸಂಬಂಧಿಸಿದಂತೆ ಈ ಆಚರಣೆಗಳು ಕಂಡು ಬರುತ್ತವೆ. ಅಂದರೆ ಹೈದರಾಬಾದ ಕರ್ನಾಟಕ ಭಾಗ, ಮತ್ತು ಇದಕ್ಕೆ ಹೊಂದಿಕೊಂಡ ಆಂಧ್ರಪ್ರದೇಶ ಹಾಗೂ ಮಹಾರಾಷ್ಟ್ರ ರಾಜ್ಯದ ಭಾಗಗಳಲ್ಲಿನ ಇತರ ದೇವತೆಗಳ ಆರಾಧನೆಯಲ್ಲಿಯೂ ಸಹ ಉಗ್ರತೆ ಕಂಡು ಬರುತ್ತದೆ. ಉದಾಹರಣೆಗೆ ಹೇಳುವುದಾದರೆ ವೀರಭದ್ರನ

ಒಕ್ಕಲಿನವರು ಶಸ್ತ್ರ ಪವಾಡ ಮಾಡುತ್ತಾರೆ. ದುರುಗುಮುರಿಗೆ ಸಂಪ್ರದಾಯದವರು ತಮ್ಮನ್ನೇ ತಾವು ಚಾಟಿಯಿಂದ ಹೊಡೆದುಕೊಳ್ಳು ಸಂಪ್ರದಾಯವಿದೆ. ಇವೆಲ್ಲವನ್ನೂ ಗಮನಿಸಿದಾಗ ಈ ರೀತಿಯ ಉಗ್ರ ಆಚರಣೆಗಳು ಒಂದು ಜನಾಂಗಕ್ಕೆ ಸೇರಿವೆಯೋ ಅಥವಾ ಒಂದು ಪರಿಸರಕ್ಕೆ ಸೇರಿವೆಯೋ ಎಂಬ ಅನುಮಾನ ಮೂಡುತ್ತದೆ. ಈ ನಿಟ್ಟಿನಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಜನಪದ ಅಧ್ಯಯನ ವಿಭಾಗದ ಮುಖ್ಯಸ್ಥೆ ಡಾ. ಶಾಲಿನಿ ರಘುನಾಥ ಅವರ ಹೇಳಿಕೆ ಉಲ್ಲೇಖಾರ್ಹ –

"ಜನಪದರು ಮೂಲತಃ ಅಲೆಮಾರಿಗಳು. ಕಾಲಾಂತರದಲ್ಲಿ ನಾಗರಿಕತೆಯ ಪ್ರಭಾವಕ್ಕೊಳಗಾಗಿ ಒಂದು ಕಡೆ ನೆಲೆ ನಿಂತವರು. ಅವರು ತಮ್ಮ ಸಣ್ಣ ಪುಟ್ಟ ಸಮಸ್ಯೆಗಳಿಗೂ ದೈವವೇ ಕಾರಣ. ಆ ದೈವವನ್ನು ತೃಪ್ತಿ ಪಡಿಸಿದರೆ ಆ ದೈವ ತಮ್ಮನ್ನು ಕಾಪಾಡುವುದೆಂಬ ನಂಬಿಕೆ ಇಟ್ಟು ಕೊಂಡವರು. ಕುರಿ, ಕೋಳಿ ಬಲಿಗಳೂ ಸಹ ಉಗ್ರತೆಯ ಸಂಕೇತಗಳೇ ಆಗಿವೆ. ಆದರೆ ಅವಕ್ಕಿಂತ ಶ್ರೇಷ್ಠನಾದ ಮಾನವ ತನ್ನನ್ನು ತಾನು ಹಿಂಸಿಸಿಕೊಂಡರೆ ದೇವರು ಬೇಗ ಒಲಿಯುವನೆಂಬ ಭಾವನೆ ವಿಶ್ವಾಸವಾಗಿ ಪರಿಗಣಿಸಲ್ಪಡುತ್ತದೆ. ಹೀಗಾಗಿ ಆ ರೀತಿಯ ಆಚರಣೆಗಳು ಮುಂದುವರಿದು ಬರುತ್ತವೆ. ಇನ್ನು ವಿಶೇಷವಾಗಿ ಬಳ್ಳಾರಿ ಸುತ್ತಮುತ್ತಲೂ ಇರುವ ಪ್ರದೇಶಗಳಲ್ಲಿ ಇರುವ ದೈವಗಳಲ್ಲಿ ಹೆಚ್ಚಿನವು ಇತ್ತೀಚೆಗೆ ನೆಲೆನಿಂತ ದೈವಗಳು. ಇವು ಮೊದಲು ಅಲೆಮಾರಿ ಜನಾಂಗಗಳ ಜೊತೆಗೆ ಗುರುತಿಸಿಕೊಂಡಿದ್ದು, ಕ್ರಮೇಣ ನೆಲೆನಿಂತವು. ಇಂದಿಗೂ ಸಹ ದುರುಗುಮುರಗಿ ಸಂಪ್ರದಾಯದಲ್ಲಿ ಊರಿಂದ ಊರಿಗೆ ದೈವವನ್ನು ಹೊತ್ತುಕೊಂಡು ಹೋಗುವುದನ್ನು ನಾವು ಕಾಣಬಹುದು".

ಮೈಲಾರದ ಆಚರಣೆಗಳಲ್ಲಿ ತಮ್ಮನ್ನು ತಾವು ಹಿಂಸಿಸಿಕೊಂಡು ದೇವರನ್ನು ತೃಪ್ತಿ ಪಡಿಸುವ ಜನಾಂಗಗಳ ಮಾನಸಿಕ ಸ್ಥಿತಿಯೇನು ಎಂಬ ಬಗ್ಗೆ ಎಲ್ಲಿಯೂ ಉಲ್ಲೇಖವಾಗಿಲ್ಲ. ಇಲ್ಲಿನ ಜನರು ಒಂದು ರೀತಿಯ ಮೌಢ್ಯಕ್ಕೊಳಗಾಗಿ ಈ ರೀತಿಯ ಆಚರಣೆಗಳನ್ನು ಮುಂದುವರಿಸಿರುವರೋ ಎಂಬ ಅನುಮಾನ ಎಲ್ಲರನ್ನೂ ಸಹಜವಾಗಿಯೇ ಕಾಡುತ್ತದೆ. ಇಲ್ಲಿನ ಆಚರಣೆಗಳಲ್ಲಿ ಪವಾಡ ಮಾಡಿದ ವ್ಯಕ್ತಿಯ ಹಾಗೂ ಅವನ ಕುಟುಂಬದ ಸ್ಥಿತಿಗಳೇನು? ಎಂಬ ಬಗ್ಗೆ ಯಾರೂ ಯೋಚಿಸುವುದಿಲ್ಲ. ಸ್ವತಃ ಅವರೇ ದೇವರಿಗಾಗಿಯೇ ಈ ದೇಹ ಎಂಬ ಭಾವನೆಯನ್ನು ಹೊಂದಿದ್ದಾರೆಂದ ಮೇಲೆ ಇತರರು ಅದನ್ನು ಕುರಿತು

ಚಿಂತಿಸುವುದೇ ಇಲ್ಲ. ಜೊತೆಗೆ ಇವರು ಮಾಡುವ ಕ್ರಿಯೆಗಳು ಜನಸಾಮಾನ್ಯರಲ್ಲಿ ಪವಾಡಗಳು ಎಂದು ಬಿಂಬಿತವಾಗಿರುವುದರಿಂದ ಭಗವಂತನ ಶಕ್ತಿಯನ್ನು ತೋರುವುದರ ಪ್ರತೀಕವಾಗಿ ಈ ಆಚರಣೆಗಳನ್ನು ನಡೆಸಲೇಬೇಕಾದ ಅನಿವಾರ್ಯತೆಯಿದೆ. ಆದರೆ ಬದಲಾಗುತ್ತಿರುವ ಸಮಾಜದಲ್ಲಿಯೂ ಈ ಆಚರಣೆಗಳ ಪ್ರಸ್ತುತತೆಯ ಬಗ್ಗೆ ಚಿಂತಿಸುವ ಅನಿವಾರ್ಯತೆಯಿದೆ.

ಮೈಲಾರ ಸಂಪ್ರದಾಯದ ಇನ್ನೊಂದು ಮುಖ ಇಲ್ಲಿನ ಐತಿಹ್ಯಗಳು. ಮೈಲಾರ ಮೂಲತಃ ಯಾವ ಜನಾಂಗಕ್ಕೇ ಸೇರಿರಲಿ, ಅವನನ್ನು ಕುರಿತಾದ ವಿಪುಲ ಐತಿಹ್ಯ ಹಾಗೂ ಕಾವ್ಯಗಳಿವೆ. ಆದರೆ ಇವುಗಳನ್ನು ಕುರಿತು ವ್ಯವಸ್ಥಿತವಾದ ಅಧ್ಯಯನ ನಡೆದಿಲ್ಲ. ಇವನ್ನು ಕುರಿತು ಅಧ್ಯಯನ ನಡೆಸಿ, ಸೂಕ್ತ ರೀತಿಯಲ್ಲಿ ಸಂಗ್ರಹಿಸಿ ಮುಂದಿನ ಜನಾಂಗಕ್ಕೆ ತಲುಪಿಸುವ ಕಾರ್ಯ ನಡೆಯಬೇಕಿದೆ. ಈ ನಿಟ್ಟಿನಲ್ಲಿ ಹಂಪಿ ವಿಶ್ವವಿದ್ಯಾನಿಲಯದಿಂದ ಶ್ಲಾಘನೀಯ ಪ್ರಯತ್ನಗಳು ನಡೆದಿವೆ. ಆದರೂ ಕರ್ನಾಟಕದ ಇತರ ಭಾಗಗಳಲ್ಲಿ ಇರುವ ವಿಭಿನ್ನ ದೈವಗಳನ್ನು ಕುರಿತಾಗಿ ನಡೆದಷ್ಟು ಕಾರ್ಯಗಳು ನಡೆದಿಲ್ಲ ಎನ್ನಬಹುದು.

ಮೈಲಾರ ಸಂಪ್ರದಾಯದ ಜೊತೆಗೇ ಮಿಳಿತಗೊಂಡಿರುವ ಸೋಮಲಿಂಗನ ಸಂಪ್ರದಾಯ, ತಿರುಪತಿ ತಿಮ್ಮಪ್ಪ, ಗುತ್ತೆಮ್ಮ, ಹುಲಿಗೆಮ್ಮ, ಎಲ್ಲಮ್ಮ ಮೊದಲಾದ ಸಂಪ್ರದಾಯಗಳ ಸಾಂಸ್ಕೃತಿಕ ಅಧ್ಯಯನಗಳನ್ನು ತುಲನಾತ್ಮಕವಾಗಿ ಗಮನಿಸುವ ಅವಶ್ಯಕತೆಯಿದೆ. ಈ ಎಲ್ಲ ಸಂಪ್ರದಾಯಗಳಿಗೂ ಪರಸ್ಪರ ಸಂಬಂಧ ಇರುವುದಂತೂ ನಿಜ. ಇವುಗಳನ್ನು ಕುರಿತಾದ ಪ್ರತ್ಯೇಕ ಅಧ್ಯಯನಕ್ಕೆ ಬದಲಾಗಿ ಸಮಗ್ರವಾದ ಅಧ್ಯಯನ ನಡೆಯಬೇಕು. ತನ್ಮೂಲಕ ಒಂದು ಪ್ರದೇಶದ ಒಟ್ಟಾರೆ ಸಂಸ್ಕೃತಿಯ ಪರಿಚಯ ಮುಂದಿನ ಜನಾಂಗಕ್ಕೆ ದೊರಕಬೇಕು ಎಂಬುದು ಈ ಕಾಳಜಿಯ ಹಿಂದಿರುವ ಆಶಯ.

ಪ್ರಸ್ತುತ ಸಂಶೋಧನಾ ಮಹಾಪ್ರಬಂಧದಲ್ಲಿ ಆಚರಣೆಗಳಿಗೆ ಸಂಬಂಧಿಸಿದ ವಿಷಯಗಳನ್ನು ಹಾಗೂ ಅವುಗಳ ಹಿನ್ನೆಲೆಗೆ ಸಂಬಂಧ ಪಟ್ಟ ವಿವರಗಳನ್ನು ಶಕ್ಯವಿದ್ದಷ್ಟು ಮಟ್ಟಿಗೆ ಸಂಗ್ರಹಿಸಿ ವಿವರಿಸಲಾಗಿದೆ. ಒಂದು ನಿರ್ದಿಷ್ಟ ಅವಧಿಯಲ್ಲಿ ಮಾಡುವ ಸಂಶೋಧನಾ ಕಾರ್ಯಕ್ಕೂ, ನಿರಂತರ ಸಂಶೋಧನೆಗೂ ಅಜಗಜಾಂತರ ವ್ಯತ್ಯಾಸವಿದೆ. ಈ ಸಂಶೋಧನೆ ನಿರಂತರ ಸಂಶೋಧನೆಗೆ ಪೂರಕ ಸಾಮಗ್ರಿಯಾಗಬಲ್ಲುದೇ ವಿನಃ

ಇದೇ ಪರಿಪೂರ್ಣವಲ್ಲ. ಆದ್ದರಿಂದ ಪರಿಪೂರ್ಣ ಸಂಶೋಧನೆಗೆ ಒತ್ತು ಕೊಡಬಲ್ಲ ಮನಸ್ಸು ವಿಶ್ವವಿದ್ಯಾಲಯಗಳದ್ದಾಗಬೇಕು.

ಮೈಲಾರ ದೇವಾಲಯವು ಕರ್ನಾಟಕ ಸರ್ಕಾರದ ಮುಜರಾಯಿ ಇಲಾಖೆಗೆ ಸೇರಿದ್ದಾಗಿದೆ. ಸರ್ಕಾರದ ಸ್ಪಷ್ಟ ನಿರ್ಲಕ್ಷದ ಪ್ರಭಾವದಿಂದ ಈ ದೇವಸ್ಥಾನದ ಬಗ್ಗೆ ಜನಸಾಮಾನ್ಯರಿಗೆ ಅರಿವು ಮೂಡಿಸುವ ಕಾರ್ಯಗಳಾಗುತ್ತಿಲ್ಲ. ಈಚೆಗೆ ಸುಣ್ಣ ಬಣ್ಣ ಹಚ್ಚಿ ಕಣ್ಣು ಕುಕ್ಕುವಂತೆ ಮಾಡಿದ್ದಾರೆಯೇ ವಿನಃ ಬೇರಾವ ರೀತಿಯಲ್ಲಿಯೂ ಈ ಸಂಪ್ರದಾಯದ ಕುರಿತಾಗಿಯಾಗಲೀ, ಇಲ್ಲಿನ ಆಚರಣೆಗಳ ಬಗ್ಗೆಯಾಗಲೀ ವಿಶೇಷವಾಗಿ ಚಿಂತಿಸಿಲ್ಲವೆನಿಸುತ್ತದೆ. ಹತ್ತರೊಳಗೆ ಹನ್ನೊಂದು ಎನ್ನುವಂತೆ ಕೇವಲ ಜೀರ್ಣೋದ್ಧಾರ ಮಾಡಿ, ಬರುವ ಮುಡಿಪು, ಕಾಣಿಕೆಗಳ ಸಂಗ್ರಹಕ್ಕೆ ಒಂದು ಸ್ಥಾನವನ್ನು ಕಲ್ಪಿಸಿದರೆ ಸಾಲದು. ಈ ದೈವದ ಬಗ್ಗೆ ಜನರ ಮನಸ್ಸಿನಲ್ಲಿರುವ ಭಾವನೆಗಳಿಗೆ ಸ್ಪಂದಿಸುವ ಕಾರ್ಯಗಳಾಗಬೇಕು. ಕಾರಣಿಕದಂತಹ ಉತ್ಸವಗಳ ಸಂದರ್ಭದಲ್ಲಿ ಲಕ್ಷಾಂತರ ಜನ ಸೇರಿದರೂ ಅವರಿಗೆ ಬೇಕಾದ ಪ್ರಾಥಮಿಕ ಅವಶ್ಯಕತೆಗಳ ಪೂರೈಕೆಗೂ ಅವಕಾಶವಿಲ್ಲದ ಸ್ಥಿತಿಯಿರುತ್ತದೆ. ಜನರು ಒಂದೆರಡು ದಿನಗಳ ಮಾತಲ್ಲವೇ ಎಂದು ಈ ನಿಟ್ಟಿನಲ್ಲಿ ಯೋಚಿಸದೇ ಇರಬಹುದು. ಆದರೆ ಇದೇ ಸ್ಥಿತಿ ಮುಂದುವರಿದಲ್ಲಿ ಕ್ರಮೇಣ ಜನರಲ್ಲಿನ ಆಸಕ್ತಿ ಕುಂಠಿತವಾಗುವ ಸಾಧ್ಯತೆ ಇದೆ. ಹಾಗಾದಲ್ಲಿ ಒಂದು ಶ್ರೀಮಂತ ಸಂಸ್ಕೃತಿಯ ಪ್ರತೀಕವಾಗಿರುವ ಮೈಲಾರ ಸಂಪ್ರದಾಯ ಕ್ರಮೇಣ ಇತರ ನಶಿತ ಸಂಪ್ರದಾಯಗಳಂತೆ ಪಳೆಯುಳಿಕೆಯಾಗುತ್ತದಷ್ಟೇ!

ಮೈಲಾರದ ಕಾರಣಿಕದ ಸಂದರ್ಭವನ್ನೇ ಉಲ್ಲೇಖಿಸುವುದಾದರೆ ಅಂದು ಸಂಜೆ ಸುಮಾರು ನಾಲ್ಕು ಗಂಟೆಯ ಹೊತ್ತಿಗೆ ಮೈಲಾರಕ್ಕೆ ಜನಸಾಗರವೇ ಹರಿದು ಬರುತ್ತದೆ. ಬೆಂಗಳೂರಿನಂತಹ ನಗರಗಳಲ್ಲಿ ಒಬ್ಬ ಸಾಮಾನ್ಯ ದರ್ಜೆಯ ಮಂತ್ರಿ ಬರುತ್ತಾರೆಂದರೂ ಒಂದೊಂದು ಮೀಟರಿಗೊಬ್ಬರಂತೆ ಪೊಲೀಸಿನವರು ನಿಂತು ವಾಹನ ಸಂಚಾರ ವ್ಯವಸ್ಥೆಯನ್ನು ನಿಯಂತ್ರಿಸುತ್ತಿರುತ್ತಾರೆ. ಆದರೆ ಮೈಲಾರಕ್ಕೆ ಕಾರಣಿಕಕ್ಕೆಂದು ಬರುವ ಭಕ್ತರ ಸಾವಿರಾರು ವಾಹನಗಳು ರಸ್ತೆಯಲ್ಲಿ ಸಂಚರಿಸುವಾಗ ಒಬ್ಬನೇ ಒಬ್ಬ ಪೊಲೀಸ್ ಅಧಿಕಾರಿಯೂ ಕಂಡು ಬರುವುದಿಲ್ಲ. ಇದು ದಿವ್ಯ ನಿರ್ಲಕ್ಷದ ಪರಮಾವಧಿ. ದೇವಸ್ಥಾನದ

ಸುತ್ತ ಠಳಾಯಿಸುತ್ತ ಬಂದ ಭಕ್ತರನ್ನು ಬೈಯ್ಯುತ್ತ ಓಡಾಡುವುದನ್ನೇ ಕರ್ತವ್ಯವೆಂದು ಭಾವಿಸಿದ ಪೊಲೀಸ್ ಆಡಳಿತ ಈ ನಿಟ್ಟಿನಲ್ಲಿ ಚುರುಕಾಗುವ ಅನಿವಾರ್ಯತೆ ಎದ್ದು ಕಾಣುತ್ತದೆ. ಅದೇ ರೀತಿ ಕನಿಷ್ಟ ಪಕ್ಷ ಜಾತ್ರೆಯ ಸಂದರ್ಭಗಳಲ್ಲಿಯಾದರೂ ಕಟ್ಟುನಿಟ್ಟಿನ ಸಂಚಾರಿ ವ್ಯವಸ್ಥೆಯನ್ನು ಜಾರಿಗೆ ತರುವ ಪ್ರಯತ್ನಗಳು ಮೈಲಾರದಲ್ಲಿ ಆಗಬೇಕಾಗಿದೆ.

ಇದೇ ರೀತಿಯಲ್ಲಿ ಕಾರಣಿಕದ ಮೈದಾನ (ಡೆಂಕನ ಮರಡಿ) ಹಾಗೂ ಇತರೆಡೆಗಳಲ್ಲಿ ಜನರಿಗೆ ಓಡಾಡಲು ಅನುಕೂಲಕರ ವಾತಾವರಣ ಕಲ್ಪಿಸಬೇಕು. ಅಲ್ಲಿಗೆ ಬರುವ ಜನರೆಲ್ಲ ಸ್ಥಳೀಯರಲ್ಲ. ಅವರಿಗೆ ಉತ್ತಮ ಸೌಕರ್ಯಗಳು ಒದಗಿದಲ್ಲಿ ಮುಂದು ಜನ ಇನ್ನೂ ಹೆಚ್ಚು ಆನಂದದಿಂದ ಬರುತ್ತಾರೆ. ಇಲ್ಲವಾದರೆ ಒಂದೇ ಬಾರಿಗೆ ಬೇಸರಗೊಂಡು ಮರುವರ್ಷ ತಮ್ಮೂರಿನಲ್ಲಿಯೇ ಕೈಮುಗಿಯುತ್ತಾರೆ. ಈ ರೀತಿಯಾದಲ್ಲಿ ಬರುಬರುತ್ತ ಜನರ ಭಾವನೆಗಳು ನಶಿಸುವ ಸಾಧ್ಯತೆಗಳಿರುತ್ತವೆ. ಆದ್ದರಿಂದ ಜನರಿಗೆ ಪೂರಕ ವಾತಾವರಣ ಕಲ್ಪಿಸಬೇಕು.

ಮೈಲಾರಕ್ಕೆ ಭೇಟಿನೀಡುವವರಿಗೆ ಆಗುವ ಇನ್ನೊಂದು ಅನುಭವೆಂದರೆ ಗೊರವಪ್ಪಗಳದ್ದು. ಚಿಕ್ಕ ಚಿಕ್ಕ ಮಕ್ಕಳೂ ಸಹ ಕೈಯ್ಯಲ್ಲೊಂದು ಭಂಡಾರದ ಬಟ್ಟಲನ್ನು ಹಿಡಿದು ಹಣಕ್ಕಾಗಿ ಪೀಡಿಸುವುದು. ಇದು ಸಾಮಾನ್ಯವಾಗಿ ಎಲ್ಲ ದೇವಸ್ಥಾನಗಳಲ್ಲಿ ಕಂಡುಬರುತ್ತದಾದರೂ, ಮೈಲಾರದಲ್ಲಿ ಗೊರವರಿಗೆ ಒಂದು ರೀತಿಯ ಪೂಜ್ಯ ಸ್ಥಾನವಿದೆ. ಅದ್ದರಿಂದ ಈ ಪ್ರಕ್ರಿಯೆಯನ್ನು ತಹಬಂದಿಗೆ ತರುವ ಅಗತ್ಯವಿದೆ. ಮೈಲಾರದ ಗೊರವರಿಗೆ ಸಂಬಂಧಿಸಿದಂತೆ ಇನ್ನೊಂದು ಹೇಳಲೇಬೇಕಾದ ಮಾತೆಂದರೆ, ತಮ್ಮ ಭಕ್ತರಿರುವ ಸ್ಥಳಗಳಿಗೆ ಹೋಗಿ ಇಂತಿಷ್ಟೇ ಹಣವನ್ನು ನೀಡಬೇಕೆಂದು ಒತ್ತಾಯಿಸುವುದು. ಇದರಿಂದಾಗಿ ಬೇರೆ ಊರುಗಳಲ್ಲಿರುವ ಭಕ್ತರು, ತಾವು ಮೈಲಾರನ ಭಕ್ತರೇ ಅಲ್ಲ ಎಂದು ಹೇಳುವ ಸ್ಥಿತಿ ಒದಗಿರುವುದು ಒಂದು ದುರಂತ. ಇದನ್ನು ಮೈಲಾರದ ಧರ್ಮದರ್ಶಿಗಳು ಮತ್ತು ಇತರ ಅಧಿಕಾರಿಗಳು ಗಮನಿಸಬೇಕು.

ದೇವಸ್ಥಾನವು ಸರ್ಕಾರೀ ಕೃಪಾಪೋಶಿತ ನಾಟಕ ಮಂಡಳಿಯ ಆಡಳಿತದಲ್ಲಿದ್ದರೂ, ಧರ್ಮದರ್ಶಿಗಳಾದ ಶ್ರೀ ಶ್ರೀ ವೆಂಕಪ್ಪಯ್ಯ ಒಡೆಯರ ಅವರ ಕಾರ್ಯ ಚಟುವಟಿಕೆ ಗಳಿಂದಾಗಿ ಉತ್ತಮ ವಾತಾವರಣದಲ್ಲಿದೆ. ಜನರ ಸಹಕಾರವೂ ಇವರಿಗೆ ಇರುವುದರಿಂದ

ಕೆಲ ಉತ್ತಮ ಸೌಕರ್ಯಗಳು ದೊರೆಯುತ್ತಿವೆ. ಅನೇಕ ಮಹನೀಯರ ದಾನದಿಂದ ದೇವಾಲಯದ ಆವರಣದಲ್ಲಿ ಭಕ್ತಾದಿಗಳ ಅನುಕೂಲಕ್ಕೆಂದು ವಸತಿ ಕೋಣೆಗಳನ್ನು ನಿರ್ಮಿಸಲಾಗಿದೆ. "ಕಾರಣಿಕದ ದಿನ ನಡೆದ ಸಭೆಯಲ್ಲಿ ಗುರುಗಳೇ ಹೇಳಿದಂತೆ ದೇವಸ್ಥಾನಕ್ಕೆ ಬರುವ ಭಕ್ತಾದಿಗಳಿಗೆ ಮುಖ್ಯ ದೇವಾಲಯದ ಆವರಣದಲ್ಲಿಯೇ ಉಚಿತ ಭೋಜನದ ವ್ಯವಸ್ಥೆಯನ್ನು ಮಾಡುವ ಉದ್ದೇಶ ಅವರಿಗಿದೆ. ಅನೇಕ ಜನ ಭಕ್ತರು ತಮ್ಮ ಸಹಕಾರ ನೀಡುವುದಾಗಿ ಅಂದೇ ವಾಗ್ದಾನವನ್ನೂ ಮಾಡಿದರು". ಆದರೆ ಒಂದು ಸರ್ಕಾರಿ ಆಡಳಿತದಿಂದ ಆಗುವ ವ್ಯವಸ್ಥೆಗೂ ಒಬ್ಬ ವ್ಯಕ್ತಿ ಮಾಡುವ ವ್ಯವಸ್ಥೆಗಳಿಗೂ ಸಾಕಷ್ಟು ವ್ಯತ್ಯಾಸಗಳಿರುತ್ತವೆ. ಕೊನೆಯ ಪಕ್ಷ ಸರ್ಕಾರದವರು ಜನರ ಸಹಕಾರದೊಂದಿಗೆ ಒಡೆಯರಂಥವರ ನೇತೃತ್ವದಲ್ಲಿ ಸಂಪೂರ್ಣ ವ್ಯವಸ್ಥೆಯನ್ನು ಸುಧಾರಿಸಲು ಯತ್ನಿಸಿದರೆ, ಜನರೇ ಮುಂದೆ ನಿಂತು ಸಹಾಯ ಹಸ್ತ ಚಾಚುತ್ತಾರೆ. ಈ ನಿಟ್ಟಿನಲ್ಲಿ ಚಿಂತನೆಗಳು ನಡೆಯಬೇಕಿದೆ.

ಮೈಲಾರದ ಬಗ್ಗೆ ಅನೇಕ ಪುಸ್ತಕಗಳು ಪ್ರಕಟಗೊಂಡರೂ ಅವುಗಳಲ್ಲಿ ಸಾಕಷ್ಟು ದ್ವಂದ್ವಗಳಿದ್ದವು. ಹೀಗಾಗಿ ಮೈಲಾರದ ಸಂಪ್ರದಾಯವಿರುವ ಭಕ್ತರಿಗೆ ತಮ್ಮ ದೈವದ ಕುರಿತಾದ ಸ್ಪಷ್ಟ ಕಲ್ಪನೆಯಿರುತ್ತಿರಲಿಲ್ಲ. ಈ ಹಿನ್ನೆಲೆಯಲ್ಲಿ ಶ್ರೀ ಕೃಷ್ಣಪ್ಪನವರ ಮೂಲಕ ಮೈಲಾರದ ಚರಿತ್ರೆಯನ್ನು ಕುರಿತು ಇರುವ ಐತಿಹ್ಯ ಪುರಾಣಗಳ ಆಧಾರದಲ್ಲಿ "ಶ್ರೀಮೈಲಾರಲಿಂಗೇಶ್ವರ ದಿವ್ಯ ಚರಿತಾಮೃತ" ಎಂಬ ಪುಸ್ತಕವೊಂದನ್ನು ಶ್ರೀ ವೆಂಕಪ್ಪಯ್ಯ ಒಡೆಯರ್ ಅವರು ಭಕ್ತರ ನೆರವಿನೊಂದಿಗೆ ಪ್ರಕಟಿಸಿದ್ದಾರೆ. ಈ ರೀತಿಯ ಸಾಹಿತ್ಯದಿಂದ ಮೈಲಾರಲಿಂಗನ ಬಗ್ಗೆ ಇರುವ ದ್ವಂದ್ವಗಳನ್ನು ಪರಿಹರಿಸಿಕೊಳ್ಳಲು ಸಾಧ್ಯವಾಗುವುದು. ಇದೇ ರೀತಿ ಮೈಲಾರಲಿಂಗನನ್ನು ಕುರಿತು ಇರುವ ಸಮಗ್ರ ಜಾನಪದ ಸಾಹಿತ್ಯವನ್ನು ಒಂದು ಕಡೆ ಸಂಗ್ರಹಿಸುವ ಕಾರ್ಯವನ್ನು ಗುರುಗಳು ಕೈಗೊಂಡರೆ ಸಾರ್ಥಕವಾಗುವುದು.

ಒಟ್ಟಿನಲ್ಲಿ ಮೈಲಾರದ ಆಚರಣೆಗಳು, ಇಲ್ಲಿನ ನಂಬಿಕೆಗಳು ವಿಧಿ ವಿಧಾನಗಳು ಒಂದು ಪರಂಪರೆಯ ಜೀವಂತ ಕುರುಹುಗಳು. ಸಮಾಜ ಎಷ್ಟೇ ಬದಲಾಗುತ್ತಿದ್ದರೂ, ಜನರಲ್ಲಿ ಈ ದೈವವನ್ನು ಕುರಿತ ಭಾವನೆಗಳು ಬದಲಾಗಿಲ್ಲ. ಜನರು ಇಂದಿಗೂ ಮೊದಲಿನ ಶ್ರದ್ಧೆ, ಭಕ್ತಿಗಳನ್ನೇ ಮುಂದುವರಿಸಿಕೊಂಡು ಬರುತ್ತಿದ್ದಾರೆ. ಉನ್ನತ ಹುದ್ದೆಗಳಲ್ಲಿ

ಇರುವವರೂ ಸಹ ಈ ದೈವದ ಭಕ್ತವರ್ಗಕ್ಕೆ ಸೇರಿದವರಾಗಿದ್ದು, ಜನಸಾಮಾನ್ಯರಂತೆಯೇ ತಮ್ಮ ನಿಷ್ಠೆ ಉಳಿಸಿಕೊಂಡು, ಬೆಳೆಸಿಕೊಂಡು ಬರುತ್ತಿದ್ದಾರೆ. ಈ ಪರಂಪರೆ ಮುಂದುವರಿಯಬೇಕು. ಈ ಸಂಪ್ರದಾಯದ ಎಲ್ಲ ಮಗ್ಗುಲುಗಳನ್ನು ಕುರಿತಾದ ಸಂಶೋಧನೆಗಳಾಗಬೇಕು. ತನ್ಮೂಲಕ ಕರ್ನಾಟಕದ ಪ್ರಾಚೀನ ಜನಾಂಗವೊಂದರ ಪರಿಚಯ ಜಗತ್ತಿಗೆ ಸಿಗಬೇಕು ಎಂಬುದು ಈ ಅಧ್ಯಯನದ ಹಿಂದಿರುವ ಮಹದಾಸೆ. ಈ ಆಶಯವನ್ನು ಪೂರೈಸುವ ನಿಟ್ಟಿನಲ್ಲಿ ಇದೊಂದು ಸಣ್ಣ ಪ್ರಯತ್ನವಷ್ಟೇ. ಈ ರೀತಿಯಲ್ಲಿ ವಿಭಿನ್ನ ನೆಲೆಗಳ ಮೇಲೆ ಬೇರೆ ಬೇರೆ ಸಂಶೋಧನೆಗಳಾದರೂ ಅವುಗಳ ನಿರಂತರತೆಯಿಂದಾಗಿ ಮುಂದೊಂದು ದಿನ ಸಮಗ್ರ ಚಿತ್ರಣ ದೊರೆಯಬಹುದೆಂಬ ಆಶಾವಾದ ನನ್ನದು. ಈ ನಿಟ್ಟಿನಲ್ಲಿ ಈ ಭಾಗದ ವಿಶ್ವವಿದ್ಯಾಲಯಗಳು, ಜಾನಪದ ಸಂಶೋಧಕರು ಪರಸ್ಪರ ಕೈಜೋಡಿಸಿ ಕಾರ್ಯನಿರ್ವಹಿಸಬೇಕು.

* * *

# ಅನುಬಂಧಗಳು

೧. ಕಾರಣಿಕದ ನುಡಿಗಳು
೨. ವಕ್ತೃಗಳು
೩. ಆಹ್ವಾನಪತ್ರ ಹಾಗೂ ನಕ್ಷೆಗಳು
೪. ಛಾಯಾಚಿತ್ರಗಳು
೫. ಆಕರ ಗ್ರಂಥಸೂಚಿ

# ಅನುಬಂಧ – ೧

## ೧೯೦೦ ರಿಂದ ೨೦೦೮ರ ವರೆಗೆ

## ಶ್ರೀ ಮೈಲಾರಲಿಂಗೇಶ್ವರ ಸ್ವಾಮಿಯ ಸನ್ನಿಧಿಯಲ್ಲಿ ನುಡಿದ

## ಕಾರ್ಣಿಕಗಳು

| | | |
|---|---|---|
| ೧ | ೧೯೦೦ | ಮುತ್ತಿನ ಮಳೆ ಸುರಿದೀತಲೇ ಬಹು ಪರಾಕ್ । |
| ೨ | ೧೯೦೧ | ಹುಟ್ಟಿದ ಕಂದ ಕಷ್ಟಪಟ್ಟು ಸುಖ ಪಡದಿತಲೇ ಪರಾಕ್ । |
| ೩ | ೧೯೦೨ | ಅಂಬಲಿ ಹಳಸಿತಲೇ ಪರಾಕ್ । |
| ೪ | ೧೯೦೩ | ಭೂಲೋಕಕ್ಕೆ ಮಬ್ಬುಗವೀತಲೇ ಪರಾಕ್ । |
| ೫ | ೧೯೦೪ | ಸಂಪಲೇ ಬಹು ಪರಾಕ್ । |
| ೬ | ೧೯೦೫ | ಮಳೆ ಬೆಳೆ ಸಂಪಲೇ ಪರಾಕ್ । |
| ೭ | ೧೯೦೬ | ಆಕಾಶಕ್ಕೆ ಶಿಡ್ಲು ಬಡಿತಲೇ ಪರಾಕ್ । |
| ೮ | ೧೯೦೭ | ಸವನಿಧಿಯಲೇ ಪರಾಕ್ । |
| ೯ | ೧೯೦೮ | ಮರ್ತ್ಯಕ್ಕೆ ಮಬ್ಬುಗವಿತಲೇ ಪರಾಕ್ । |
| ೧೦ | ೧೯೦೯ | ಸಂತೃಪ್ತಿ ಆದೀತಲೇ ಪರಾಕ್ । |
| ೧೧ | ೧೯೧೦ | ಕಲಕು ಮಲಕು ಆದೀತಲೇ ಪರಾಕ್ । |
| ೧೨ | ೧೯೧೧ | ಮಳೆ ಬೆಳೆ ಸಂಪಲೇ ಪರಾಕ್ । |
| ೧೩ | ೧೯೧೨ | ಶಿಶುವಿಗೆ ಕಶಿವಾಲಾದೀತಲೇ ಪರಾಕ್ । |
| ೧೪ | ೧೯೧೩ | ಸಣ್ಣದೊಂದು ದಿನ ಬಂತಲೇ ಪರಾಕ್ । |
| ೧೫ | ೧೯೧೪ | ಆಕಾಶಕ್ಕೆ ಶಿಡ್ಲು ಬಡೀತಲೇ ಪರಾಕ್ । |
| ೧೬ | ೧೯೧೫ | ಕಲಕು ಮಲಕು ಆದೀತಲೇ ಪರಾಕ್ । |
| ೧೭ | ೧೯೧೬ | ಮರ್ತ್ಯಕ್ಕೆ ಮಬ್ಬುಗವೀತಲೇ ಪರಾಕ್ । |
| ೧೮ | ೧೯೧೭ | ಸಂತೃಪ್ತಿಯಲೇ ಪರಾಕ್ । |
| ೧೯ | ೧೯೧೮ | ಸಣ್ಣದೊಂದು ದಿನ ಬಂತಲೇ ಪರಾಕ್ । |
| ೨೦ | ೧೯೧೯ | ಸವನಿಧಿಯಲೇ ಪರಾಕ್ । |

೨೧ ೧೯೨೦ ಬೆಳೆ ಚಂದ ಮಂದಲೇ ಪರಾಕ್ ।
೨೨ ೧೯೨೧ ಮರ್ತ್ಯಕ್ಕೆ ಮಬ್ಬು ಕವಿತಲೇ ಪರಾಕ್ ।
೨೩ ೧೯೨೨ ಸವನಿಧಿಯಲೇ ಪರಾಕ್ ।
೨೪ ೧೯೨೩ ಕಷ್ಟ ಬಂದು ಸುಖ ಬಂದಿತಲೇ ಪರಾಕ್ ।
೨೫ ೧೯೨೪ ಮರ್ತ್ಯಲೋಕಕ್ಕೆ ಕತ್ತಲಾತಲೇ ಪರಾಕ್ ।
೨೬ ೧೯೨೫ ಮಳೆ ಬೆಲೆ ಸಂಪಲೇ ಪರಾಕ್ ।
೨೭ ೧೯೨೬ ಸಣ್ಣದೊಂದು ದಿನ ಬಂತಲೇ ಪರಾಕ್ ।
೨೮ ೧೯೨೭ ಸಂಪಲೇ ಬಹು ಪರಾಕ್ ।
೨೯ ೧೯೨೮ ಸವನಿಧಿಯಲೇ ಪರಾಕ್ ।
೩೦ ೧೯೨೯ ಸಣ್ಣದೊಂದು ದಿನ ಬಂತಲೇ ಪರಾಕ್ ।
೩೧ ೧೯೩೦ ಸಂತೃಪ್ತಿ ಆಗೀತಲೇ ಪರಾಕ್ ।
೩೨ ೧೯೩೧ ಸಂತೃಪ್ತಿ ಪರಾಕ್ ।
೩೩ ೧೯೩೨ ಮರ್ತ್ಯಕ್ಕೆ ಮಬ್ಬು ಕವೀತಲೇ ಪರಾಕ್ ।
೩೪ ೧೯೩೩ ಸಣ್ಣದೊಂದು ದಿನ ಬಂತಲೇ ಪರಾಕ್ ।
೩೫ ೧೯೩೪ ಅಂಬಲಿ ಹಳಸಿತಲೇ ಪರಾಕ್ ।
೩೬ ೧೯೩೫ ಮರ್ತ್ಯಕ್ಕೆ ಮಬ್ಬುಗವಿತಲೇ ಪರಾಕ್ ।
೩೭ ೧೯೩೬ ಕಪ್ಪತಗುಡ್ಡಕ್ಕೆ ಕಟ್ಟಿರವಿ ಮುಕ್ಕರಿದವಲೇ ಪರಾಕ್ ।
೩೮ ೧೯೩೭ ಕಲಕು ಮಲಕು ಆದೀತಲೇ ಪರಾಕ್ ।
೩೯ ೧೯೩೮ ಸಣ್ಣದೊಂದು ದಿನ ಬಂತಲೇ ಪರಾಕ್ ।
೪೦ ೧೯೩೯ ಆಕಾಶಕ್ಕೆ ಗುಂಡು ಬಿತ್ತಲೇ ಪರಾಕ್ ।
೪೧ ೧೯೪೦ ಮರ್ತ್ಯಕ್ಕೆ ಮಬ್ಬು ಕವೀತಲೇ ಪರಾಕ್ ।
೪೨ ೧೯೪೧ ಅಂಬಲಿ ಹಳಸಿತಲೇ ಪರಾಕ್ ।
೪೩ ೧೯೪೨ ಕಲಕು ಮಲಕು ಆದೀತಲೇ ಪರಾಕ್ ।
೪೪ ೧೯೪೩ ಸವನಿಧಿ ಸಂಪಲೇ ಪರಾಕ್ ।
೪೫ ೧೯೪೪ ಬೆಳೆ ಮಂದ ಮಳೆ ಚಂದಲೇ ಪರಾಕ್ ।
೪೬ ೧೯೪೫ ಆಕಾಶಕ್ಕೆ ಮಬ್ಬುಕವೀತಲೇ ಪರಾಕ್ ।

೪೭ ೧೯೪೬ ಮುತ್ತಿನಮಾಲಿ ಚೂರಾಯಿತಲೇ ಪರಾಕ್ ।

೪೮ ೧೯೪೭ ಕಂದ ಕಷ್ಟಪಟ್ಟು ಸುಖ ಪಡಿತಲೇ ಪರಾಕ್ ।

೪೯ ೧೯೪೮ ಆಕಾಶಕ್ಕೆ ಶಿಡ್ಲು ಬಡೀತಲೇ ಪರಾಕ್ ।

೫೦ ೧೯೪೯ ಮುತ್ತು ಒಡೆದು ಮಾಲಿ ಆದೀತಲೇ ಪರಾಕ್ ।

೫೧ ೧೯೫೦ ಸಣ್ಣದೊಂದು ದಿನ, ದೊಡ್ಡದಿನ ಬಂತಲೇ ಪರಾಕ್ ।

೫೨ ೧೯೫೧ ಮರ್ತ್ಯಲೋಕಕ್ಕೆ ಕಪ್ಪು ಕವಿತಲೇ ಪರಾಕ್ ।

೫೩ ೧೯೫೨ ಹುಟ್ಟಿದ ಕಂದ ಕಷ್ಟ ಪಟ್ಟು ಸುಖ ಪಟ್ಟಿತಲೇ ಪರಾಕ್ ।

೫೪ ೧೯೫೩ ಸಂತೃಷ್ಟಿಯಲೇ ಪರಾಕ್ ।

೫೫ ೧೯೫೪ ಮಳೆ ಬೆಳೆ ಸಂಪಲೇ ಪರಾಕ್ ।

೫೬ ೧೯೫೫ ಮುತ್ತು ಒಡೆದು ಚೂರಾಯಿತಲೇ ಪರಾಕ್ ।

೫೭ ೧೯೫೬ ಮುತ್ತಿನ ರಾಶಿ ದುಂಡುಗಾತಲೇ ಪರಾಕ್ ।

೫೮ ೧೯೫೭ ಆಕಾಶಕ್ಕೆ ಗುಂಡು ಬಿತ್ತಲೇ ಪರಾಕ್ ।

೫೯ ೧೯೫೮ ಭೂಲೋಕಕ್ಕೆ ಮಬ್ಬುಕವೀತಲೇ ಪರಾಕ್ ।

೬೦ ೧೯೫೯ ಕಲಕು ಮಲಕು ಆದೀತಲೇ ಪರಾಕ್ ।

೬೧ ೧೯೬೦ ಹುಟ್ಟಿದ ಕಂದ ಕಷ್ಟಪಟ್ಟು ಸುಖಪಡಿತಲೇ ಪರಾಕ್ ।

೬೨ ೧೯೬೧ ಸಂಕಷ್ಟ ನಿವಾರಣೆ ಆಯಿತಲೇ ಪರಾಕ್ ।

೬೩ ೧೯೬೨ ಮುತ್ತು ಮೂರು ಭಾಗ ಆದೀತಲೇ ಪರಾಕ್ ।

೬೪ ೧೯೬೩ ಮುತ್ತಿನ ಮಳೆ ಆದಿತಲೇ ಪರಾಕ್ ।

೬೫ ೧೯೬೪ ಸರಪಳಿ ಹರಿದು ಚೂರಾಯಿತಲೇ ಪರಾಕ್ ।

೬೬ ೧೯೬೫ ಸಣ್ಣದೊಂದು ದಿನ ಬಂತಲೇ ಪರಾಕ್ ।

೬೭ ೧೯೬೬ ಮುತ್ತಿನ ರಾಶಿ ಮಾಲಿ ಆಯಿತಲೇ ಪರಾಕ್ ।

೬೮ ೧೯೬೭ ಕಷ್ಟದೊಂದು ದಿನ ಬಂತಲೇ ಪರಾಕ್ ।

೬೯ ೧೯೬೮ ಮರ್ತ್ಯಕ್ಕೆ ಮಬ್ಬುಗವಿತಲೇ ಪರಾಕ್ ।

೭೦ ೧೯೬೯ ಮುತ್ತಿನ ರಾಶಿ ಒಡೆದು ಮಾಲಿ ಆತಲೇ ಪರಾಕ್ ।

೭೧ ೧೯೭೦ ಸಂಕಷ್ಟ ನಿವಾರಣೆ ಆಯಿತಲೇ ಪರಾಕ್ ।

೭೨ ೧೯೭೧ ಕಲಕು ಮಲಕು ಬಹು ಪರಾಕ್ ।

೭೩ ೧೯೭೨ ಹುಟ್ಟಿದ ಕಂದ ಕಷ್ಟಪಟ್ಟು ಸುಖಪಡಿತಲೇ ಪರಾಕ್ ।

೭೪ ೧೯೭೩ ಶಿಶುವಿಗೆ ಕಸಿವಾಲಯಿತಲೇ ಪರಾಕ್ ।

೭೫ ೧೯೭೪ ಆಕಾಶಕ್ಕೆ ಗುಂಡು ಬಿತ್ತಲೇ ಪರಾಕ್ ।

೭೬ ೧೯೭೫ ಮರ್ತ್ಯಕ್ಕೆ ಮಬ್ಬುಗವಿತಲೇ ಪರಾಕ್ ।

೭೭ ೧೯೭೬ ಮುತ್ತಿನ ಬೆಳೆ ಬಿತ್ತಲೇ ಪರಾಕ್ ।

೭೮ ೧೯೭೭ ಆಕಾಶಕ್ಕೆ ಶಿಡ್ಲು ಹೊಡಿತಲೇ ಪರಾಕ್ ।

೭೯ ೧೯೭೮ ಮುತ್ತಿನ ರಾಶಿ ಆತಲೇ ಪರಾಕ್ ।

೮೦ ೧೯೭೯ ಮರ್ತ್ಯಕ್ಕೆ ಮಬ್ಬುಗವಿತಲೇ ಪರಾಕ್ ।

೮೧ ೧೯೮೦ ಮುತ್ತಿನ ರಾಶಿ ದುಂಡಗಾತಲೇ ಪರಾಕ್ ।

೮೨ ೧೯೮೧ ಆಕಾಶಕ್ಕೆ ಶಿಡ್ಲು ಹೊಡಿತಲೇ ಪರಾಕ್ ।

೮೩ ೧೯೮೨ ಮರ್ತ್ಯಕ್ಕೆ ಮಬ್ಬುಗವಿತಲೇ ಪರಾಕ್ ।

೮೪ ೧೯೮೩ ಹುಟ್ಟಿದ ಕಂದ ಕಷ್ಟಪಟ್ಟು ಸುಖಪಡಿತಲೇ ಪರಾಕ್ ।

೮೫ ೧೯೮೪ ಇಬ್ಬನ್ನಿ ಕರಗಿತಲೇ ಪರಾಕ್ ।

೮೬ ೧೯೮೫ ಸಮನಿಧಿ ಸಂಪಲೇ ಪರಾಕ್ ।

೮೭ ೧೯೮೬ ಮುತ್ತಿನ ರಾಶಿ ದುಂಡುಗಾತಲೇ ಪರಾಕ್ ।

೮೮ ೧೯೮೭ ಕಲಕು ಮಲಕು ಬಹು ಪರಾಕ್ ।

೮೯ ೧೯೮೮ ಮರ್ತ್ಯಲೋಕಕ್ಕೆ ಮಬ್ಬುಗವಿತಲೇ ಪರಾಕ್ ।

೯೦ ೧೯೮೯ ಮರ್ತ್ಯಕ್ಕೆ ಮಬ್ಬುಗವಿತಲೇ ಪರಾಕ್ ।

೯೧ ೧೯೯೦ ಮುತ್ತಿನ ರಾಶಿ ದುಂಡಗಾತಲೇ ಪರಾಕ್ ।

೯೨ ೧೯೯೧ ಮುತ್ತು ಒಡೆದು ಮೂರು ಭಾಗ ಆದೀತಲೇ ಪರಾಕ್ ।

೯೩ ೧೯೯೨ ಆಕಾಶಕ್ಕೆ ಗುಂಡು ಬಿತ್ತಲೇ ಪರಾಕ್ ।

೯೪ ೧೯೯೩ ಹುಟ್ಟಿದ ಕೂಸಿನ ಮೇಲೆ ಬಂಗಾರದ ಗಿಣಿ ಕೂಡ್ರತಲೇ ಪರಾಕ್ ।

೯೫ ೧೯೯೪ ಆಕಾಶಕ್ಕೆ ಗುಂಡು ತೂರಿತಲೇ ಪರಾಕ್ ।

೯೬ ೧೯೯೫ ಆಕಾಶಕ್ಕೆ ಗುಂಡು ತೂರಿತಲೇ ಪರಾಕ್ ।

೯೭ ೧೯೯೬ ಸವನಿಧಿ ಸಂಪಲೇ ಪರಾಕ್ ।

೯೮ ೧೯೯೭ ಮುತ್ತಿನ ರಾಶಿ ದುಂಡುಗಾತಲೇ ಪರಾಕ್ ।

೯೯ ೧೯೯೮ ಮುತ್ತಿನ ರಾಶಿ ಮೂರು ಭಾಗ ಆದೀತಲೇ ಪರಾಕ್ ।

೧೦೦ ೧೯೯೯ ಮುತ್ತಿನ ರಾಶಿ ಕಲಕು ಮಲಕು ಆದೀತಲೇ ಪರಾಕ್ ।

೧೦೧ ೨೦೦೦ ಮುತ್ತಿನ ರಾಶಿ ಮೂರು ಭಾಗ ಆದೀತಲೇ ಪರಾಕ್ ।

೧೦೨ ೨೦೦೧ ಮುತ್ತಿನ ರಾಶಿ ಮಂಜು ಮುಸಿಗಿತಲೆ ಪರಾಕ್ ।

೧೦೩ ೨೦೦೨ ತುಂಬಿದ ಕೊಡದ ಮೇಲೆ ಬಂಗಾರದ ಗಿಣಿ ಕುಂತಿತಲೇ ಪರಾಕ್ ।

೧೦೪ ೨೦೦೩ ಬೆಳ್ಳಿಯ ತೊಟ್ಟಿಲು ದುಂಡಾತಲೇ ಪರಾಕ್ ।

೧೦೫ ೨೦೦೪ ಮುತ್ತಿನ ರಾಶಿ ಕಷ್ಟ ಪಟ್ಟು ಸುಖ ಪಟ್ಟಿತಲೇ ಪರಾಕ್ ।

೧೦೬ ೨೦೦೫ ಮುತ್ತಿನ ಕಂದ ಮಂಜು ಆಗೀತಲೇ ಪರಾಕ್ ।

೧೦೭ ೨೦೦೬ ತುಂಬಿದ ಕೊಡಕ್ಕೆ ಗುಂಡು ಬಿತ್ತಲೇ ಪರಾಕ್ ।

೧೦೮ ೨೦೦೭ ಅಂಬಲಿ ಹಳಸಿತು ಕಂಬಳಿ ಬೀಸಿತಲೇ ಪರಾಕ್ ।

೧೦೯ ೨೦೦೮ ಹುಟ್ಟಿದ ಕಂದ ಕಷ್ಟಪಟ್ಟೀತಲೇ ಪರಾಕ್ ।

* * *

# ಅನುಬಂಧ – ೨

## ನನ್ನ ಸಂಶೋಧನಾ ಕಾರ್ಯಕ್ಕೆ ಸಹಕಾರ ನೀಡಿದ ವಕ್ತೃಗಳು

೧. **ಡಾ. ಎಂ. ಎನ್. ವೆಂಕಟೇಶ್ :** ಮೈಲಾರದ ಜಾತ್ರೆಗಳು ಒಂದು ಪ್ರದರ್ಶನ ಅಧ್ಯಯನ ವಿಷಯವಾಗಿ ಮಹಾಪ್ರಬಂಧ ಮಂಡಿಸಿ ಡಾಕ್ಟರೇಟ್ ಪಡಿದಿದ್ದಾರೆ. ಪ್ರಸ್ತುತ ಕುಪ್ಪಂನಲ್ಲಿರುವ ದ್ರಾವಿಡ ವಿಶ್ವವಿದ್ಯಾಲಯದಲ್ಲಿ ಜನಪದ ವಿಷಯದ ಪ್ರವಾಚಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

೨. **ಡಾ. ರಾಘವೇಂದ್ರ ಕುಲಕರ್ಣಿ :** ನನ್ನ ಸೋದರ ಸಂಬಂಧಿಗಳು. ಬೆಂಗಳೂರಿನಲ್ಲಿರುವ ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ ಪ್ರವಾಚಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಪ್ರಾಚೀನ ಕರ್ನಾಟಕದ ದೇವಾಲಯ ವಾಸ್ತು ವಿಷಯವಾಗಿ ಸಂಶೋಧನೆ ಮಾಡಿ ಡಾಕ್ಟರೇಟ್ ಪಡೆದಿದ್ದಾರೆ.

೩. **ಶ್ರೀ ಶ್ರೀ ವೆಂಕಪ್ಪಯ್ಯ ಒಡೆಯರು :** ಮೈಲಾರದ ದೇವಸ್ಥಾನದ ಪ್ರಮುಖ ಧರ್ಮದರ್ಶಿಗಳು ಹಾಗೂ ಒಡೆಯರು. ಮೈಲಾರದ ವಿಚಾರವಾಗಿ ಎಲ್ಲ ವಿಷಯವನ್ನು ಕೂಲಂಕಷವಾಗಿ ವಿವರಿಸಿ ನನ್ನ ಅಧ್ಯಯನಕ್ಕೆ ಬೆನ್ನೆಲುಬಾಗಿ ನಿಂತು ಹಾರೈಸಿದ ಮಹನೀಯರು.

೪. **ಶ್ರೀ ಶ್ರೀ ಆನಂದಗಿರಿ ಒಡೆಯರು :** ಮೈಲಾರದ ಧರ್ಮದರ್ಶಿಗಳ ಸೋದರ ಸಂಬಂಧಿಗಳು. ನಾನು ಮೊದಲ ಬಾರಿ ಮೈಲಾರ ಕ್ಷೇತ್ರವನ್ನು ಸಂದರ್ಶಿಸಿದಾಗ ಮುಖ್ಯ ಧರ್ಮದರ್ಶಿಗಳು ಊರಲ್ಲಿರಲಿಲ್ಲ. ಆ ಸಂದರ್ಭದಲ್ಲಿ ಆತ್ಮೀಯವಾಗಿ ಬರಮಾಡಿಕೊಂಡು ಮಾರ್ಗದರ್ಶನ ಮಾಡಿದ ಮಹನೀಯರು.

೫. **ಶ್ರೀ ಶ್ರೀ ತಮ್ಮಯ್ಯ ಒಡೆಯರು :** ಮೈಲಾರದ ಧರ್ಮದರ್ಶಿ ಶ್ರೀ ಶ್ರೀ ವೆಂಕಪ್ಪಯ್ಯ ಒಡೆಯರ ಸೋದರ ಮಾವನವರು. ನಾನು ಪ್ರತಿಸಾರಿ ಮೈಲಾರಕ್ಕೆ ಹೋದಾಗಲೂ ಆತ್ಮೀಯತೆಯಿಂದ ಬರಮಾಡಿಕೊಂಡು ಬೇಕಾದ ಎಲ್ಲ ಮಾಹಿತಿಯನ್ನು ನೀಡಿ ಸಹಕರಿಸಿದ ಮಹನೀಯರು.

೬. **ಚೌಡದಾನಪುರದ ವಿರಕ್ತ ಮಠದ ಸ್ವಾಮಿಗಳು :** ಕರ್ನಾಟಕ ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿದ್ದ ಶ್ರೀ ಸದಾಶಿವ ಒಡೆಯರ ಅವರ ಮೊಮ್ಮಕ್ಕಳು. ಮೈಲಾರ

ವಿಚಾರವಾಗಿ ತಮಗೆ ತಿಳಿದ ಕೆಲ ಮಾಹಿತಿಗಳನ್ನು ನನ್ನೊಂದಿಗೆ ಹಂಚಿಕೊಂಡವರು ಹಾಗೂ (ಸದ್ಯಕ್ಕೆ ಎಲ್ಲಿಯೂ ಸಿಗದ) ಪ್ರಮುಖ ಶಾಸನಗಳ ಸೂಚಿಯುನ್ನು ಒದಗಿಸಿದವರು.

೧೦. **ಮಲ್ಲಪ್ಪ ಹಾಗೂ ಮಲ್ಲಯ್ಯ :** ಮೋರಗೆರೆಯಲ್ಲಿರುವ ಮೈಲಾರನ ಗೊರವರು ಹಾಗೂ ಭಕ್ತರು. ತಮ್ಮ ಸಂಪ್ರದಾಯದ ಕುರಿತಾಗಿ ಮಾಹಿತಿ ನೀಡಿದ ವಿಶೇಷ ವಕ್ತೃಗಳು.

೧೧. **ಶ್ರೀ ಪ್ರಕಾಶ :** ಪ್ರಧಾನ ಅರ್ಚಕರು, ದೇವರಗುಡ್ಡ. ಇವರು ದೇವರಗುಡ್ಡದ ಪ್ರತಿಯೊಂದು ಆಚರಣೆಗಳ ಕುರಿತಾದ ಮಾಹಿತಿ ನೀಡಿ ಸಹಕರಿಸಿದ್ದಾರೆ. ಅಲ್ಲದೇ ಒಬ್ಬ ಮಿತ್ರರಾಗಿ ನನ್ನ ಹಿತೈಷಿಗಳ ಬಳಗಕ್ಕೆ ಸೇರಿದವರು.

೧೨. **ಶ್ರೀ ಡಿ. ಎನ್. ಗುತ್ತಲ್ :** ನಮ್ಮ ಕಾಲೇಜಿನಲ್ಲಿ ನನ್ನ ಜೊತೆಗೆ ಕಾರ್ಯ ನಿರ್ವಹಿಸುತ್ತಿರುವ ಉಪನ್ಯಾಸಕರು. ಮೈಲಾರನ ಭಕ್ತರು. ಅನೇಕ ವಿಷಯಗಳನ್ನು ಕುರಿತು ಮಾಹಿತಿ ನೀಡಿದವರು. ಅಲ್ಲದೇ ತಮ್ಮ ತಾಯಿ ಹಾಗೂ ಅಣ್ಣ ನವರಿಂದ ಮಾಹಿತಿ ಸಂಗ್ರಹಿಸಿ ನೀಡಿದವರು.

೧೩. **ಶ್ರೀ ಹಾಲಪ್ಪ :** ಶಿಕ್ಷಕರು, ಚಿಕ್ಕಬಳ್ಳಾಪುರ. ಮೈಲಾರದ ಭಕ್ತರು ಹಾಗೂ ಆಸಕ್ತ ಸಂಶೋಧಕರು. ಮೈಲಾರದ ಭಕ್ತರ ಆಚಾರ ವಿಚಾರಗಳನ್ನು ಕುರಿತಾಗಿ ತಿಳಿಸಿದವರು.

೧೪. **ಶ್ರೀ ಮಂಜುನಾಥ :** ಕೆ. ಎ. ಎಸ್. ಅಧಿಕಾರಿಗಳು. ಮೈಲಾರ ಆಚರಣೆಗಳಿಗೆ ಸಂಬಂಧಿಸಿದ ಸುಮಾರು ಮುನ್ನೂರಕ್ಕೂ ಹೆಚ್ಚು ಛಾಯಾಚಿತ್ರಗಳನ್ನು ತಮ್ಮ ಡಿಜಿಟಲ್ ಕ್ಯಾಮಾರದಲ್ಲಿ ಸೆರೆಹಿಡಿದು ನನಗೆ ನೀಡಿ ಅಪೂರ್ವವಾದ ಸಹಕಾರ ನೀಡಿದವರು.

೧೫. **ಡಾ॥ ರಾಜಗೋಪಾಲ್ :** ವೃತ್ತಿಯಿಂದ ವೈದ್ಯರು. ಮೈಲಾರದ ಗಣಾಚಾರಿಗಳೂ ಆಗಿರುವ ಇವರು ದೂರವಾಣಿಯ ಮೂಲಕ ಪರಿಚಯವಾದರೂ ಎಷ್ಟೋ ವರ್ಷಗಳ ಸಂಪರ್ಕವಿದ್ದವರಂತೆ ಅತ್ಯಂತ ಆತ್ಮೀಯತೆಯನ್ನು ವ್ಯಕ್ತಪಡಿಸಿ ತಮಗೆ ತಿಳಿದ

ಮಾಹಿತಿಯ ಜೊತೆಗೆ ತಮ್ಮ ಸಂಪರ್ಕದಲ್ಲಿರುವವರಿಂದ ಸಹ ಮಾಹಿತಿಯನ್ನು ನೀಡಿಸಿದವರು.

೧೬. **ಶ್ರೀ ಕೃಷ್ಣಪ್ಪ :** ನಿವೃತ್ತ ಹಿಂದೀ ಪಂಡಿತರು. "ಶ್ರೀಮೈಲಾರಲಿಂಗೇಶ್ವರ ದಿವ್ಯ ಚರಿತಾಮೃತ" ಪುಸ್ತಕದ ಲೇಖಕರು. ಅಧ್ಯಯನಶೀಲರಾಗಿರುವ ಇವರು ಅನೇಕ ಗ್ರಂಥಗಳ ಕುರಿತಾಗಿ ಮಾಹಿತಿ ನೀಡಿ ಪರಿಶೀಲನೆಗೆ ಮಾರ್ಗದರ್ಶನ ಮಾಡಿದವರು.

ಮೇಲ್ಕಂಡ ಎಲ್ಲ ಮಹನೀಯರ ಸಹಾಯ ಸಹಕಾರದಿಂದ ಈ ಮಹಾಪ್ರಬಂಧ ಇಷ್ಟು ವ್ಯವಸ್ಥಿತವಾಗಿ ಮೂಡಿ ಬಂದಿದೆ. ಇದಕ್ಕೆ ಕಾರಣಕರ್ತರಾದ ಈ ಎಲ್ಲ ಮಹನೀಯರಿಗೂ ನಾನು ಕೃತಜ್ಞನಾಗಿದ್ದೇನೆ.

* * *




ಕರ್ನಾಟಕದ ಮೈಲಾರ ಕ್ಷೇತ್ರಗಳ ನಕ್ಷೆ




ದಕ್ಷಿಣ ಭಾರತದ ಪ್ರಮುಖ ಮೈಲಾರ ಕ್ಷೇತ್ರಗಳ ನಕ್ಷೆ

# ಅನುಬಂಧ ೪ : ಛಾಯಾಚಿತ್ರಗಳು



* * *



೧. ಶ್ರೀ ಮೈಲಾರಲಿಂಗ (ಉದ್ಭವ ಲಿಂಗ)



೨. ಶ್ರೀ ಮೈಲಾರಲಿಂಗ (ಮೃಣ್ಮಯ ಮೂರ್ತಿ)



೩. ಶ್ರೀ ವ್ಯೆಲಾರಲಿಂಗ (ಸಾಮಾನ್ಯವಾಗಿ ಎಲ್ಲ ಕಡೆ ಕಂಡು ಬರುವ ಪ್ರತಿರೂಪ)



೪. ಭಂಡಾರವನ್ನು ಸಿದ್ಧಪಡಿಸಿತ್ತಿರುವುದು.



೫. ಶ್ರೀ ವೈಲಾರಲಿಂಗನಿಗೆ ಭಂಡಾರವನ್ನು ಏರಿಸುತ್ತಿರುವುದು



೬. ಭಂಡಾರದಿಂದ ಅರ್ಚಿತ ವೈಲಾರಲಿಂಗನ ಉದ್ಭವಲಿಂಗ



೭. ಗುಪ್ತಮೌನಸವಾರಿಗೆ ಹೊರಟ ಒಡೆಯರು



೮. ಮೈಲಾರಲಿಂಗನ ಉತ್ಸವ (ಕೆಳಗೆ - ಮಣಿಕಾಸುರನ ಮುಖವಾಡ)



೯. ಕಾರಣಿಕಕ್ಕೆ (ಡೆಂಕಣಮರಡಿಗೆ) ಹೊರಟ ಒಡೆಯರು



೧೦. ಹೊರೆ ಹೊರಿಸಲು ಸಿದ್ಧತೆ



೧೧. ಕಾರಣಿಕದ ಬಿಲ್ಲು



೧೨. ಕಾರಣಿಕದ ಬಿಲ್ಲನ್ನೇರಿ
ನುಡಿಯುತ್ತಿರುವ ಗೊರವ



೧೩. ದೋಣಿ ತುಂಬಿಸುವುದು



೧೪. ಪವಾಡದ ವಸ್ತುಗಳು (ಬಗನಿಗೂಟ, ಶಸ್ತ್ರ, ಮಿಣಿ ಮೊದಲಾದವು)



೧೫. ಕೈ ಪವಾಡ (ಕೈಯ್ಯಲ್ಲಿ ಕಕ್ಕಡಾರತಿ ಚುಚ್ಚಿಕೊಂಡು ಬೆಳಗುವುದು)



೧೬. ಸರಪಳಿ ಪವಾಡ (ಸರಪಳಿಯನ್ನು ಹರಿಯುತ್ತಿರುವುದು)



೧೭. ಕಾಲು ಪವಾಡ (ಕಾಲಿನಲ್ಲಿ ಬಗನಿಗೂಟವನ್ನು ಬಡಿದುಕೊಳ್ಳುವುದು)



೧೮. ಕಾಲು ಪವಾಡ (ಗಾಯದಲ್ಲಿ ಮಿಣೆಯನ್ನು ಹಾಯಿಸಿಕೊಳ್ಳುವುದು)



೧೯. ಶಸ್ತ್ರ ಹಾಕಿಕೊಂಡ ಗೊರವಮ್ಮ



೨೦. ಕಂಚಾವೀರರು




೨೧. ಸಪತ್ನಿಕರಕಾಗಿ ಸಿಂಹಾಸನವೇರಿದ ಒಡೆಯರು



೨೨. ಭಕ್ತರು ಶ್ರೀಮೈಲಾರಲಿಂಗನಿಗೆ ಅರ್ಪಿಸಿದ ಪಾದುಕೆಗಳು



೨೩. ತನ್ನ ಮುದ್ರೆಯೊಂದಿಗೆ
ಇರುವ ಗೊರವಪ್ಪ



೨೪. ತನ್ನ ಮುದ್ರೆಯೊಂದಿಗೆಇರುವ ಗೊರವಮ್ಮ



೨೫. ಸಾಮಾನ್ಯವಾಗಿ ಭಕ್ತರು ತಮ್ಮ ಮನೆಗಳಲ್ಲಿ ಇಟ್ಟುಕೊಳ್ಳುವ
ಮೈಲಾರಲಿಂಗನ ಮೂರ್ತಿ



೨೬. ಮದ್ದಲೆ ಗೊರವ



೨೭. ಪೂಜೆಗಾಗಿ ಸಿದ್ಧಪಡಿಸಿದ ದೀವಟಿಗೆಗಳು



೨೮. ದೀವಟಿಗೆಗಳೊಂದಿಗೆ ಗಂಗಾ ಪೂಜೆಗೆ ಹೊರಟವರು



೨೯. ಗಂಗಾ ಪೂಜೆ



೩೦. ಗದ್ದುಗೆಯ ಮೇಲೆ ಇಟ್ಟ ಮೈಲಾರಲಿಂಗನ ವಿಗ್ರಹ

# ಅನುಬಂಧ – ೫

## ಆಕರ ಗ್ರಂಥಸೂಚಿ


೧. ಅಪರ್ಣಾ ದಿವೇಕರ್ (ಮರಾಠಿ ಮೂಲ : ರಾಜಕುಮಾರ ಲೋಢಾ)
ದ್ವಾದಶ ಖಂಡೋಬಾ ದರ್ಶನ
ಅನುಮೋಲ ಪ್ರಕಾಶನ
ಪೂನಾ – ೦೨
೨೦೦೩

೨. ಅರ್ಜುನ ಗೊಳಸಂಗಿ (ಡಾ.)
ಡೊಳ್ಳಿನ ಪದಗಳು
ಉಪನ್ಯಾಸ ಮಾಲೆ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೧೯೯೮

೩. ಇಂದ್ರೇಶ್ ಎಂ.
ಜನಪದ ಆಚರಣೆಗಳು – ಒಂದು ಸಾಂಸ್ಕೃತಿಕ ಅಧ್ಯಯನ
ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
ಪಿಎಚ್. ಡಿ ಸಂಶೋಧನ ಪ್ರಬಂಧ
೨೦೦೮

೪. ಕಲಬುರ್ಗಿ ಎಂ. ಎಂ. (ಡಾ.) (ಪ್ರಧಾನ ಸಂಪಾದಕರು)
ಜಾನಪದ ದರ್ಶನ – ೧೧,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೧೯೮೭

೫. ಕುಲಕರ್ಣಿ ಬಿ. ಎಸ್.
A journal of the Karnataka University Humanities. Val - 8
ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ
೧೯೬೪

೬. ಕೃಷ್ಣಪ್ಪ
ಶ್ರೀ ಮೈಲಾರಲಿಂಗೇಶ್ವರ ದಿವ್ಯ ಚರಿತಾಮೃತ
ಶ್ರೀಶ್ರೀವೆಂಕಪ್ಪಯ್ಯ ಒಡೆಯರ್ ಮಹಾಸ್ವಾಮಿಗಳು
ಶ್ರೀಮೈಲಾರ ಕ್ಷೇತ್ರ
೨೦೦೮

೭. ಕೃಷ್ಣಮೂರ್ತಿ ಕರ್ಪೂರ — **ದಕ್ಷಿಣ ಕಾಶಿ ಮೈಲಾರ**
ಕೆ. ಕೆ. ಡಿ. ಕೆ. ಸಂಘ
ಪ್ರೇಮಪುರ, ಖಾನಾಪುರ, ಮೈಲಾರ
೧೯೭೬

೮. ಕೃಷ್ಣಸ್ವಾಮಿ ಕ. ರಾ. — **ಮೈಲಾರಲಿಂಗ ಈರಬಡಪ್ಪ**
ಜನಪದ ಅಕಾದೆಮಿ, ಕಾರ್ಡ್ ರೋಡ್
ವಿಜಯನಗರ, ಬೆಂಗಳೂರು – ೪೦
೧೯೬೩

೯. ಚಂದ್ರಶೇಖರ ಕಂಬಾರ — **ಜಾನಪದ ವಿಶ್ವಕೋಶ**
ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ, ಬೆಂಗಳೂರು
೧೯೮೦

೧೦. ಚಕ್ಕರೆ ಶಿವಶಂಕರ್ — **ಮೈಲಾರಲಿಂಗನ ಕಾವ್ಯ (ಸಂ)**
ಕರ್ನಾಟಕ ಜಾನಪದ ಟ್ರಸ್ಟ್
ಬೆಂಗಳೂರು
೧೯೮೯

೧೧. ಚನ್ನಬಸಪ್ಪ ಗೊ. ರು. — **ಕರ್ನಾಟಕ ಜಾನಪದಕಲೆಗಳ ಕೋಶ**
ವಿದ್ಯಾರಣ್ಯ, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾನಿಲಯ, ಹಂಪಿ
೧೯೯೮.

೧೨. ಚಿದಾನಂದ ಮೂರ್ತಿ ಎಂ. — **ಸಂಶೋಧನ ತರಂಗ – ೨**
ಬೆಂಗಳೂರು ವಿಶ್ವವಿದ್ಯಾಲಯ,
ಬೆಂಗಳೂರು
೧೯೯೦

೧೩. ಚೆನ್ನಣ್ಣ ವಾಲೀಕಾರ್ (ಡಾ.) (ಪ್ರಧಾನ ಸಂಪಾದಕರು) — **ಹೈದರಾಬಾದ ಕರ್ನಾಟಕದ ಗ್ರಾಮದೇವತೆಗಳು**
ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ
ಗುಲಬರ್ಗಾ
೧೯೯೮

೧೪. ಚೇತನ್ ಕುಮಾರ್ ಆರ್.
ಜನಪದ ಜಗತ್ತು
(ಸಂಪುಟ – ೧೩, ಸಂಚಿಕೆ – ೩)
ಕರ್ನಾಟಕ ಜಾನಪದ ಟ್ರಸ್ಟ್
ಬೆಂಗಳೂರು
೧೯೮೯

೧೫. ಜವರೇಗೌಡ ದೇ.
ಜನಪದ ಗೀತಾಂಜಲಿ
ಸಾಹಿತ್ಯ ಅಕ್ಯಾಡಮಿ,
ರವೀಂದ್ರ ಭವನ, ೩೫, ಫಿರೋಜ ಶಾ ರಸ್ತೆ,
ನವದೆಹಲಿ – ೦೧
೧೯೯೦

೧೬. ಜೋಶಿ ಶಂ. ಬಾ.
ಹಾಲುಮತ ದರ್ಶನ
ಪುಸ್ತಕ ಪ್ರಾಧಿಕಾರ,
ಕನ್ನಡ ಭವನ, ಜೆ. ಸಿ. ರಸ್ತೆ,
ಬೆಂಗಳೂರು.
೧೯೮೨

೧೭. ನಂದಿಮಠ ಎಸ್. ಸಿ.
(ಪ್ರಧಾನ ಸಂಪಾದಕರು)
Choudayyadanapura -
A monograph
ಕರ್ನಾಟಕ ವಿಶ್ವವಿದ್ಯಾನಿಲಯ,
ಧಾರವಾಡ
೧೯೭೩

೧೮. ನಾಗೇಗೌಡ ಎಚ್. ಎಲ್.
(ಪ್ರಧಾನ ಸಂಪಾದಕರು)
ಕನ್ನಡ ಜಾನಪದ ಕೋಶ
ಕರ್ನಾಟಕ ಜಾನಪದ ಪರಿಷತ್ತು
ಬೆಂಗಳೂರು – ೨೦
೧೯೭೮

೧೯. ನೇಗಿನಹಾಳ ಎಂ. ಬಿ. (ಡಾ.)
ಮೈಲಾರಲಿಂಗ ಖಂಡೋಬಾ
ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾನಿಲಯ,
ಧಾರವಾಡ
೧೯೯೨

ಮೈಲಾರಲಿಂಗನ ಕಾವ್ಯ
ಕರ್ನಾಟಕ ಸಾಹಿತ್ಯ ಅಕಾದೆಮಿ
ಬೆಂಗಳೂರು
೧೯೯೭

ಮೈಲಾರಲಿಂಗನ ಪದಗಳು
ಸಿ. ಎಂ. ನೇಗಿನಹಾಳ,
ಬೆಳಗಾವಿ
೧೯೮೩

ಮೈಲಾರ ದೇವರ ದಿವ್ಯ ಕ್ಷೇತ್ರಗಳು
ಸಿ. ಎಂ. ನೇಗಿನಹಾಳ,
ಬೆಳಗಾವಿ
೧೯೮೮

ಮೈಲಾರಲಿಂಗ ಮತ್ತು ಪರಿವಾರ ದೇವತೆಗಳು
ಸಿ. ಎಂ. ನೇಗಿನಹಾಳ,
ಬೆಳಗಾವಿ
೧೯೯೩

೨೦. ಪರಮಶಿವಯ್ಯ ಜಿ. ಶಂ. (ಡಾ,) — ಮೈಲಾರಲಿಂಗನ ಗೊರವರು
ಐ. ಬಿ. ಎಚ್. ಪ್ರಕಾಶನ
ಬೆಂಗಳೂರು
೧೯೮೧

ಮೈಲಾರಲಿಂಗ
ಐ. ಬಿ. ಎಚ್. ಪ್ರಕಾಶನ
ಬೆಂಗಳೂರು
೧೯೮೪

೨೧. ಪಾಂಡುರಂಗ ದೇಸಾಯಿ — A journal of the Karnataka University Humanities. Val - 8
ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ
೧೯೫೯

೨೨. ಪುರುಷೋತ್ತಮ ಬಿಳಿಮಲೆ — **ಕೂಡುಕಟ್ಟು**
ಆನಂದಕಂದ ಗ್ರಂಥಮಾಲೆ,
ಮಲ್ಲಾಡಿಹಳ್ಳಿ,
೧೯೯೭

೨೩. ಪ್ರಧಾನಪ್ಪ ಬಾ. ಹನುಮಣ್ಣನವರ್ — **ಶ್ರೀ ಮೈಲಾರಲಿಂಗೇಶ್ವರ ಒಡಪುಗಳು**
ಮೈಲಾರೇಶ್ವರ ಪ್ರಕಾಶನ
ಕೊಂಕಣಕುರಹಟ್ಟಿ
೧೯೯೬

೨೪. ಫರ್ಡಿನೆಂಡ್ ಕಿಟಲ್ — **ಕಿಟಲ್ ಕನ್ನಡ ಕೋಶ**

೨೫. ಬಸವರಾಜ ಪೋಲೀಸಪಾಟೀಲ (ಡಾ.) — **ಹೈದರಾಬಾದ ಕರ್ನಾಟಕದ ಜಾನಪದ ಸಾಹಿತ್ಯ**
ಅಮರ ಪ್ರಕಾಶನ, ಗುಲ್ಬರ್ಗಾ
೨೦೦೧

೨೬. ಬೋರಲಿಂಗಯ್ಯ ಹಿ. ಚಿ. (ಡಾ.) — **ಕರ್ನಾಟಕ ಜಾನಪದ ಕಲೆಗಳ ಕೋಶ**
ವಿದ್ಯಾರಣ್ಯ, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾನಿಲಯ, ಹಂಪಿ
೧೯೯೬.

**ಬುಡಕಟ್ಟು ಅಧ್ಯಯನ**
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,
ವಿದ್ಯಾರಣ್ಯ, ಹಂಪಿ
೨೦೦೩

೨೭. ಮಂಜುನಾಥ ಬೇವಿನಕಟ್ಟಿ (ಡಾ.) — **ಮೈಲಾರಲಿಂಗನ ಕಾವ್ಯ (ಸಂ)**
ಪ್ರಸಾರಾಂಗ, ವಿದ್ಯಾರಣ್ಯ,
ಕನ್ನಡವಿಶ್ವವಿದ್ಯಾಲಯ, ಹಂಪಿ
೧೯೯೯

**ಸಾಂಸ್ಕೃತಿಕ ಪದಕೋಶ (ಸಂ)**
ಪ್ರಸಾರಾಂಗ, ವಿದ್ಯಾರಣ್ಯ,
ಕನ್ನಡವಿಶ್ವವಿದ್ಯಾಲಯ, ಹಂಪಿ
೨೦೦೦

೨೮. ರಾಮಕೃಷ್ಣ ಮರಾಠೆ (ಡಾ.) (ಮರಾಠಿ ಮೂಲ :ರಾ. ಚಿಂ. ಢೇರೆ)
**ಶ್ರೀ ಖಂಡೋಬಾ**
ಸಿ. ವಿ. ಜಿ. ಪಬ್ಲಿಕೇಶನ್ಸ್
ಬೆಂಗಳೂರು
೨೦೦೩

೨೯. ಲಿಂಗಯ್ಯ ಡಿ.
**ಬೋರೆದೇವರು**
ದಿನಕರ ಪ್ರಕಾಶನ,
ಬೆಂಗಳೂರು – ೮೫
೧೯೭೬

**ಕರ್ನಾಟಕದ ಗ್ರಾಮದೇವತೆಗಳು**
ಐ. ಬಿ. ಎಚ್. ಪ್ರಕಾಶನ.
ಬೆಂಗಳೂರು – ೧
೧೯೮೪

**ಜಾನಪದ ಶೋಧನ**
ದಿನಕರ ಪ್ರಕಾಶನ,
ಬೆಂಗಳೂರು – ೮೫
೨೦೦೧

**ಜಾನಪದ ಸ್ವರೂಪ ಮತ್ತು ಸ್ವರೂಪ**
**(ಡಾ. ಕೆ. ಆರ್. ಸಂಧ್ಯಾರೆಡ್ಡಿಯವರೊಡನೆ)**
ಕನ್ನಡ ಸಾಹಿತ್ಯ ಪರಿಷತ್ತು,
ಪಂಪ ಮಹಾಕವಿ ರಸ್ತೆ,
ಚಾಮರಾಜಪೇಟೆ, ಬೆಂಗಳೂರು – ೧೮
೧೯೯೭

೩೦. ವಿರೂಪಾಕ್ಷ ಕುಲಕರ್ಣಿ (ಆಂಗ್ಲಮೂಲ : ಡೆವಿಡ್ ಎನ್‌ಲಾರೆಂಜೆನ್)
**ಕಾಪಾಲಿಕರು ಮತ್ತು ಕಾಳಾಮುಖರು**
(ಕಣ್ಮರೆಯಾದ ಎರಡು ಶೈವ ಸಂಪ್ರದಾಯಗಳು)
ಕನ್ನಡ ಪುಸ್ತಕ ಪ್ರಾಧಿಕಾರ,
ಕನ್ನಡ ಭವನ, ಬೆಂಗಳೂರು – ೦೨
೧೯೯೦

೩೧. ವಿಲ್ಯಂ ಮಾಡ್ತ (ಡಾ.) (ಪ್ರಧಾನ ಸಂಪಾದಕರು)
ಜಾನಪದ ಸಾಹಿತ್ಯ ದರ್ಶನ – ೧೭
ಕನ್ನಡ ಅಧ್ಯಯನ ಪೀಠ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೧೯೯೩

೩೨. ವೃಷಭೇಂದ್ರಸ್ವಾಮಿ ಎಸ್. ಎಂ. (ಡಾ.) (ಪ್ರಧಾನ ಸಂಪಾದಕರು)
ಜಾನಪದ ಸಾಹಿತ್ಯ ದರ್ಶನ – ೧೦
ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ
೧೯೮೭

ಜಾನಪದ ಸಾಹಿತ್ಯ ದರ್ಶನ – ೧೫
ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ
೧೯೯೪

೩೩. ವೆಂಕಟೇಶ್ ಎಂ. (ಡಾ.)
ಮೈಲಾರದ ಜಾತ್ರೆಗಳು
ಅಭಿ ಆದರ್ಶ ಪ್ರಕಾಶನ
ಭದ್ರಾವತಿ – ೦೨
೧೯೯೮

೩೪. ಶರ್ಮಾ ಕೆ. ವಿ. (ಸಂ)
ಬ್ರಹ್ಮಾಂಡ ಪುರಾಣ (ಸಂಸ್ಕೃತ)
ರಾಷ್ಟ್ರೀಯ ಸಂಸ್ಕೃತ ಸಂಸ್ಥಾನ
ಜನಕಪುರಿ, ನವದೆಹಲಿ
೨೦೦೨

೩೫. ಶೇಖರ್ ಪೂಜಾರ
ಮೈಲಾರಲಿಂಗನ ಗೊಗ್ಗಯ್ಯಗಳು
ಮಾನವಿಕ ಭಾರತಿ,
ಕರ್ನಾಟಕ ವಿಶ್ವವಿದ್ಯಾನಿಲಯ,
ಧಾರವಾಡ
೧೯೮೬

೩೬. ಶ್ರೀನಿವಾಸ ರಿತ್ತಿ
ಮೈಲಾರ ದೇವರು
ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾನಿಲಯ
ಧಾರವಾಡ
೧೯೭೦

೩೭. ಸಿದ್ಧಲಿಂಗಯ್ಯ (ಡಾ.) ಗ್ರಾಮದೇವತೆಗಳು
ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು
೧೯೯೭

೩೮. ಸುಂಕಾಪೂರ್ ಎಂ. ಎಸ್. (ಪ್ರಧಾನ ಸಂಪಾದಕರು) ಜೀವನ ಜೋಕಾಲಿ
ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾನಿಲಯ,
ಧಾರವಾಡ
೧೯೫೮

ಜಾನಪದ ದರ್ಶನ – ೦೬
ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ
೧೯೮೦

೩೯. ಸೋಮಶೇಖರ ಇಮ್ರಾಪೂರ (ಡಾ.) (ಪ್ರಧಾನ ಸಂಪಾದಕರು) ಜಾನಪದ ಸಾಹಿತ್ಯ ದರ್ಶನ – ೧೩
ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ
೧೯೯೪

ಜಾನಪದ ದರ್ಶನ – ೨೪
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೨೦೦೧

೪೦. ಹನುಮಾಕ್ಷಿ ಗೋಗಿ, ಡಾ. ವಸುಂಧರಾ ಫಿಲಿಯೋಜಾ ಧಾರವಾಡ ಜಿಲ್ಲೆಯ ಕಾಳಾಮುಖ ಮತ್ತು ಪಾಶುಪತ ದೇವಾಲಯಗಳು
ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ
ಕನ್ನಡ ಭವನ, ಬೆಂಗಳೂರು – ೦೨
೨೦೦೭

೪೧. ಹನುಮಂತಯ್ಯ ವಿ. ಆರ್. ಭಾರತ ದೇಶದ ಕುರುಬರ ಚರಿತ್ರೆ
ಬೆಂಗಳೂರು
೧೯೫೮

೪೨. ಹಿರೇಮಠ ಎಸ್. ಎಸ್. ಜಾತ್ರೆಗಳು
ಸಮತಾ ಪ್ರಕಾಶನ
ಹೊಸಪೇಟೆ.
೧೯೯೩

ಜನಪದ ಸಮಾಜ ಸಂಸ್ಕೃತಿ
ಸೂರ್ಯ ಪ್ರಕಾಶನ,
ಮಲ್ಲಾಡಿಹಳ್ಳಿ.
೨೦೦೫

೪೩. ಹೊಸಕೆರೆ ಚಿದಂಬರಯ್ಯ ಮೈಲಾರ ಮಹಾತ್ಮೆ
(ಷಟ್ಪದಿ ಕಾವ್ಯ – ಟೀಕೆ)

* * *

